ಕೆ ಎಸ್ ಮಧುಸೂದನ

# ಹಳತು ಹೊನ್ನು





ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬೆಂಗಳೂರು - ೫೬೦ ೦೧೯

ಆಚಾರ್ಯ 'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಮುಖ್ಯರು. ಅವರು ಅದನ್ನು ೧೬ ಮೇ ೧೯೭೯ರಲ್ಲಿ ಸ್ಥಾಪಿಸಿದರು. ಈ ಪ್ರತಿಷ್ಠಾನವನ್ನು ರಾಷ್ಟ್ರಕವಿ ಕುವೆಂಪು ಅವರು ೧೦ ಮಾರ್ಚ್ ೧೯೮೦ರಂದು ಉದ್ಘಾಟಿಸಿದರು. ಕರ್ನಾಟಕ ಸರ್ಕಾರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಸಾರ್ವಜನಿಕರ ಸಹಕಾರ, ಸಹಾಯಗಳಿಂದ ಬೆಂಗಳೂರಿನ ನರಸಿಂಹರಾಜಾ ಕಾಲೋನಿಯಲ್ಲಿ 'ಬಿ.ಎಂ.ಶ್ರೀ ಕಲಾಭವನ' ನಿರ್ಮಾಣವಾಗಿದೆ. ಪ್ರತಿಷ್ಠಾನದ 'ಪ್ರೊ॥ ಎಂ. ವಿ. ಸೀತಾರಾಮಯ್ಯ ಸಂಶೋಧನಾ ಕೇಂದ್ರ'ದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಪಿಎಚ್. ಡಿ ಹಾಗೂ ಎಂ. ಫಿಲ್ ತರಗತಿಗಳು ನಡೆಯುತ್ತಿವೆ. ಪ್ರತಿಷ್ಠಾನ ಅಪರೂಪದ ಹಸ್ತಪ್ರತಿ ಭಂಡಾರವನ್ನು ಹಾಗೂ ಉತ್ತಮ ಗ್ರಂಥಭಂಡಾರವನ್ನು ಹೊಂದಿದೆ. ಹಸ್ತಪ್ರತಿ ವಿಜ್ಞಾನ ಮತ್ತು ಹಳಗನ್ನಡ ಅಧ್ಯಯನ ತರಗತಿಗಳನ್ನು ಪ್ರತಿಷ್ಠಾನ ನಡೆಸುತ್ತಿದೆ; ತ್ರೈಮಾಸಿಕ 'ವಾರ್ತಾಪತ್ರ'ವನ್ನು ಮತ್ತು ದ್ವೈವಾರ್ಷಿಕ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ' ವನ್ನು ಹಾಗೂ ಕಾಲಕಾಲಕ್ಕೆ ಉತ್ತಮ ಗ್ರಂಥಗಳನ್ನು ಪ್ರಕಟಿಸುತ್ತಿದೆ. ನಿರಂತರವಾಗಿ ಸಂಶೋಧನಾತ್ಮಕ ಮತ್ತು ಸಾಂಸ್ಕೃತಿಕ ಕಾರ್ಯಗಳನ್ನು ಪ್ರತಿಷ್ಠಾನ ನಡೆಸಿಕೊಂಡು ಬರುತ್ತಿದೆ. ೨೦೦೪ರಲ್ಲಿ ಪ್ರತಿಷ್ಠಾನ ರಜತ ಮಹೋತ್ಸವವನ್ನು ಆಚರಿಸಿತು.

# ಹಳತು–ಹೊನ್ನು

**ಕೆ. ಎಸ್. ಮಧುಸೂದನ**






ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು – ೫೬೦ ೦೧೯.

`HALATHU-HONNU'- by **K. S. Madhusudana** and Published by : B. M. Sri Smaraka Prathisthana, 3rd Main Road, Narasimharaja Colony, Bangalore- 560 019.

Size : 1/8 Demy

Pages : X+154

Price : Rs. 85/-

First Edition : 2013

ಪ್ರಥಮ ಮುದ್ರಣ : 2013

ಪ್ರತಿಗಳು : 500

ಪುಟಗಳು : X+154

ಬೆಲೆ : ರೂ. 85.00

ಬಳಸಿದ ಕಾಗದ : 70 ಜಿಎಸ್‌ಎಂ ಮಾಪ್‌ಲಿಥೋ







ಮುದ್ರಣ
**ಚಂದನ ಪ್ರಿಂಟರ್ಸ್**
312, 7ನೇ ಮೇನ್, ನಾಗೇಂದ್ರ ಬ್ಲಾಕ್
ಬನಶಂಕರಿ 1ನೇ ಹಂತ, ಬೆಂಗಳೂರು-50

# ಅರ್ಪಣೆ

---

ನನ್ನ ತಾಯಿ ಸೂರಮ್ಮ
ಹಾಗೂ ತಂದೆ
ಕೆ. ಎಸ್. ಶೇಷಗಿರಿ ಅಯ್ಯರ್
ಅವರುಗಳಿಗೆ

# ಮುಂಮಾತು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಮೂರು ದಶಕಗಳಿಗೂ ಮೀರಿದ ಅವಧಿಯಿಂದ ಕಾರ್ಯ ನಿರ್ವಹಿಸುತ್ತ ಕನ್ನಡ ಸಾಂಸ್ಕೃತಿಕ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುತ್ತ ಬಂದ ಸಂಸ್ಥೆ. ಇದರ ಬಗ್ಗೆ ನಾಡಿನ ವಿದ್ವಾಂಸರೆಲ್ಲರೂ ಆದರಾಭಿಮಾನಗಳನ್ನು ಹೊಂದಿ ಸಂಸ್ಥೆಯೊಂದಿಗೆ ಸಹಕರಿಸುತ್ತಿದ್ದಾರೆ. ಹಾಗಾಗಿಯೇ ಅದರ ಪ್ರಕಟಣಾ ಕಾರ್ಯವೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ. ತಮ್ಮ ಹೊಚ್ಚಹೊಸ ಕೃತಿಗಳನ್ನು ಪ್ರಕಟಿಸಲು ನಮಗೆ ಅನುವು ಮಾಡಿಕೊಡುತ್ತಿದ್ದಾರೆ.

ಪ್ರತಿಷ್ಠಾನದ ಮೂಲ ನೆಲೆ ಸಂಶೋಧನೆ. ಸಂಶೋಧನೆಯೆಂಬುದು ಹಿಂದಿನದನ್ನು ಕೆದಕುವುದಕ್ಕೆ ಮಾತ್ರ ಸೀಮಿತವಾದದ್ದೇನಲ್ಲ. ಎಲ್ಲ ಕಾಲದ ಸಂದರ್ಭ, ಸನ್ನಿವೇಶ, ಕೃತಿ, ಕಾರ್ಯ–ಇವುಗಳಲ್ಲಿ ಅಂತರ್ಗತವಾದ ಸತ್ಯವನ್ನು ಗುರುತಿಸುವ ಕೆಲಸವೇ ಸಂಶೋಧನೆಯೆನ್ನಬಹುದೆಂದು ನನ್ನ ತಿಳಿವಳಿಕೆ. ಹಾಗಾಗಿ ಸಮಕಾಲೀನವಾದದ್ದರ ಬಗ್ಗೆಯೂ ಶಾಶ್ವತದ ಜೊತೆಗೆ ಸದ್ಯದ ಬಗ್ಗೆಯೂ ಸಂಶೋಧನೆ ಮಾಡಬೇಕಾದುದು ಆವಶ್ಯಕ. ಸಂಶೋಧನೆಯ ಅರ್ಥ ಹುಡುಕಾಟ ಎಂದಲ್ಲವೇ ? ಆಗಲೇ ಹೇಳಿದಂತೆ 'ಸತ್ಯ'ವನ್ನು ಶೋಧಿಸುವುದು. ಆದರೆ ಸತ್ಯ ಎಂದರೇನೆಂಬುದನ್ನೇ ಯಾರೂ ಖಚಿತವಾಗಿ ನಿರ್ವಚಿಸಲಾಗುವುದಿಲ್ಲ! ಒಂದು ಕಾಲಕ್ಕೆ ಸತ್ಯ ಎನ್ನಿಸಿಕೊಳ್ಳುವಂಥದ್ದು ಮತ್ತೊಂದು ಕಾಲಕ್ಕೆ ಹಾಗೆ ಕಾಣದೇ ಹೋಗಬಹುದು, ಅಥವಾ ಒಬ್ಬ ವ್ಯಕ್ತಿಗೆ ಸತ್ಯ ಅನ್ನಿಸಿದ್ದು ಮತ್ತೊಬ್ಬನಿಗೆ ಹಾಗನ್ನಿಸದೇ ಇರಬಹುದು, ಅಷ್ಟೇಕೆ ? ಒಬ್ಬನೇ ವ್ಯಕ್ತಿಗೆ ಒಮ್ಮೆ ಸತ್ಯವೆನಿಸಿದುದು ಕಾಲ ಸರಿದಂತೆ ತನ್ನ ಅನಿಸಿಕೆಯ ಬಗ್ಗೆ ಅವನಿಗೆ ಅನುಮಾನವುಂಟಾಗಬಹುದು. ಅಂದರೆ ಸತ್ಯ ಎಂಬುದು ಅನಂತಮುಖಿ. ಅದಕ್ಕನುಗುಣವಾಗಿ ಸಂಶೋಧನೆಯೂ ಹಳೆಯದನ್ನು ಹಾಗೂ ಹೊಸದನ್ನು ಹೊಸದೃಷ್ಟಿಯಿಂದ ನೋಡುವ, ವಿಶ್ಲೇಷಿಸುವ, ಪರಿಭಾವಿಸುವ, ವ್ಯಾಖ್ಯಾನಿಸುವ, ಅದರ ಪ್ರಸ್ತುತತೆಯನ್ನು ವಿವೇಚಿಸುವ ಎಲ್ಲ ಬೌದ್ಧಿಕ ಸಾಹಸಗಳೂ ಸಂಶೋಧನೆಗಳೇ.

ಇಂತಹ ಸಂಶೋಧನೆ ಹೆಚ್ಚಬೇಕು. ಅರಿಯುವ, ಬಗೆಯುವ ಪ್ರಕ್ರಿಯೆ ಮೊನಚಾಗಬೇಕು, ಆಳವಾಗಬೇಕು. ಅದಕ್ಕಾಗಿ ಹಿರಿಯರ ಮಾರ್ಗದರ್ಶನ ಬೇಕು, ಕಿರಿಯರ ಉತ್ಸಾಹ ಬೇಕು. ಪ್ರತಿಷ್ಠಾನವು ತಾನು ಆರಂಭಗೊಂಡ ಕಾಲದಿಂದ ಮೊದಲುಗೊಂಡು ಇಂತಹ ವೇದಿಕೆಗಳಿಗೆ ವೇದಿಕೆಯಾಗಿದೆ. ಉಪನ್ಯಾಸಗಳು, ವಿಚಾರ ಸಂಕಿರಣಗಳು, ಸಂವಾದಗಳು, ಇವುಗಳ ಜೊತೆಗೆ ಎಂ. ಫಿಲ್ ಮತ್ತು ಪಿಎಚ್. ಡಿ ಅಭ್ಯರ್ಥಿಗಳಿಗೆ ತರಬೇತಿ ಮತ್ತು ಮಾರ್ಗದರ್ಶನಗಳು, ಪುಸ್ತಕ ಪ್ರಕಟಣೆ ಇವುಗಳ ಮೂಲಕ ಇಂಥ ಸಂಶೋಧನೆಗೆ ಪ್ರತಿಷ್ಠಾನವು ವೇದಿಕೆಯಾಗಿದೆ. ಈ ಕಾರ್ಯದಲ್ಲಿ ಎಲ್ಲರ ನೆರವು ಮತ್ತು ಪ್ರೋತ್ಸಾಹಗಳು ಅವಶ್ಯಕ.

ಈ ದಿಶೆಯಲ್ಲಿ **ಕೆ. ಎಸ್. ಮಧುಸೂದನ** ಅವರ **'ಹಳತು ಹೊನ್ನು'** ಕೃತಿ ಈಗ ಹೊರಬರುತ್ತಿರುವುದು ಸಂತೋಷದ ವಿಷಯ. **ಪ್ರಜಾವಾಣಿ** ಪತ್ರಿಕೆಯ ಸಾಪ್ತಾಹಿಕ ಪುರವಣಿಯ ಅಂಕಣ ಬರಹಗಳಾಗಿ ಪ್ರಕಟಗೊಂಡ ಲೇಖನ ಮಾಲೆಯ ಸಂಗ್ರಹವೇ ಈ **ಹಳತು ಹೊನ್ನು**. ಈಗ ಸುಲಭವಾಗಿ ಲಭ್ಯವಿಲ್ಲದ ಅಪರೂಪದ ಕನ್ನಡದ ಪುಸ್ತಕಗಳನ್ನು ಈ ಮಧುಸೂದನ ಅವರು ಮಾಲೆಯಲ್ಲಿ ಪರಿಚಯ ಮಾಡಿ ಕೊಟ್ಟಿರುತ್ತಾರೆ. ಈ ಕೃತಿಯನ್ನು ಸಂಶೋಧಕರು ಬಳಸಿಕೊಂಡು ತಮ್ಮ ಸಂಶೋಧನೆಗಳನ್ನು ಮುಂದುವರೆಸಬಹುದು. ವಿಭಿನ್ನ ವಸ್ತುಗಳನ್ನು ಕುರಿತು 19ನೆಯ ಶತಮಾನದಲ್ಲಿ ಕನ್ನಡ ಮನಸ್ಸುಗಳು ಹೇಗೆ ಯೋಚಿಸಿವೆ ಎಂಬುದನ್ನು **ಹಳತು ಹೊನ್ನು** ತಿಳಿಸಿಕೊಡುತ್ತದೆ. ಪ್ರತಿಷ್ಠಾನದಿಂದ ಈ ಪುಸ್ತಕವನ್ನು ಪ್ರಕಟಿಸಲು ಒಪ್ಪಿದ ಶ್ರೀಯುತರಿಗೆ ಕೃತಜ್ಞತೆಗಳು.

**ಡಾ॥ ಪಿ.ವಿ. ನಾರಾಯಣ**
ಅಧ್ಯಕ್ಷರು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬೆಂಗಳೂರು

## ಪರಿವಿಡಿ

## William Reeve ಅವರ
## A DICTIONARY, CARNATAKA AND ENGLISH (1832)
## [ವಿಲಿಯಂ ರೀವ್ ಅವರ ಕನ್ನಡ-ಇಂಗ್ಲಿಷ್ ನಿಘಂಟು]

ವಿಲಿಯಂ ರೀವ್ ಅವರು ರಚಿಸಿರುವ A Dictionary, Carnataka And English ಎಂಬ ಈ ಕನ್ನಡ-ಇಂಗ್ಲಿಷ್ ನಿಘಂಟು 14 July 1832 ರಲ್ಲಿ ಮದರಾಸಿನ ದಿ ಗವರ್ನಮೆಂಟ್ ಗೆಜೆಟ್ ಪ್ರೆಸ್‌ನಲ್ಲಿ ಮೊದಲು ಬಾರಿಗೆ ಮುದ್ರಣಗೊಂಡಿದೆ. ಈ ಕೃತಿಯನ್ನು 'Respectfully Inscribed, By their most obedient and most humble Servant ಆದ ವಿಲಿಯಂ ರೀವ್' ಅವರು ಅಂದಿನ ಮದ್ರಾಸ್ ಗವರ್ನರ್ ಆಗಿದ್ದ Right Honourable S.R.Lushington ಅವರಿಗೆ, ಯುನೈಟೆಡ್ ಈಸ್ಟ್ ಇಂಡಿಯ ಕಂಪನಿಯ ನಿರ್ದೇಶಕ ಮಂಡಳಿಗೆ ಹಾಗೂ ತಮ್ಮ ಸಹೋದ್ಯೋಗಿಗಳು ಮತ್ತು ಕೆಲಸಗಾರರಿಗೆ ' ಅರ್ಪಣೆ ' ಮಾಡಿರುತ್ತಾರೆ. ಇದೇ ವಿಲಿಯಂ ರೀವ್ ಅವರ A Dictionary, ENGLISH AND CARNATACA ಎಂಬ ಇಂಗ್ಲಿಷ್-ಕನ್ನಡ ನಿಘಂಟು 1824ರಲ್ಲಿ ಮದರಾಸಿನಲ್ಲಿನ ಈಸ್ಟ್ ಇಂಡಿಯ ಕಂಪನಿಯ ಫೋರ್ಟ್ ಸೆಂಟ್ ಜಾರ್ಜ್‌ನ ಕಾಲೇಜ್ ಪ್ರೆಸ್ಸಿನಲ್ಲಿ ಮುದ್ರಣವಾಯಿತು ಎಂದು ಶ್ರೀನಿವಾಸ ಹಾವನೂರರು ಹೇಳಿದರೆ, (ಹೊಸಗನ್ನಡದ ಅರುಣೋದಯ 1974) ಇದೇ ಕೋಶವು ಪ್ರಪ್ರಥಮವಾಗಿ ನಿಘಂಟು ವಿಜ್ಞಾನದ ವಿಧಾನ ಶಾಸ್ತ್ರವನ್ನು ಅಳವಡಿಸಿ ರಚಿಸಲಾಗಿರುವ ಕನ್ನಡದ ಮೊದಲ ನಿಘಂಟು ಎಂದು ಐ.ಮಾ. ಮುತ್ತಣ್ಣನವರು (19ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ 1992) ಅಭಿಪ್ರಾಯ ಪಡುತ್ತಾರೆ. 1466 ಫೋಲಿಯೋ(folio) ಪುಟಗಳ ಈ ಕನ್ನಡ-ಇಂಗ್ಲಿಷ್ ನಿಘಂಟು ಎಂಬ ಈ ಬೃಹತ್‌ಕೃತಿಯು 1 ರಿಂದ 733 ಮತ್ತು 734 ರಿಂದ 1466 ಪುಟಗಳ ಎರಡು ದೊಡ್ಡ





ಸಂಪುಟಗಳಲ್ಲಿದೆ. ರೆವರೆಂಡ್ ಎಫ್.ಕಿಟ್ಟೆಲ್ ಅವರು ಆಧುನಿಕ ಕನ್ನಡ ನಿಘಂಟುಕಾರರ ಮಕುಟ ಮಣಿಯಾದರೆ ವಿಲಿಯಂ ರೀವ್ ಅವರು ಆಧುನಿಕ ಕನ್ನಡ ನಿಘಂಟುಗಳ ಜನಕ. ಈ ಅಂಶವನ್ನು ಮುಂದಿನ ನಿದರ್ಶನಗಳಿಂದ ಪುಷ್ಟೀಕರಿಸಬಹುದು : 1844 ರಲ್ಲಿ ಜಾನ್ ಗ್ಯಾರೆಟ್ ರಚಿಸಿದ English and canarese vocabulary of familiar words with easy sentences, 1858 ರಲ್ಲಿ ಬಂದ ಡೇನಿಯಲ್ ಸ್ಯಾಂಡರ್ಸನ್‌ನ A Dictionary, Canarese and English, 1861 ರಲ್ಲಿ ಎತಿಯೇನ್ ಲೂಯಿ ಶಾರ್ಬೊನೊ ಅವರು ಸಿದ್ಧಪಡಿಸಿದ ಲ್ಯಾಟಿನ್ ಕನ್ನಡ ಕೋಶವಾದ DICTIONARIUM LATINO CANARENSE. ( ಲತೀನ್ ಕನ್ನಡ ನಿಘಂಟು), 1867 ರಲ್ಲಿ ದೇಶೀಯ ಪಂಡಿತರಾದ ಎಸ್.ರಾಮಸ್ವಾಮಿಯವರು ಸಿದ್ಧಪಡಿಸಿ ಪ್ರಕಟಿಸಿದ Grammatical Vocabulary in English and Canarese, classified under the various parts of speech, 1876 ರಲ್ಲಿ ಎಫ್. ಜೀಗ್ಲರ್ ಪ್ರಕಟಿಸಿದ English-Kannada Dictionary, 1894 ರಲ್ಲಿ F.Kittel, B.G.E.M ಅವರು ರಚಿಸಿದ Kannada English Dictionary, 1899 ರಲ್ಲಿ ರೆವರೆಂಡ್ ಜೆ.ಬೂಕರ್ ರಚಿಸಿದ Kannada-English Dictionary ಹಾಗೂ 1899ರಲ್ಲಿ ಕ್ರಿಸ್ತಾನುಜ ವಾತ್ಸ ರಚಿಸಿದ The English-Kannada Pocket Dictionary ಈ ಮುಂತಾದ ಆಧುನಿಕ ನಿಘಂಟುಗಳಿಗೆ ವಿಲಿಯಂ ರೀವ್ ಅವರ ಪ್ರಸ್ತುತ ನಿಘಂಟೇ ಮೂಲ ಆಕರವಾಗಿದೆ ಮತ್ತು ಅವರೆಲ್ಲರೂ ಅದನ್ನು ಸ್ಮರಿಸಿದ್ದಾರೆ ಕೂಡಾ. ಆಶ್ಚರ್ಯ ಎಂದರೆ ಸನ್ 1869ನೇ ಇಸವಿಯಲ್ಲಿ ಪ್ರಕಟಗೊಂಡ ದೇಶೀಯ ವಿದ್ವಾಂಸರಾದ ಗಂಗಾಧರ ಮಡಿವಾಳೇಶ್ವರ ತುರಮರಿಯವರ ' ಶಬ್ದಮಂಜರಿ 'ಎಂಬ ಕೋಶದಲ್ಲಿ

ತುರಮರಿಯವರು ಯಾವುದೇ ರೀತಿಯಿಂದಲೂ ರೀವ್ ಅವರ ನಿಘಂಟಿನಿಂದ ಪ್ರಭಾವಗೊಳ್ಳದೇ ಇದ್ದದ್ದು. ಬಹುಶಃ ಇದಕ್ಕೆ ಕಾರಣವೆಂದರೆ ಮೇಲ್ಕಂಡ ನಿಘಂಟುಗಳೆಲ್ಲವೂ ದ್ವಿಭಾಷಿಕ ನಿಘಂಟುಗಳಾಗಿದ್ದು 'ಶಬ್ದಮಂಜರಿ' ಕೋಶವು ಏಕಭಾಷಿಕವಾದದ್ದು (ಕನ್ನಡ-ಕನ್ನಡ) ಆಗಿರಬಹುದು.

ಈ ನಿಘಂಟಿನ ಮುದ್ರಣವನ್ನು ಕುರಿತು ಕೆಲವು ಅಂಶಗಳನ್ನು ಗಮನಿಸಬಹುದು. ' ಕನ್ನಡ ಛಾಪೆಯ ವಿಕಾಸ ' ( ತೆಂಕನಾಡು 1947) ಎಂಬ ಲೇಖನದಲ್ಲಿ ಶ್ರೀ ದಾಮೋದರ ಬಾಳಿಗರು " ಈಸ್ಟ್ ಇಂಡಿಯ ಕಂಪನಿಯು ತನ್ನ ಅಧಿಕಾರವನ್ನು ಉಪಯೋಗಿಸಿ ರೋಮನ್ ಲಿಪಿಯನ್ನು ದೇಶ ಭಾಷೆಗಳಿಗೆಲ್ಲ ರೂಢಿಯಲ್ಲಿ ತರಬೇಕೆಂಬವರೂ ಇದ್ದರು. ಆದರೆ ಆಗಿನ ಕಂಪನಿ ಸರಕಾರವು ಅಷ್ಟು ಉದ್ದಕ್ಕೆ ಹೋಗಲಿಲ್ಲ, ತಮ್ಮ ಆಡಳಿತ ಸೌಕರ್ಯಕ್ಕಾಗಿ ಅವರು ಕನ್ನಡ, ತೆಲುಗು, ತಮಿಳು ಕೋಶಗಳನ್ನು ತಜ್ಞರಾದ ಮಿಶೆನರಿಗಳಿಗೆ ಯೋಗ್ಯ ಧನಸಹಾಯ ಕೊಟ್ಟು ಸಂಗ್ರಹಿಸಿ ಅಚ್ಚು ಹಾಕಿಸಿದ್ದಾರೆ. 1824 ರಲ್ಲಿ ಮದ್ರಾಸಿನ 'ಕೊಲೆಜ್ ಪ್ರೆಸ್'{ಕಂಪನಿ ಸರಕಾರದ ಅಚ್ಚುಕೂಟದಲ್ಲಿ ರೆವರೆಂಡ ಡಬ್ಲ್ಯೂ. ರೀವ್ ಇವರಿಂದ ನಿರ್ಮಿಸಲ್ಪಟ್ಟ ಇಂಗ್ಲಿಷ್ ಮತ್ತು ಕನ್ನಡ ಡಿಕ್ಶೆನೆರಿಯು ಮುದ್ರಿತವಾಯಿತು. ಇದರಲ್ಲಿ ಡೆಮ್ಮಿ ¼ ಆಕಾರದ 1204 ಪುಟಗಳಿವೆ. ಅದರಲ್ಲಿರುವ ಕನ್ನಡ ಅಕ್ಷರಗಳನ್ನು ಪರಿಶೀಲಿಸಿ. ಪ್ರಾಯಶಃ ತೆಲುಗು ಕನ್ನಡಗಳಿಗೆ ಒಂದೇ ಬಗೆಯ ಅಚ್ಚು ಮೊಳೆಗಳನ್ನು ಕೊಲಜ್ ಪ್ರೆಸ್ಸಿನವರು ಕೆತ್ತಿಸಿ ಉಪಯೋಗಿಸುತ್ತಿದ್ದಿರಬೇಕು. ಇದೇ ಪ್ರೆಸ್ಸಿನಲ್ಲಿ 1832 ರಲ್ಲಿ ರೀವ್‌ರ ಕರ್ನಾಟಕ ಮತ್ತು ಇಂಗ್ಲಿಷ್ ಕೋಶವು ಮುದ್ರಿತವಾಯಿತು. ಚಿಕ್ಕ ಅಕ್ಷರಗಳ ಮೊಳೆಗಳು ನಿರ್ಮಿತವಾಗದ ಕಾರಣ ಈ ಕೋಶವು ಎರಡು ಭಯಂಕರ ದೊಡ್ಡ ಭಾಗಗಳಾಗಿ ಪ್ರಕಟವಾಯಿತು." ಎಂದು ಈ ಕೃತಿಯ ಮುದ್ರಣ ಹಾಗೂ ಅಕ್ಷರದ ಮೊಳೆಗಳ ಬಗ್ಗೆ ಅಪೂರ್ವ ಮಾಹಿತಿ ನೀಡಿರುತ್ತಾರೆ. ಆದರೆ ಇಲ್ಲಿ ಈ ನಿಘಂಟು ಕೊಲೆಜ್ ಪ್ರೆಸ್ಸಿನಲ್ಲಿ ಮುದ್ರಿತವಾಗಿದೆ ಎಂಬುದು ಮಾತ್ರ ತಪ್ಪು ಮಾಹಿತಿ. ಇದು ಮುದ್ರಣಗೊಂಡಿರುವುದು ಮದರಾಸಿನ ಗವರ್ನಂಟ್ ಗೆಜೆಟ್ ಪ್ರೆಸ್ಸಿನಲ್ಲಿ. (ಮುಖಪುಟದ ಚಿತ್ರವನ್ನು ಗಮನಿಸಿ). ಅನೇಕ ಪಾಶ್ಚಾತ್ಯ ವಿದ್ವಾಂಸರಂತೆ ಬಹುಭಾಷಾಕೋವಿದರಾದ ವಿಲಿಯಂ ರೀವ್ ಅವರು ಈ ನಿಘಂಟುಗಳನ್ನಷ್ಟೇ ಅಲ್ಲದೆ ಕನ್ನಡದಲ್ಲಿ ' ಮೋಸೆಯ ಮೊದಲನೇ ಕಾಂಡವು ' ಎಂಬ ಹೊತ್ತಗೆಯನ್ನೂ, ಒರಿಯಾ-ಇಂಗ್ಲಿಷ್ ನಿಘಂಟನ್ನೂ, ಕನ್ನಡ-

ತಮಿಳು-ಒರಿಯಾ ಮತ್ತು ಬಂಗಾಲಿ ಭಾಷೆಗಳಲ್ಲಿ ಬೈಬಲ್ ಕೃತಿಗಳನ್ನೂ ಯೇಸುಕ್ರಿಸ್ತನ ಅವತಾರ ಎಂಬ ಕೃತಿಯನ್ನೂ ರಚಿಸಿರುತ್ತಾರೆ. "ಹೊಸಗನ್ನಡದ ನಸುಕಿನ ಕಾಲದಲ್ಲಿ(1810 ರಿಂದ 1840) ದೇಶೀಯರಾದ ಕೃಷ್ಣ ಮಾಚಾರಿಯ ಜೊತೆಗೆ ಕೋಶಕಾರನಾದ ರೀವ್ಹನ ಕಾರ್ಯವಷ್ಟೆ ಎದ್ದು ಕಾಣುವಂತಿದ್ದಿತು "ಎಂದು ಈ ಇಬ್ಬರ ಬಗ್ಗೆ ಶ್ರೀ ಹಾವನೂರರು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. 1810ರಲ್ಲಿ 'ಧಾತುಮಂಜರಿ'ಯನ್ನು ಮತ್ತು 1838ರಲ್ಲಿ 'ಹೊಸಗನ್ನಡ ನುಡಿಗನ್ನಡಿ' ಯನ್ನು ಪ್ರಕಟಿಸಿದ ದೇಶೀಯ ವಿದ್ವಾಂಸರಾದ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ಅವರು ವಿಲಿಯಂ ರೀವ್‌ಗೆ ಈ ನಿಘಂಟುರಚನೆಯಲ್ಲಿ ನೆರವು ನೀಡಿದ್ದಾರೆ. ಇದೇ ಕೃಷ್ಣಮಾಚಾರ್ಯರಿಗೆ ಅವರು ವ್ಯಾಕರಣ ಬರೆಯುವಾಗ ವಿಲಿಯಂ ರೀವ್ ಮತ್ತು ಜಾನ್ ಮೆಕೆರೆಲ್ ಉತ್ತೇಜನ ಮತ್ತು ನೆರವು ನೀಡಿದ್ದರು. ಇಂತಹ ಕೃಷ್ಣಮಾಚಾರ್ಯರನ್ನು ಕುರಿತು ರೀವ್ ಅವರು ಈ ಕೃತಿಯ prefaceನಲ್ಲಿ : This respectable individual is decidedly the best informed and the most correct Canarese Scholar the Author has ever met with, and to his most valuable and very kind services, for several years, he feels himself greatly indebted." ಎಂದು ಗೌರವ ಸೂಚಿಸಿದ್ದಾರೆ. ಮತ್ತು ಮುಂದುವರೆಯುತ್ತಾ ತಾನು ಈ ನಿಘಂಟುವನ್ನು ರಚಿಸುವಲ್ಲಿ ತಾನು ಎದುರಿಸಿದ ತೊಂದರೆಗಳನ್ನು ಕುರಿತು "He ( Sic: Reeve) feels himself devoutly thankful to Almighty God who has spared his life and vouchsafed needful health and strength to bring to its conclusion a task which has been at all times most laborious and not unfrequently extremely insipid, unprofitable, and irksome." ಎಂದು ಹೇಳಿರುವುದರಿಂದ ಅವನು ಅನುಭವಿಸಿದ ಅಡಚಣೆ ಗಳನ್ನು ಊಹಿಸಬಹುದು. ರೆವರೆಂಡ್ ಎಫ್.ಕಿಟ್ಟೆಲ್ ಅವರು ತಮ್ಮ ನಿಘಂಟಿಗೆ ಬರೆದ ಪ್ರಿಫೇಸಿನಲ್ಲಿ ರೀವ್ ಅವರ ನಿಘಂಟನ್ನು ಕುರಿತು " . . . ., and let him (Sic: Kittel) here assert most emphatically, not only that, considering the condition of the Kannada scholarship when it was compiled , Mr. Reeve's work was a wonderful production, but that...." ಎಂದು ಮನಃಪೂರ್ವಕವಾಗಿ ಪ್ರಶಂಸಿಸಿದ್ದಾನೆ.

ಈ ನಿಘಂಟು ರಚನೆಗೆ ರೀವ್ ಅವರು ಚತುರಾಸ್ಯ ನಿಘಂಟು, ಕಬ್ಬಿಗರ ಕೈಪಿಡಿ, ಶಬ್ದಮಣಿದರ್ಪಣ, ಕರ್ನಾಟಕ ವ್ಯಾಕರಣ, ಶಬ್ದಮಂಜರಿ, ಅಮರಕೋಶ ಮುಂತಾದ ಪ್ರಾಚೀನ ಸಂಸ್ಕೃತ ಹಾಗೂ ಕನ್ನಡ ಕೃತಿಗಳನ್ನು ಬಳಸಿಕೊಂಡಿದ್ದೇನೆಂದು ಸ್ಮರಿಸಿಕೊಳ್ಳುತ್ತಾನೆ

ಈ ನಿಘಂಟಿನಲ್ಲಿ ಹೇಗೆ ಪದಗಳಿಗೆ ಅರ್ಥವನ್ನು ಕೊಟ್ಟಿದ್ದಾನೆಂಬುದನ್ನು ಒಂದೆರಡು ನಿದರ್ಶನಗಳೊಂದಿಗೆ ನೋಡಬಹುದು.

**c. ಆಕಳು s. n. A cow. ಆಕಳಕರ, ಆಕಳಕರು a cow's calf. ಆಕಳದವನು a herdsman. ಕಂದಿಕ್ಕಿದಾಕಳು a cow that has miscarried. ಒತಯಿಸಿದಾಕಳು a cow standing at dairy. ಪಿಂಡಾಕಳು, ಹಿಂಡಾಕಳು a herd of cows ಆಕಳಹಟ್ಟಿ a kine pen or fold.** ಕೋಡಬಳೆ ಎಂಬ ಶಬ್ದಕ್ಕೆ ರೀವ್ ಅರ್ಥ ಕೊಟ್ಟಿರುವ ಕ್ರಮವನ್ನು ನೋಡಿದರೆ ಅನ್ಯಧರ್ಮೀಯರ ವೇಷಭೂಷಣ, ತಿಂಡಿ, ಪದ್ಧತಿ ಇವುಗಳಿಗೆ ಅರ್ಥ ನೀಡುವುದ ಎಷ್ಟು ಕಷ್ಟವೆಂಬುದು ಗೊತ್ತಾಗುತ್ತದೆ.

**c. ಕೋಡಬಳೆ, ಕೋಡಬೇಳೆ ಕೋಡಬಳಿ s. n. A cake made from the flour of rice,cumbum, or great millet, in the form of a coiled snake.**

[c. denotes pure carnataca words. s. n. denotes Substantive Noun.]

(ಈ ವಾಕ್ಯವನ್ನು ಕನ್ನಡಕ್ಕೆ ಅನುವಾದಿಸಿದರೆ ಕೋಡುಬಳೆ ಎಂದರೆ ಅಕ್ಕಿ ಹಿಟ್ಟು ಮೆಣಸಿನಪುಡಿಗಳನ್ನು ಕಲೆಸಿ ಗುಂಡುರಹಾವಿನಾಕರದಲ್ಲಿ ತಯಾರಿಸಿದ ರೊಟ್ಟಿ ಎಂದಾಗುತ್ತದೆ !!!!) ಹೀಗೆ ಇನ್ನೂ ಹಲವಾರು ನಿದರ್ಶನಗಳನ್ನು ನೀಡಬಹುದು. ಇದು ಎರಡು ಉದಾಹರಣೆ ಮಾತ್ರ. ಆಗಿನ ಕಾಲಕ್ಕೆ ಮದ್ರಾಸು ಸರಕಾರವು ಈ ನಿಘಂಟಿನ ಪ್ರತಿಯೊಂದಕ್ಕೆ 12 ರುಪಾಯಿ ಬೆಲೆ ನಿಗದಿ ಪಡಿಸಿದ್ದರೆಂದು ತಿಳಿದು ಬರುತ್ತದೆ. ಇದು ಮೊದಲನೆಯ ಪ್ರಸಿದ್ಧಿ ಹೊಂದಿರುವುದರಿಂದ ಇದರಲ್ಲಿ ಸಹಜವಾಗಿಯೇ ಹಲವಾರು ದೋಷಗಳೂ ಕೂಡ ನುಸುಳಿಕೊಂಡಿವೆ. ಏನೇ ಇದ್ದರೂ ಗುಣ ಮತ್ತು ಗಾತ್ರ ಗಳೆರಡರಲ್ಲಿಯೂ ಮಹತ್ವ ಹೊಂದಿರುವ ಈ ನಿಘಂಟು ಕನ್ನಡ ಪುಸ್ತಕಲೋಕದಲ್ಲಿ ಒಂದು ಇತಿಹಾಸವನ್ನು ಸೃಷ್ಟಿಸಿದೆ ಮತ್ತು ಕನ್ನಡ ನಿಘಂಟು ಕ್ಷೇತ್ರಕ್ಕೆ ಒಂದು ಅಪಾರವಾದ ಕೊಡುಗೆಯಾಗಿದೆ ಎನ್ನಲು ಅಡ್ಡಿಯೇನಿಲ್ಲ

# ಡೇನಿಯಲ್ ಸ್ಯಾಂಡರ್‌ಸನ್ ಅವರ
## A Dictionary, Canarese and English (1858)

ಡೇನಿಯಲ್ ಸ್ಯಾಂಡರ್‌ಸನ್ ಅವರ ಈ ನಿಘಂಟು 1 ಡಿಸೆಂಬರ್ 1858 ರಂದು ಪ್ರಕಟವಾಗಿದೆ. ಈ ಕೋಶದಲ್ಲಿ ಸುಮಾರು 23,000 ಶಬ್ದಗಳಿಗೆ ಅರ್ಥವನ್ನು ನೀಡಲಾಗಿದೆ. Wesley Missionಗೆ ಸೇರಿದ್ದ ಬೆಂಗಳೂರಿನ ಕ್ರೈಸ್ತ ಕೇಂದ್ರದ ಶಾಲೆಯಲ್ಲಿ ಸ್ಯಾಂಡರ್‌ಸನ್ ಸುಮಾರು 1845 ರಿಂದ ಇದ್ದನು. ವೆಸ್ಲಿ ಪ್ರೆಸ್ಸಿನಲ್ಲಿ ಮುದ್ರಣಗೊಂಡ ಈ ನಿಘಂಟು ಮೊದಲಿಗೆ ಡೆಮ್ಮಿ ಆಕಾರದ 700 ಪುಟಗಳಲ್ಲಿ ಮುದ್ರಣಗೊಂಡಿದ್ದು ಮತ್ತೆ 1858ನೆಯ ಡಿಸೆಂಬರ 1 ನೆಯ ದಿನಾಂಕದ ಹೊತ್ತಿಗೆ ಮರುಮುದ್ರಣವನ್ನು ಕಂಡಿದೆ. ಮರುಮುದ್ರಣವು ಡೆಮ್ಮಿ ಅಷ್ಟದಳಾಕಾರದ್ದಾಗಿದ್ದು 1050 ಪುಟಗಳನ್ನೊಳಗೊಂಡಿದೆ. ಸ್ಯಾಂಡರ್‌ಸನ್ ಬಹುಶ್ರುತ ಸಂಸ್ಕೃತ ಕನ್ನಡ ವಿದ್ವಾಂಸ. 19 ನೆಯ ಶತಮಾನದಲ್ಲಿ ಸಮಾಜಸೇವೆ ಹಾಗೂ ಸಾಹಿತ್ಯ ಸೇವೆ ಸಲ್ಲಿಸಿದ ಪಾಶ್ಚಾತ್ಯ ಪ್ರಮುಖರಲ್ಲಿ ಒಬ್ಬಾತ. ಸುಮಾರು 5000 ಪುಟಗಳಷ್ಟು, ಸಾಹಿತ್ಯ ರಚನೆ ಇವನದು. ಆ ಕಾಲದ ಪತ್ರಿಕೆಗಳಾದ, 'ವೃತ್ತಾಂತ ಬೋಧಿನಿ' ಹಾಗೂ 'ವಾಗ್ವಿಧಾಯಿನಿ'ಗಳಲ್ಲಿ




more Critical Dictionary, giving carefully selected examples
... the best authors; a Dictionary of Mythology and History;
... Dictionary of Grammatical and Scientific terms, Natural His-
..., Botany, Geology, Astronomy, &c.; a complete revision of
Hindustani words, and words peculiar to the cutcherries and
...ir records; also a complete and carefully prepared Diction-
..., English and Canarese.

It is hoped that the portability of the present volume, reduc-
notwithstanding the large additions and the pronunciation,
... a quarto volume of 1458 pages, to a convenient octavo,
... make it a useful contribution to the available Canarese lit-
...ture.

D. S.

Bangalore,
*December 1st, 1858.*

ಇವನ ಬೈಬಲ್ ಸೂಕ್ತಿಗಳು, ಗೀತೆಗಳು ಹಾಗೂ ಹಲವಾರು ವಿಚಾರ ಪೂರ್ಣಲೇಖನಗಳು ಪ್ರಕಟವಾಗಿದ್ದಲ್ಲದೆ ಇತರ ರೊಂದಿಗೆ ಕನ್ನಡ ವ್ಯಾಕರಣ ಧಾರಾ ವಾಹಿ ಯಾಗಿ ಪ್ರಕಟವಾಯಿತು. 1841 ರಲ್ಲಿ 'ಏಸುವಿನ ಬಳಿಗೆ ಬಾ', 1858 ರಲ್ಲಿ village dialogues in canarese, 1860 ರಲ್ಲಿ ಕಥಾಸಂಗ್ರಹ ಇವುಗಳು ಪ್ರಕಟವಾದವು. ಕಥಾ ಸಂಗ್ರಹದ ವಿವಿಧ ಭಾಗ ಗಳಲ್ಲಿ ಪಂಚತಂತ್ರ, ಶಿವಪುರಾಣ, ತೆನಾಲಿ ರಾಮಕೃಷ್ಣ, ಹಿಡಿಂಬವಧೆ, ದುಶ್ಯಂತೋಪಾಖ್ಯಾನ, ರಾಮಾಯಣ ಮತ್ತು ದಶಾವತಾರದ ಕಥೆಗಳು ಪ್ರಕಟವಾಗಿವೆ. ಜೈಮಿನಿ ಭಾರತದ ಆಯ್ದ ಭಾಗಗಳನ್ನು ಇಂಗ್ಲಿಷ್‌ನಲ್ಲಿ ಗದ್ಯರೂಪಕ್ಕೆ ಅನುವಾದಿಸಿದ್ದಾನೆ. ಇವೆಲ್ಲ ಅವನ ಜಾತ್ಯತೀತ ಮನೋಭಾವದ ದ್ಯೋತಕವಾಗಿದೆ.

ಈ ನಿಘಂಟು ಒಂದು ದೃಷ್ಟಿಯಿಂದ ವಿಲಿಯಂ ರ್ಹೀವ್ ಅವರ A DICTIONARY, Carnataka and English ಕೋಶದ ಪರಿಷ್ಕೃತ ಆವೃತ್ತಿ ಎಂದು ಅನೇಕರು ಹೇಳುತ್ತಾರಾದರೂ ಇವನು ಮಾಡಿರುವ ಕೆಲಸವನ್ನು ನೋಡಿದರೆ ಇದೊಂದು ಸ್ವತಂತ್ರ ನಿಘಂಟು ಎಂದು ಪರಿಭಾವಿಸಲು ಅಡ್ಡಿಯೇನಿಲ್ಲ. ಇದಕ್ಕೆ ಈ ಗ್ರಂಥವು ಅನೇಕ ಮುದ್ರಣಗಳನ್ನು ಕಂಡಿರುವುದೇ ಸಾಕ್ಷಿ. ಸ್ಯಾಂಡರ್‌ಸನ್ "ರೀವನ ನಿಘಂಟು ಕೊಂಡೊಯ್ಯಲು ಹಿಡಿತಕ್ಕೆ

ಮೀರಿದ್ದರಿಂದ ಚಿಕ್ಕ ಆಕಾರದಲ್ಲಿ ಒಂದು ನಿಘಂಟು ತರಬೇಕೆಂದು ರ್‍ಹೀವನ ನಿಘಂಟನ್ನು ಈ ಆಕಾರದಲ್ಲಿ ತಂದಿದ್ದೇನೆ" ಎಂದು ಮುನ್ನುಡಿಯಲ್ಲಿ ವಿನಮ್ರನಾಗಿ ಹೇಳಿದ್ದಾನೆ. ವೆಸ್ಲಿಯನ್ ಮಿಷನ್ ಸೊಸೈಟಿಯವರು ಕನ್ನಡದ ಅಕ್ಷರಗಳ ಮೊಳೆಗಳನ್ನು ಚಿಕ್ಕ ಆಕಾರದಲ್ಲಿ ರೂಪಿಸಿದ್ದರಿಂದ ಮತ್ತು ಮೈಸೂರು ಮಹಾರಾಜರ ಆಳ್ವಿಕೆಯ ಸಂಸ್ಥಾನಗಳ ಕಮಿಷನರ್ Sir Mark Cubban ಅವರ ಉದಾರ ಪ್ರೋತ್ಸಾಹದಿಂದ ಈ ಕೃತಿ ಹೊರಬರಲು ಸಾಧ್ಯವಾಯಿತೆಂದು ಸ್ಯಾಂಡರ್‌ಸನ್ ಅವರಿಬ್ಬರನ್ನೂ ಸ್ಮರಿಸಿಕೊಳ್ಳುತ್ತಾನೆ.

ಸ್ಯಾಂಡರ್‌ಸನ್ ಪ್ರತಿ ಉಲ್ಲೇಖಶಬ್ದಕ್ಕೆ ಸಾಮಾನ್ಯವಾಗಿ ನಿಘಂಟಿನಲ್ಲಿ ಬರುವ 10 ವಲಯಗಳನ್ನು ನೀಡುತ್ತಾನೆ : 1. ಯಾವ ಭಾಷೆ (ದೇಶ್ಯ/ಅನ್ಯದೇಶ್ಯ) 2. ಉಲ್ಲೇಖಶಬ್ದ 3. ಉಲ್ಲೇಖಶಬ್ದದ ಇತರ ರೂಪಗಳು 4. ಉಲ್ಲೇಖಶಬ್ದದ ವ್ಯಾಕರಣೀಯ ಸ್ಥಾನಮಾನ 5. ಉಚ್ಚಾರಣೆ(ಇಂಗ್ಲಿಷ್ ಲಿಪಿಯಲ್ಲಿ) 6. ಅರ್ಥ (ಇಂಗ್ಲಿಷ್ ಭಾಷೆಯಲ್ಲಿ) / ಪರ್ಯಾಯ ಪದ 7. ಉಲ್ಲೇಖಿತ ಪದವಿರುವ ವಾಕ್ಯಪ್ರಯೋಗ 8. ಈ ವಾಕ್ಯದ ಇಂಗ್ಲಿಷ್ ರೂಪ. 9.ಸಮಾಸಪದಗಳ ಬಿಡಿಸಿದ ರೂಪ. 10. ಉಲ್ಲೇಖಪದದ ವ್ಯುತ್ಪತ್ತಿ

ರ್‍ಹೀವ್‌ನ ಅರ್ಥಕೋಶಕ್ಕೆ ಪ್ರಧಾನವಾಗಿ ಏಳು ಗುಣಾತ್ಮಕ ಬದಲಾವಣೇಗಳನ್ನು ಈ ಕೋಶದಲ್ಲಿ ಅಳವಡಿಸಿ ಪುನಾರಚಿಸಲಾಗಿದೆ

1. 11,000 ಹೆಚ್ಚುವರಿ ಉಲ್ಲೇಖ(Entry)ಗಳನ್ನು ಸೇರಿಸಿದೆ ಹಾಗೂ ಅನೇಕ ಶಬ್ದಗಳಿಗೆ ಇನ್ನೂ ಹೆಚ್ಚಿನ ಅರ್ಥಗಳನ್ನು ನೀಡಲಾಗಿದೆ.

2. ಪ್ರತಿ ಶಬ್ದದ ಉಚ್ಚಾರಣೆಯನ್ನು ಇಂಗ್ಲಿಷಿನ ಇಟಾಲಿಕ್ಸ್ ರೂಪದಲ್ಲಿ ನೀಡಲಾಗಿದೆ. ಉದಾ: ಕೆಸರು, ಕೆಸುರು, s *Kesaru, Kesuru*

3. ಉಲ್ಲೇಖಗಳು ಸಮಾಸಪದ ಅಥವಾ ಕೂಡುಪದಗಳಾಗಿದ್ದಲ್ಲಿ ಅವನ್ನು ಬಿಡಿಸಿ ಕೊಡಲಾಗಿದೆ. ಉದಾ: ಕೆಳಗಡೆ, ಕೆಳತಟ್ಟು, *Kela-gade, Kela-tattu*

4. ಅನೇಕ ಪದಗಳ ವ್ಯುತ್ಪತ್ತಿಯನ್ನು ಆವರಣ ಚಿಹ್ನೆಯೊಳಗೆ ನೀಡಲಾಗಿದೆ. ಉದಾ: ಜಂಮ [ಬ್ರಹ್ಮ], ಪವಳ [ಪ್ರವಾಳ]

5. ಉದಾಹೃತ ಪದಗಳನ್ನು ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಬಿಡಿಸಿ ಕೊಡಲಾಗಿದೆ.

6. ಅನೇಕ ವ್ಯಾಖ್ಯೆಗಳನ್ನು ಹೊಸದಾಗಿ ಸೇರಿಸಿ ಹೆಚ್ಚಿನ ಅರ್ಥಗಳನ್ನು ನೀಡಲಾಗಿದೆ.

7. ಉಲ್ಲೇಖಗಳನ್ನು ಆದಷ್ಟೂ ಮೂಲರೂಪಗಳಲ್ಲಿ ನೀಡಲಾಗಿದೆ

ಹಾಗು ತಪ್ಪುರೂಪಗಳನ್ನು ಕೈಬಿಡಲಾಗಿದೆ.

ಈ ನಿಘಂಟಿನಲ್ಲಿ ಉಲ್ಲೇಖವಾಗಿರುವ, ಆ ಕಾಲದಲ್ಲಿ ಬಳಕೆಯಲ್ಲಿದ್ದ ಅನೇಕ ಶಬ್ದಗಳು ಈಗ ಬಳಕೆಯಲ್ಲಿಲ್ಲ. ಅಷ್ಟೇ ಅಲ್ಲದೆ ಅನೇಕ ಅಪರೂಪದ ಶಬ್ದಗಳನ್ನು ಈ ಕೋಶದಲ್ಲಿ ಗಮನಿಸಬಹುದು:

c. ಗರ್ದ್ದುರು garrduru, s. The smell of cow's urine. (page-361)

c. ತಂಡಸ Tandasa, s. A goldsmith's tongs(page-480)

c. ತಂಡಲು Tandalu, s. The fleshy part of the arm

ಇದರ ಜೊತೆಗೆ , ಅನ್ಯಧರ್ಮೀಯರಿಗೆ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಪರಿಸರದ ಶಬ್ದಗಳಿಗೆ ಅರ್ಥ ಕೊಡುವುದು ಎಷ್ಟು ದುಸ್ತರ ಎಂಬುದಕ್ಕೆ 'ಕೋಡಬಳೆ' ಶಬ್ದವನ್ನು ಗಮನಿಸಬಹುದು.

c. ಕೋಡಬಳೆ, ಕೋಡಬೇಳೆ, ಕೋಡುಬಳಿ koda-bale, koda-bele, kodu-bali, s

A cake made from the floor of a rice cumbum, or, millet, in the form of a coiled snake.

ಯಾವುದೇ ಭಾಷೆಯ ಸಮಗ್ರ ಅಧ್ಯಯನಕ್ಕೆ ಒಳ್ಳೆಯ ನಿಘಂಟು ಅತ್ಯಾವಶ್ಯಕ. ಆಯಾ ಭಾಷೆಯ ಅತ್ಯುತ್ತಮ ಬರಹಗಾರರ ವಾಕ್ಯಪ್ರಯೋಗಗಳನ್ನು ಉದಾಹರಣೆಯಾಗಿ ನೀಡುವ ಪುರಾಣ, ಇತಿಹಾಸ, ವಿಜ್ಞಾನ, ಸಸ್ಯಶಾಸ್ತ್ರ, ಖಗೋಳಶಾಸ್ತ್ರ, ಭೂಗರ್ಭಶಾಸ್ತ್ರ ಮುಂತಾದ ಕ್ಷೇತ್ರಗಳ ತಿಳಿವಳಿಕೆಯನ್ನು ನೀಡುವ ಸ್ವಯಂಪೂರ್ಣ ನಿಘಂಟು ಅತ್ಯಗತ್ಯ ಎಂಬುದು ಅವನ ನಿಲುವಾಗಿದ್ದು ಅಂತಹ ನಿಘಂಟುಗಳು ಕನ್ನಡದಲ್ಲಿಲ್ಲದಿರುವುದಕ್ಕಾಗಿ ಪರಿತಪಿಸಿದ್ದಾನೆ. ಆದರೆ ನಮ್ಮ ಈ ಸಂದರ್ಭದಲ್ಲಿ ಅವನು ಹೇಳಿದ ಕೊರತೆಗಳು ಬಹುಮಟ್ಟಿಗೆ ನೀಗಿವೆ ಎಂದು ಹೇಳಬಹುದು. ಕನ್ನಡ ನಿಘಂಟುಗಳಮಾಲೆಯಲ್ಲಿ Daniel Sanderson ಅವರ A DICTIONARY, Canarese and English ಕೋಶಕ್ಕೆ ಒಂದು ಹಿರಿದಾದ ಸ್ಥಾನವಿದೆ.

# ರೆವರೆಂಡ್ ಫ್ರೆಡ್ರಿಕ್ ಜಿಗ್ಲರ್ ಅವರ ಇಂಗ್ಲಿಷ್ ಮತ್ತು ಕನ್ನಡ ಶಾಲಾನಿಘಂಟು (1876)
## An English and Canarese SCHOOL-DICTIONARY

ಇಂಗ್ಲಿಷ್-ಕನ್ನಡ ದ್ವಿಭಾಷಿಕ ನಿಘಂಟಾದ ರೆವರೆಂಡ್ ಫ್ರೆಡ್ರಿಕ್ ಜಿಗ್ಲರ್ ಅವರ ಪ್ರಸ್ತುತ ಈ ಇಂಗ್ಲಿಷ್ ಮತ್ತು ಕನ್ನಡ **ಶಾಲಾನಿಘಂಟು–An English and Canarese SCHOOL-DICTIONARY** ಕೃತಿಯು ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್‌ನಿಂದ 1876ರಲ್ಲಿ ಮುದ್ರಣಗೊಂಡಿದೆ. 1919ರ ಐದನೆಯ ಆವೃತ್ತಿಯಲ್ಲಿ ಈ ನಿಘಂಟನ್ನು ಕ್ರಿಸ್ತಾನುಜ ವತ್ಸ ಎಂಬ ವಿದ್ವಾಂಸನು ಪರಿಷ್ಕರಿಸಿ ವಿಸ್ತರಿಸಿ ಪ್ರಕಟಿಸಿದನು. 1991ರಲ್ಲಿ ಇದರ 11ನೆಯ ಆವೃತ್ತಿಯು **Ziegler's English-Kannada Dictionary** ಎಂಬ ಹೆಸರಿನಲ್ಲಿ ಹೊರಬಂದಿತು. ಇದರಿಂದ ಇದರ ಜನಪ್ರಿಯತೆ ಹಾಗೂ ಉಪಯುಕ್ತತೆ ಅರಿವಿಗೆ ಬರುತ್ತದೆ.

ಜಿಗ್ಲರ್ ಸುಮಾರು 1820(ಐ.ಮಾ.ಮುತ್ತಣ್ಣನವರ ಪ್ರಕಾರ) / 1832( ಶ್ರೀನಿವಾಸ ಹಾವನೂರರ ಪ್ರಕಾರ) ರಿಂದ 1906 ರವರೆಗೆ ಬದುಕಿ ಬಾಳಿದವನು. 1862ರಲ್ಲಿ ಜರ್ಮನಿಯಿಂಥ ಭಾರತಕ್ಕೆ ಬಂದು 1895ರವರೆಗೆ ಮಂಗಳೂರು ಮತ್ತು ಉತ್ತರ ಕರ್ನಾಟಕವನ್ನು ತನ್ನ ಕನ್ನಡದ ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಕನ್ನಡಕ್ಕಾಗಿ ದುಡಿದನು. ಶಿಕ್ಷಣ ಕ್ಷೇತ್ರದಲ್ಲಿ ಆಗ್ಗೆ ಇವನದು ಬಲು ದೊಡ್ಡ ಹೆಸರು. ಜೀಗ್ಲರ್ ಆ ಕಾಲಕ್ಕೆ ಇತರ ತಜ್ಞರೊಂದಿಗೆ ಶಾಲೆಗಳಲ್ಲಿ ವೇಳಾಪಟ್ಟಿ ರೂಪಣೆ, ಶಿಸ್ತಿನ ಚಾಲನೆ ಮತ್ತು ಪಠ್ಯವಸ್ತು ಹಾಗೂ ವಿದ್ಯಾಕ್ರಮವನ್ನು ರೂಪಿಸಿಕೊಟ್ಟನು. ಧಾರವಾಡದ ಬಾಸೆಲ್ ಮಿಷನ್ ಕೇಂದ್ರದಲ್ಲಿ ಅಧಿಕಾರಿಯಾಗಿದ್ದ ಇವನನ್ನು ಇವನ ಕನ್ನಡದ ಮೇಲಣ ವಿದ್ವತ್ತನ್ನು ಗುರುತಿಸಿ 1893 ಮತ್ತು 1894ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು ಸಂಘದ ಅಧ್ಯಕ್ಷನನ್ನಾಗಿಸಿ ಗೌರವಿಸಿದರು. ಇವನು ಸ್ವತಂತ್ರವಾಗಿ ಮತ್ತು ಇತರರೊಂದಿಗೆ ಒಟ್ಟು ಹನ್ನೊಂದು ಪುಸ್ತಕಗಳನ್ನು ರಚಿಸಿದ್ದಾನೆ.


AN
ENGLISH AND CANARESE
SCHOOL-DICTIONARY
ಶಾಲಾನಿಘಂಟು
A

1) ಕಾವ್ಯಮಾಲಿಕೆ 2) ಕನ್ನಡ ಶಾಲಾ ವ್ಯಾಕರಣ–1866 (ರೆವರೆಂಡ್ ಡಿ

ಕೋಸ್ಟ ಅವರೊಂದಿಗೆ) 3) ಗೀತಗಳು-1867 ( ರೆವರೆಂಡ್ ಬಿ. ಗ್ರೇಟರನೊಂದಿಗೆ) 4) ಪೂರ್ಣಾಂಕ ಗಣಿತಾಭ್ಯಾಸಕ್ಕೆ ತಕ್ಕ ಉದಾಹರಣೆಗಳು-1869 5) ಗಣಿತನ್ಯಾಯ-1870 6) A Practical Key to Canarese Language-1872 ( ಈ ಪುಸ್ತಕದ ವಿವರಣೆಯು ಇಂಗ್ಲಿಷ್, ಜರ್ಮನ್ ಹಾಗು ಫ್ರೆಂಚ್ ಭಾಷೆಗಳಲ್ಲಿದೆ) 7) Hymn Book in Canarese-1875 8) ಇಂಗ್ಲಿಷ್ ಮತ್ತು ಕನ್ನಡ ಶಾಲಾ ನಿಘಂಟು-1876 9) ಗಣಿತಾಭ್ಯಾಸದ ಉದಾಹರಣೆಗಳು-1877 10) ಮಾರ್ಕನು ಬರೆದ ಸುವಾರ್ತೆ ಅಂದರೆ ಮುಕ್ತಿದಾಯಕನ ಚರಿತ್ರೆ-1896 11) ಲೂಕನು ಬರೆದ ಸುವಾರ್ತೆ ಅಂದರೆ ಜಗದ್ರಕ್ಷಕನ ಚರಿತ್ರೆ-1900. ಇವಿಷ್ಟೂ ಜಿಗ್ಲರ್ ರಚಿಸಿದ ಕೃತಿಗಳು. 1895ರಲ್ಲಿ ಜರ್ಮನಿಗೆ ವಾಪಸು ತೆರಳಿ ಅಲ್ಲಿ ಶಿಕ್ಷಕನಾಗಿ ಕೆಲಸ ಮಾಡಿ 1906ರಲ್ಲಿ ನಿಧನ ಹೊಂದಿದನು. ಮುಖ್ಯವಾಗಿ ಜಿಗ್ಲರ್ ಕನ್ನಡದಲ್ಲಿ ಬೈಬಲ್, ನಿಘಂಟು, ವ್ಯಾಕರಣ ಮತ್ತು ಗಣಿತ ಶಾಸ್ತಗಳಲ್ಲಿ ಕೃತಿ ರಚನೆ ಮಾಡಿರುವುದು ವಿಶೇಷ.

ನಿಘಂಟುಗಳಲ್ಲಿ ನಾನಾ ಬಗೆಗಳಿವೆ. ಅವನ್ನು ಹೀಗೆ ವರ್ಗೀಕರಿಸಬಹುದು. 1). ಸ್ವರೂಪಾ ಧಾರಿತ ನಿಘಂಟು ಮತ್ತು 2). ಬಳಕೆದಾರರನ್ನು ಗಮನದಲ್ಲಿರಿಸಿಕೊಂಡ ನಿಘಂಟುಗಳು. ಸ್ವರೂಪಾಧಾರಿತ ನಿಘಂಟುಗಳಲ್ಲಿ ಅ). ಭಾಷಿಕ ನಿಘಂಟುಗಳು- ಇದರೊಳಗೆ 1. ಏಕ ಭಾಷಿಕ 2. ದ್ವಿಭಾಷಿಕ 3. ಬಹುಭಾಷಿಕ ಆ). ಜ್ಞಾತಿಪದ ಕೋಶ ಇ).ಪಾರಿಭಾಷಿಕ ನಿಘಂಟುಗಳು ಈ). ವಿವಿಧ ವಿಷಯಕ ನಿಘಂಟುಗಳು ಇತ್ಯಾದಿ. 2. ಬಳಕೆದಾರರನ್ನು ಗಮನದಲ್ಲಿರಿಸಿಕೊಂಡ ನಿಘಂಟುಗಳಲ್ಲಿ ಅ) ಶಾಲಾಕಾಲೇಜು ನಿಘಂಟುಗಳು ( ವಿದ್ಯಾರ್ಥಿಗಳಿಗೆ) ಆ) ವ್ಯುತ್ಪತ್ತಿ ನಿಘಂಟುಗಳು ( ಸಂಶೋಧಕರಿಗೆ) ಇ) ತಿರುಗ ಮುರುಗ ನಿಘಂಟುಗಳು ( ಪತ್ರಕರ್ತರು, ಸಂಶೋಧಕರು)

ಸಾಮಾನ್ಯ ನಿಘಂಟೊಂದು ಸಾಮಾನ್ಯವಾಗಿ ಎರಡು ಭಾಗಗಳನ್ನೊಳಗೊಂಡಿರುತ್ತದೆ. 1) [ಕೋಷ್ಟಕ ರೂಪದಲ್ಲಿರುವ ನಿಘಂಟಿನಲ್ಲಿ] ಎಡಭಾಗದಲ್ಲಿ ಶಬ್ದಕೋಶವಿದ್ದರೆ 2) ಬಲಭಾಗದಲ್ಲಿ ಅರ್ಥಕೋಶವಿರುತ್ತದೆ. ಶಬ್ದಕೋಶದಲ್ಲಿ ಅಡ್ಡ ಪಾತಳಿಯಲ್ಲಿ ಶಬ್ದಗಳ ವಿವಿಧ ಪ್ರಾದೇಶಿಕ ರೂಪಗಳು ಹಾಗೂ ವಿವಿಧ ಕಾಲದ ಪರ್ಯಾಯಪದ ಹಾಗೂ ರೂಪಗಳಿರುತ್ತವೆ. ಉದ್ದಪಾತಳಿಯಲ್ಲಿ ಅರ್ಥಕೋಶದಲ್ಲಿ ಆಯಾ ವಿವಿಧ ಶಬ್ದ ರೂಪಗಳಿಗೆ ಸಂಬಂಧಿಸಿದ ವಿವಿಧ ಅರ್ಥಗಳ ಮಾರ್ಗಾಂತರಗಳಿರುತ್ತವೆ.

ಭಾಷಿಕ ನಿಘಂಟುಗಳ ಸ್ವರೂಪವೇ ಬೇರೆ. ಎಡಭಾಗದ ಶಬ್ದಕೋಶದ ಭಾಷೆಯು ಆಕರಭಾಷೆ (Source Language).ಬಲಭಾಗದ ಅರ್ಥಕೋಶದ ಭಾಷೆಯು ಗುರಿಭಾಷೆ (Target Language) . ಆಕರ ಭಾಷೆ ಗುರಿಭಾಷೆಗಳು ಒಂದೇ ಆಗಿದ್ದರೆ ಅದು ಏಕಭಾಷಿಕ ನಿಘಂಟು. ಬೇರೆ ಬೇರೆ ಭಾಷೆಗಳಾಗಿದ್ದರೆ ಭಾಷೆಗಳ ಸಂಖ್ಯೆಗಳನ್ನನುಸರಿಸಿ ದ್ವಿಭಾಷಿಕ ಅಥವಾ ಬಹುಭಾಷಿಕ ನಿಘಂಟು ಎಂದು ನಿರ್ದೇಶಿಸಬಹುದು.

ಬಹುಭಾಷಿಕ ನಿಘಂಟುಗಳಲ್ಲಿ **ಕನ್ನಡದ ಭಾರತಿ ಸಂಪಂಗಿರಾಮಯ್ಯನವರ ಭಾಷಾನಿಧಿ** ಎಂಬ ಒಂಬತ್ತು ಭಾಷೆಗಳ ನಿಘಂಟನ್ನು ಉಲ್ಲೇಖಿಸಬಹುದು. ಇದರಲ್ಲಿ ಆಕರಭಾಷೆಯಾದ ಕನ್ನಡ ವಾಕ್ಯಗಳಿಗೆ ಸಂವಾದಿಯಾದ ತಮಿಳು, ತೆಲುಗು, ಮಲಯಾಳ, ಗ್ರಂಥಸ್ಥ, ಸಂಸ್ಕೃತ, ಮರಾಥಿ, ಗುಜರಾತೀ, ಬಂಗಾಳೀ–ಮುಂತಾದ ಎಂಟು ಗುರಿಭಾಷೆಗಳ ವಾಕ್ಯಗಳಿವೆ. ಪ್ರಸ್ತುತ ಟಿಪ್ಪಣಿಕಾರನಿಗೆ ದುರದೃಷ್ಟವಶಾತ್ ಇನ್ನೂ ಈ ಕೃತಿ ಲಭ್ಯವಾಗಿಲ್ಲ. ಇದನ್ನು ನವಭಾಷಾ ನಿಘಂಟು ಎನ್ನಬಹುದು. ಹಾಗೆಯೇ ಇಂಗ್ಲಿಷ್ ಭಾಷೆಯಲ್ಲಿ 1978ರಲ್ಲಿ ನ್ಯೂಯಾರ್ಕಿನ ಅವೆನ್ಯೂ ಬುಕ್ಸ್ ಪ್ರಕಟಿಸಿ ಡೇವಿಡ್ ಶುಮೇಕರ್ ಸಂಪಾದಿಸಿರುವ English, French, German, Hebrew, Italian, Portuguese, Russian, Spanish ಭಾಷೆಗಳನ್ನೊಳಗೊಂಡ **Seven(+one) Language Dictionary**ಯನ್ನು ಸ್ಮರಿಸಿಕೊಳ್ಳಬಹುದು. ಜ್ಞಾತಿಪದಕೋಶಗಳಲ್ಲಿ **Dravidian Etymological Dictionary** ಮುಖ್ಯವಾದದ್ದು.

ವಿಲಿಯಂ ರೀವ್(1832) ಜಾನ್ ಗ್ಯಾರೆಟ್(1886), ಡೇನಿಯಲ್ ಸೇಂಡರ್ಸನ್(1858), ಜೆ.ಬುಚರ್(1899) ಇವರುಗಳ ನಿಘಂಟುಗಳು ಕನ್ನಡ ಆಕರ ಭಾಷೆ ಮತ್ತು ಇಂಗ್ಲಿಷ್ ಗುರಿಭಾಷೆಯಾಗಿರುವ ಪ್ರಧಾನ ದ್ವಿಭಾಷಿಕ ನಿಘಂಟುಗಳು. ಕಿಟೆಲ್‌ರ(1894) ಕೋಶವು ಕನ್ನಡ ಆಕರ ಭಾಷೆ ಹಾಗೂ ಕನ್ನಡ ಮತ್ತು ಇಂಗ್ಲಿಷ್ ಗುರಿಭಾಷೆಯಾಗಿರುವ ನಿಘಂಟು.

ಜಿಗ್ಲರ್‌ನ **ಇಂಗ್ಲಿಷ್ ಮತ್ತು ಕನ್ನಡ ಶಾಲಾನಿಘಂಟು** ಒಂದು ದ್ವಿಭಾಷಿಕ ನಿಘಂಟು. ಇಲ್ಲಿ ಆಕರ ಭಾಷೆ ಇಂಗ್ಲಿಷ್ ಆಗಿದ್ದರೆ ಗುರಿಭಾಷೆಯು ಕನ್ನಡ ಆಗಿದೆ. 19 ನೆಯ ಶತಮಾನದಲ್ಲಿ ಹೆಸರಿಸಬಹುದಾದ ಐದಾರು ಇಂಗ್ಲಿಷ್ ಕನ್ನಡ ದ್ವಿಭಾಷಿಕ ನಿಘಂಟುಗಳಲ್ಲಿ ಪ್ರಸ್ತುತ ನಿಘಂಟು ಮಹತ್ವದ್ದು. ಜಿಗ್ಲರ್‌ನಿಗೆ ಮೊದಲು ವಿಲಿಯಂ ರೀವ್(1821), ಜಾನ್ ಗ್ಯಾರೆಟ್(1844) ಹಾಗೂ ಜಿಗ್ಲರ್‌ನ ನಂತರ ಉಲ್ಲಾಳ ನರಸಿಂಗರಾವ(1891) ಇವರುಗಳ ಇಂಗ್ಲಿಷ್ ಕನ್ನಡ ನಿಘಂಟುಗಳಿವೆ. ಆದರೆ ಈ ನಿಘಂಟುಗಳ ಬಳಕೆದಾರರು ಸಾಮಾನ್ಯ ಓದುಗರಾದರೆ ಜಿಗ್ಲರ್‌ನ ನಿಘಂಟಿನ ಬಳಕೆದಾರರು ಶಾಲಾ ಕಾಲೇಜು ವಿದ್ಯಾರ್ಥಿಗಳು. 522 ಪುಟಗಳ ಪ್ರಸ್ತುತ ನಿಘಂಟಿನಲ್ಲಿ ಸುಮಾರು 27,000 ಇಂಗ್ಲಿಷ್ ಶಬ್ದಗಳಿಗೆ ಕನ್ನಡದಲ್ಲಿ ಅರ್ಥ ನೀಡಲಾಗಿದೆ. ಪ್ರತಿ ಪುಟದಲ್ಲಿ ಎರಡು ಕಾಲಮ್‌ಗಳಲ್ಲಿ ಜಾಗ ವ್ಯರ್ಥವಾಗದಂತೆ

ಕೋಷ್ಟಕ ರೂಪದಲ್ಲಿ **ಸೇರ್ಪಡೆ ಶಬ್ದ** (**Lexeme/ನಿಘಂಟಿಮಾ**) ಗಳನ್ನು ನೀಡಲಾಗಿದೆ. ಕಿಟೆಲ್ಲರ ಕೋಶವು ಪ್ರಕಟವಾಗುವವರೆಗೆ ಮತ್ತು ನಂತರವೂ ಕೂಡ ಈ ಕೋಶವು ಶಾಲಾ ಕಾಲೇಜುಗಳಲ್ಲಿ ಬಹುವಾಗಿ ಉಪಯೋಗದಲ್ಲಿದ್ದಿತು. ಈ ನಿಘಂಟಿನ ಸ್ವರೂಪವನ್ನು ನೋಡುವುದಾದರೆ ಮೊದಲಿಗೆ ಸೇರ್ಪಡೆ ಶಬ್ದದಲ್ಲಿ ಇಂಗ್ಲಿಷ್ ಅಕ್ಷರಗಳನ್ನು ಉಚ್ಚಾರಣಾ ಘಟಕಗಳಾಗಿ ವಿಂಗಡಿಸಿ ನೀಡಲಾಗಿರುತ್ತದೆ. ಉದಾಹರಣೆಗೆ MULTIPLIABLE ಸೇರ್ಪಡೆ ಶಬ್ದವನ್ನು Mul-ti-pli-ea-ble ಎಂಬ ಐದು ಉಚ್ಚಾರಣಾ ಘಟಕಗಳನ್ನಾಗಿ ವಿಂಗಡಿಸಿ ನೀಡಲಾಗಿದೆ. ನಂತರ ಅದರ ಉಚ್ಚಾರಣಾ ಧ್ವನಿರೂಪ (ಇಲ್ಲಿ diacritical mark ಗಳನ್ನು ಬಳಸಲಾಗಿರುತ್ತದೆ). ಬಳಿಕ ಶಬ್ದದ ವ್ಯಾಕರಣೀಯ ಸ್ಥಾನಮಾನ (ನಾಮಪದವೇ, ಕ್ರಿಯಾಪದವೇ ಇತ್ಯಾದಿ). ಆ ಬಳಿಕ ಕನ್ನಡದಲ್ಲಿ ಅದರ ಒಂದು ಮತ್ತು ಅದಕ್ಕೆ ಇರುವ ನಾನಾರ್ಥಗಳನ್ನು ಕೊಡಲಾಗಿದೆ. ಮುಂದೆ ವಿವರಣೆಯೊಳಗೆ ಆದಿಪ್ರತ್ಯಯಗಳೊಂದಿಗೆ ಆ ಶಬ್ದ ಬಂದರೆ ಪಡೆಯುವ ಅರ್ಥಗಳು, ಆ ಶಬ್ದ ಉತ್ತರ ಪ್ರತ್ಯಯಗಳೊಂದಿಗೆ ಪಡೆದುಕೊಳ್ಳುವ ವಿವಿಧಾರ್ಥಗಳನ್ನು ನೀಡಲಾಗಿರುತ್ತದೆ. ಖಚಿತ ಪಡಿಸಿಕೊಳ್ಳಲು ಒಂದೆರಡು ನಿದರ್ಶನಗಳನ್ನು ಗಮನಿಸಬಹುದು.

**High,** (hi), a. 1. ಎತ್ತರವಾದ. ಉದ್ದ, ಉನ್ನತ ; 2. (great), ದೊಡ್ಡ ; 3. (of noble birth), ಅಚ್ಚ, ಅಚ್ಚವಳಿ ;4. (strong), ಬಲವಾದ, ಜೋರು, ಕಡು, ಬಿರು; 5. (abstruse), ಗೂಢ ; 6. (costly), ತುಟ್ಟಿ ; h. price ತುಟ್ಟಿ ಧಾರಣೆ ; 7. (arrogant), ಸೊಕ್ಕಿನ, ಅಹಂಕಾರದ ; 8. (well seasoned), ಖಾರ ; 9. (deep as colour), ಅಚ್ಚ; 10. (remote in time), ಬಹು ಪ್ರಾಚೀನ ; 11. (geog.), ಬಹಳ ಉತ್ತರ, –ದಕ್ಷಿಣ ; h. life ದೊಡ್ಡವರ ಬಾಳ್ವೆ ; h. living ಮೇಲೋಗರ ಉಣ್ಣುವದು, ಇಷ್ಟಭೋಜನ ; h. noon ಮಧ್ಯಾಹ್ನವೇ ; h. priest ಪ್ರಧಾನ ಯಾಜಕ, ಮುಖ್ಯ ಪುರೋಹಿತ ; h. tide ಭರತ ; h. time ಹೊತ್ತು, ವೇಳೆ ; it is h. time ಹೊತ್ತಾಗಿದೆ ; h. treason ರಾಜದ್ರೋಹ ; h. water ಭರತ ; the Most H. ಮಹೋನ್ನತನು, ಪರಮೇಶ್ವರ.

**Bas-ket,** n.ಪುಟ್ಟಿ, ಗೂಡೆ, ಮಂಕ್ರಿ ; a large b. ಹೆಡಿಗೆ, ಹೆಳಿಗೆ, ಜಲ್ಲೆ ; a large b. for storing corn ಗಳಿಗೆ ; B- ma-ker, n. ಮೇದ

ವರ್ಣಗಳಿಗೆ ಸಂಬಂಧಿಸಿದಂತೆ, ಪದರೂಪಕ್ಕೆ ಸಂಬಂಧಿಸಿದಂತೆ, ಅರ್ಥದ ಛಾಯೆಗಳಿಗೆ–ನಾನಾರ್ಥಗಳಿಗೆ ಸಂಬಂಧಿಸಿದಂತೆ ಅತ್ಯಂತ ಸೂಕ್ಷ್ಮಗ್ರಹಿಕೆಗಳೇನಾದರೂ ಇದ್ದ ಪಕ್ಷದಲ್ಲಿ ಆ ಸೂಕ್ಷ್ಮಗಳನ್ನೂ ಕೂಡಾ ಜಿಗ್ಲರ್ ಗಮನಿಸಿ ಅವುಗಳನ್ನು ಆಯಾ ಪುಟಗಳ ಅಡಿಟಿಪ್ಪಣಿಗಳಲ್ಲಿ ನೀಡಿರುತ್ತಾನೆ. ಈತ್ತೀಚಿನವರೆಗೂ ಪುನರ್ಮುದ್ರಣಗೊಳ್ಳುತ್ತಲೇ ಬಂದಿರುವ ಈ ಇಂಗ್ಲಿಷ್ ಕನ್ನಡ ಶಾಲಾನಿಘಂಟು 19ನೆಯ ಶತಮಾನದ ಹತ್ತಾರು ಮಹತ್ವದ ಗಟ್ಟಿಯಾದ ದ್ವಿಭಾಷಿಕ ನಿಘಂಟುಗಳ ಪೈಕಿ ತುಸು ಅನನ್ಯವಾಗಿಯೇ ಉಳಿದುಕೊಂಡಿದೆ.

## ಉಲ್ಲಾಳ ನರಸಿಂಗ ರಾವ್ ಅವರ "ಎ ಕಿಸಮ್‌ವಾರ್ ಗ್ಲಾಸರಿ" ( 1891 )

ಉಲ್ಲಾಳ ನರಸಿಂಗ ರಾವ್ ಅವರ 'ಎ ಕಿಸಮ್‌ವಾರ್ ಗ್ಲಾಸರಿ ಆಫ್ ಕ್ಯಾನರೀಸ್ ವರ್ಡ್ಸ್ ವಿತ್ ಎಕ್ಸ್‌ಪ್ಲನೇಟರಿ ಮೀನಿಂಗ್' ಎಂಬ ಈ ದ್ವಿಭಾಷಿಕ ನಿಘಂಟು 1891 ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಬುಕ್ ಅಂಡ್ ಟ್ರ್ಯಾಕ್ಟ್ ಡಿಪಾಸಿಟರಿಯಲ್ಲಿ ಛಾಪಿಸಲ್ಪಟ್ಟಿದೆ. ಅಷ್ಟಾಂಶ ಡೆಮಿ ಆಕಾರದ 8+224 ಪುಟಗಳ ಈ ಪುಸ್ತಕದ ಅಂದಿನ ಬೆಲೆ 3 ರುಪಾಯಿಗಳು. ಇದು ಒಂದು ಕನ್ನಡ–ಇಂಗ್ಲಿಷ್ ದ್ವಿಭಾಷಿಕ ನಿಘಂಟು. ಮೈಸೂರು ವಿಶ್ವವಿದ್ಯಾನಿಲಯದ 'ಕನ್ನಡ ಗ್ರಂಥಸೂಚಿ–ಸಂಪುಟ,2' ರಲ್ಲಿ ಈ ನಿಘಂಟನ್ನು ಕುರಿತು ಇಂಗ್ಲಿಷ್–ಕನ್ನಡ ನಿಘಂಟುಗಳ ಅಡಿಯಲ್ಲಿ ತಪ್ಪಾಗಿ ಪಟ್ಟೀಕರಿಸಲಾಗಿದೆ ಮತ್ತು ಇವರ ಇನ್ನೊಂದು ಅಪರೂಪದ ಕೃತಿಯ ಹೆಸರಿನ ನಮೂದು ಇಲ್ಲ. ಮಂಗಳೂರು ಪ್ರಾಂತ್ಯದವರಾದ ಇವರ ಮತ್ತೊಂದು ಕೃತಿ ಎಂದರೆ 1912 ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಬುಕ್ ಅಂಡ್ ಟ್ರ್ಯಾಕ್ಟ್ ಡಿಪಾಸಿಟರಿಯಲ್ಲಿ ಪ್ರಕಟವಾದ 88 ಪುಟಗಳ ' ಎ ಹ್ಯಾಂಡ್ ಬುಕ್ ಆಫ್ ಕ್ಯಾನರೀಸ್ ಪ್ರಾವರ್ಬ್ಸ್ ವಿತ್ ಇಂಗ್ಲಿಷ್ ಈಕ್ವಲೆಂಟ್ಸ್ ' ಎಂಬ ಅತ್ಯಂತ ವಿಶಿಷ್ಟ ಮತ್ತು ಉಪಯುಕ್ತ ಪುಸ್ತಕ. 1894 ರಲ್ಲಿ ರೆ॥ ಎಫ್.ಕಿಟ್ಟೆಲ್ ಪ್ರಕಟಿಸಿದ ಕನ್ನಡ–ಇಂಗ್ಲಿಷ್ ಕೋಶದಲ್ಲಿ


A KISAMWÁR GLOSSARY

OF

KANARESE WORDS WITH EXPLANATORY MEANING.

Accounts and Book-keeping.

[Kannada] addává. A balance-sheet (S. C., & M.).

[Kannada], [Kannada] asavari, asvari. A miscellaneous cash account in which alms to beggars and other nondescript items are entered [illegible].

[Kannada] ittani. A total; –[Kannada] (-bareya) to put down the total.

[Kannada] šivari. A cadjan-leaf book or any other paper given by a landlord to the tenant, or by a master to his servant or [illegible] for the purpose of entering the payments and receipts respectively [illegible]

[Kannada] digs. Items of different accounts [illegible] put down and not entered under their proper heads in a journal [illegible]; [illegible] day book or journal (S. C.). [illegible] a fair diary [illegible] a rough diary [illegible] entered under proper heads (W.); ledger and journal (S. C.).

[Kannada] kada. A loan; [illegible] "credit" as opposed to "cash", [illegible] temporary loan; [Kannada] (kailása-) lit. a loan to be repaid in Kailása or the heaven, hence a loan which is irrecoverable or not meant to be repaid by the borrower, a "bad debt" (S. C.).

[Kannada] kirdi. A day-book, journal, otherwise [illegible] cash account, account of money received.

[Kannada] kharču. Expenditure, disbursements; [Kannada] (chillara-) petty expenses; [illegible] expenditure not to be taken into account [illegible]

**ಕಿಟ್ಟೆಲ್** ಬರೆದ ಪ್ರಿಫೇಸಿನಲ್ಲಿ ಎಲ್ಲಿಯೂ ತಮ್ಮ ಕೃತಿಗೆ ಮೂರು ವರ್ಷಗಳ ಹಿಂದಷ್ಟೇ **ಮಂಗಳೂರಿನ ಬಾಸೆಲ್ ಮಿಷನ್ ಬುಕ್ ಅಂಡ್ ಟ್ರ್ಯಾಕ್ ಡಿಪಾಸಿಟರಿಯಲ್ಲೇ** ಪ್ರಕಟವಾಗಿದ್ದ ಈ **ಕಿಸಮ್‌ವಾರ್ ಗ್ಲಾಸರಿ** ಯನ್ನಾಗಲೀ ಗ್ರಂಥಕರ್ತ **ಉಲ್ಲಾಳ ನರಸಿಂಗ ರಾವ್** ಅವರನ್ನಾಗಲೀ ಪ್ರಸ್ತಾಪಿಸದೆ ಇರುವುದು ಅತ್ಯಂತ ಆಶ್ಚರ್ಯದ ಸಂಗತಿ. ಅದರಲ್ಲಿಯೂ 1821 ರಲ್ಲಿ ಪ್ರಕಟವಾಗಿರುವ **ಎ.ಡಿ.ಕ್ಯಾಂಪ್‌ಬೆಲ್** ಅವರ **'A Dictionary of the Teloogoo Language'** ಮತ್ತು 1834ರಲ್ಲಿ ಪ್ರಕಟವಾದ **ರೆ॥ ಜೆ.ಪಿ.ರಾಟ್ಲರ್** ಅವರ **'A Dictionary of the Tamil and English Languages'** ಮುಂತಾದುವುಗಳನ್ನು ಪ್ರಸ್ತಾಪಿಸಿ **ಉಲ್ಲಾಳರ** ಹೆಸರನ್ನು ಪ್ರಸ್ತಾಪಿಸದಿರುವುದು ಒಂದು ದೊಡ್ಡ ಸೋಜಿಗವೆಂದೇ ಹೇಳಬೇಕು. ನಿಘಂಟುಗಳನ್ನು ಕುರಿತ ಚರ್ಚೆಗಳ ಸಂದರ್ಭದಲ್ಲಿ ಹೆಸರಿಸಲೇಬೇಕಾದ ಆದರೆ ಕನ್ನಡದಲ್ಲಿ ಅತ್ಯಂತ ಅವಜ್ಞೆಗೆ ಒಳಪಟ್ಟ ಒಂದು ಮಹತ್ವದ ನಿಘಂಟು ಇದು ಎಂದು ಹೇಳದೆ ವಿಧಿಯಿಲ್ಲ.

**ಕಿಸಮ್‌ವಾರ್** ಅಥವಾ **ಕಿಸಮುವಾರು** ಎಂಬ ಶಬ್ದ ಈಗ ಬಳಕೆಯಿಂದ ತಪ್ಪಿ ಹೋಗಿದೆ. ಈ ಶಬ್ದದ ಮೂಲ **'ಕಿಸಮು'**. ಹಾಗೆಂದರೆ **ಬಗೆ, ಪ್ರಕಾರ, ಬೇಧ** ಎಂದು ಅರ್ಥ. ಈ ಶಬ್ದದ ಮೂಲ **'ಕಿಸ್ಮ್'** ಎಂಬ **ಅರೇಬಿಕ್** ಶಬ್ದ. **'ಕಿಸಮ್‌ವಾರ್'** ಎಂದರೆ **'ಪ್ರಕಾರಗಳನ್ನು ಅನುಸರಿಸಿ ಮಾಡಿದ ವಿಂಗಡಣೆ'** ಎಂದರ್ಥ. ಇಂಗ್ಲಿಷ್ ಭಾಷೆ ಯಲ್ಲಿ **ಗ್ಲಾಸರಿ** ಎಂದರೆ **ಒಂದು ನಿರ್ಧಿಷ್ಟ ಆಯ್ದ ಕ್ಷೇತ್ರದ ಶಬ್ದಗಳ ಹಾಗೂ ಪಾರಿಭಾಷಿಕ ಪದಗಳ ಕ್ರಮವಾದ ಪಟ್ಟಿ** ಎಂದರ್ಥ. ಕನ್ನಡ ಆಕರ ಭಾಷೆಯಾಗಿ ಇಂಗ್ಲಿಷ್ ಗುರಿಭಾಷೆಯಾಗಿರುವ ವಿವಿಧ ಸಾಮಾಜಿಕ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಬಳಸಬಹುದಾದ ಒಂದು ನಿರ್ದಿಷ್ಟ ಬಳಕೆದಾರರ ದ್ವಿಭಾಷಿಕ ವಿಶಿಷ್ಟ ನಿಘಂಟು ಇದು. ಸಸ್ಯಶಾಸ್ತ್ರ, ನ್ಯಾಯಾಂಗ, ವ್ಯವಸಾಯ ವಿಜ್ಞಾನ, ಲೋಹ ಶಾಸ್ತ್ರ, ಸಂಗೀತ, ಜ್ಯೋತಿಷ್ಯ, ಜಲಶಾಸ್ತ್ರ,

ಖಗೋಳ ವಿಜ್ಞಾನ, ವಾಸ್ತುಶಿಲ್ಪ ವಿಜ್ಞಾನ, ಸೈನ್ಯ ವಿಚಾರ ಪರಿಭಾಷೆ ಮುಂತಾದ ವಿವಿಧ ಸಾಮಾಜಿಕ ಕ್ಷೇತ್ರಗಳಲ್ಲಿ ಪದೇ ಪದೇ ಬಳಸಲಾಗುವ ದೈನಂದಿನ ಕನ್ನಡ ಶಬ್ದಗಳಿಗೆ ಈ ನಿಘಂಟಿನೊಳಗೆ ಇಂಗ್ಲಿಷ್ ಭಾಷೆಯಲ್ಲಿ ಅರ್ಥಗಳನ್ನು ನೀಡಲಾಗಿದೆ. ಈ ನಿಟ್ಟಿನಲ್ಲಿ ಸ್ವರೂಪದ ದೃಷ್ಟಿಯಿಂದ ಈ ನಿಘಂಟಿನ ನಾಮನಿರ್ದೇಶನವಾದ **ಕಿಸಮ್‌ವಾರ್ ಗ್ಲಾಸರಿ** ಎನ್ನುವ ಹೆಸರು ಅನ್ವರ್ಥಕವಾಗಿದೆ. ಈ ಕೃತಿಯು ಪ್ರಿಫೇಸ್, ಕಂಟೆಂಟ್ಸ್, ಕೀ ಟು ಟ್ರಾನ್ಸ್ಲಿಟರೇಷನ್, ಅಬ್ರಿವಿಯೇಷನ್ಸ್, ಅಡಿಷನ್ಸ್ ಅಂಡ್ ಕರೆಕ್ಷನ್ಸ್, ನಿಘಂಟು, ಸಪ್ಲಿಮೆಂಟಲ್ ಲಿಸ್ಟ್ ಆಫ್ ವರ್ಡ್ಸ್ ಹಾಗೂ 44 ಪುಟಗಳ ಇಂಡೆಕ್ಸ್ ಇಷ್ಟು ಅಂಶಗಳನ್ನು ಒಳಗೊಂಡಿದೆ. ಪ್ರಸ್ತಾವನೆಯಲ್ಲಿ **ನರಸಿಂಗ ರಾವ್** ಅವರು "An arbitrary but convenient plan of grouping together technical and other words under different heads has been adopted; and this arrangement will I hope , be found suitable for purposes of ready reference by persons interested in a particular subject, by translators of official documents and the several Administrations. Official terms have been explained, and the use of words localized; information scattered in various works, inaccessible to many owing to their value or rarity, brought together and concentrated to effect a saving of time and labor." ಎಂದು ಈ ಕೃತಿಯ ಹಿನ್ನೆಲೆಯನ್ನು ಪ್ರಸ್ತಾಪಿಸುತ್ತಾರೆ. ಈ ಕೃತಿಯ ಮುದ್ರಣ ಪ್ರತಿಯ ತಯಾರಿಕೆಯಲ್ಲಿ ತಮಗೆ ನೆರವು ನೀಡಿದ ಮಂಗಳೂರಿನಲ್ಲಿ ಹೋಮಿಯೋಪಥಿ ಶಾಸ್ತ್ರಪಾರಂಗತರಾಗಿದ್ದ ಹಾಗೂ ನಿಘಂಟು ರಚನೆಯಲ್ಲಿ ಕಿಟ್ಟೆಲ್‌ರಿಗೆ ವಿಶೇಷ ನೆರವು ನೀಡಿದ್ದ ಮತ್ತು ಬಹು ಮುಖ್ಯವಾಗಿ **ವ್ಯಾಯಾಮ ದೀಪಿಕೆ** (1896), **ಗೃಹೋಪಯೋಗದ ಹೋಮಿಯೋಪಥಿ** (1920), **ರೋಗಚಿಕಿತ್ಸೆ** (ಸುಮಾರು 1900) ಎನ್ನುವ ಮೂರು ಪುಸ್ತಕಗಳನ್ನು ರಚಿಸಿದ್ದ **ಭಾರದ್ವಾಜ ಶಿವರಾವ್** ಅವರನ್ನು ಹಾಗೂ **ಯು. ರಘುನಾಥಯ್ಯ** ಎನ್ನುವವರನ್ನು ಪ್ರಸ್ತಾವನೆಯಲ್ಲಿ ಸ್ಮರಿಸಿಕೊಂಡಿದ್ದಾರೆ. ಶಬ್ದಗಳನ್ನು ಒಟ್ಟು 27 ಶಿಸ್ತುಗಳನ್ನಾಗಿ ವಿಂಗಡಿಸಿ ಸುಮಾರು 5000 ದೇಶ್ಯ, ಅನ್ಯದೇಶ್ಯ ಶಬ್ದಗಳಿಗೆ ಇಂಗ್ಲಿಷ್ ಭಾಷೆಯಲ್ಲಿ ಅರ್ಥವನ್ನು ನೀಡಲಾಗಿದೆ. ಲೆಕ್ಕ ಮತ್ತು ಪುಸ್ತಕ ನಿರ್ವಹಣೆ, ಆಪ್ತತೆ ಮತ್ತು

ಸಂಬಂಧಗಳು, ವ್ಯವಸಾಯ ಮತ್ತು ಗ್ರಾಮೀಣ, ಶರೀರರಚನೆ ಹಾಗೂ ಅಂಗಾಂಗ ಶಾಸ್ತ್ರ, ವಾಸ್ತುಶಿಲ್ಪ- ಬಡಗಿ- ಶಿಲ್ಪ ಹಾಗೂ ಜೋಡಣೆ ಶಾಸ್ತ್ರ, ಜ್ಯೋತಿಷ್ಯ ಹಾಗೂ ಖಗೋಳ ವಿಜ್ಞಾನ, ಸಸ್ಯ ವಿಜ್ಞಾನ, ಸಿವಿಲ್ ಹಾಗೂ ಕಾನೂನು, ವರ್ಣ ಮತ್ತು ಎರಕ, ವಾಣಿಜ್ಯ, ಅಪರಾಧ ಮತ್ತು ಪೋಲೀಸು, ವಿಭಾಗೀಯ ಮತ್ತು ಕಛೇರೀಯ, ಗೃಹ ಮತ್ತು ಆವರಣ. ಯಾನ ಮತ್ತು ಉಪಕರಣಗಳು, ಭೂಮಿತಿ, ಕಾಗದಪತ್ರಗಳು, ವೈದ್ಯಕೀಯ ಮತ್ತು ಪಶುವೈದ್ಯಕೀಯ, ಲೋಹಗಳು, ಸೈನ್ಯ, ಗಣಿಗಾರಿಕೆ, ಪೂರಕ ವಿಚಾರಗಳು, ಸಂಗೀತ, ಜಲ ಮತ್ತು ನೆಲಗಳ ಪ್ರಾಕೃತಿಕ ಹಾಗೂ ಕೃತಕ ವಿಭಜನೆಗಳು, ಅಮೂಲ್ಯ ಶಿಲೆಗಳು, ಕಂದಾಯ, ನೌಕಾಸಂಗತಿಗಳು, ಅಳತೆ ಹಾಗೂ ತೂಕ ಇವೇ ಮುಂತಾದ ವಿಭಾಗಗಳಲ್ಲಿ ಪ್ರಕಾರಗಳನ್ನು ಅನುಸರಿಸಿ ವಿಂಗಡಣೆ ಮಾಡಿ ಆಯಾ ಶಿರ್ಷಿಕೆಗಳ ಅಡಿಯಲ್ಲಿ ಸೇರ್ಪಡೆ ಶಬ್ದಗಳನ್ನು ನೀಡಲಾಗಿದೆ. ತಮಗೆ ಬೇಕಾದ ಕ್ಷೇತ್ರಗಳಲ್ಲಿ ಬಳಕೆದಾರರು ಶಬ್ದಗಳನ್ನು ಹುಡುಕಲು ಇದರಿಂದ ಅನುಕೂಲವಾಗಿದೆ.

ಮೊದಲು ಕನ್ನಡ ಲಿಪಿಯಲಿ ಒಂದು ಸೇರ್ಪಡೆ ಶಬ್ದ , ನಂತರ ಅಂತರ್‌ರಾಷ್ಟ್ರೀಯ ಧ್ವನಿಲಿಪಿಯಲ್ಲಿ ಆ ಶಬ್ದದ ಇಂಗ್ಲಿಷ್ ರೂಪ, ಆ ನಂತರ ಆವರಣ ಚಿಹ್ನೆಗಳೊಳಗೆ ಸಂಕೇತಾಕ್ಷರಗಳಲ್ಲಿ ಆ ಶಬ್ದ ರೂಢಿಯಿರುವ ಪ್ರದೇಶ, ಇಂಗ್ಲಿಷ್ ಭಾಷೆಯಲ್ಲಿ ಆ ಶಬ್ದಕ್ಕೆ ಅರ್ಥ, ನಂತರ ಸೇರ್ಪಡೆ ಶಬ್ದದ ಆದಿಪ್ರತ್ಯಯದೊಂದಿಗಿನ ಅಥವಾ ಅಂತ್ಯಪ್ರತ್ಯಯದೊಂದಿಗಿನ ರೂಪಗಳು ಹಾಗೂ ಅವುಗಳ ಅರ್ಥ–ಈ ಕ್ರಮವನ್ನು ಸೇರ್ಪಡೆ ಶಬ್ದಾರ್ಥಕ್ಕೆ ಕೊಡುವ ಕ್ರಮವನ್ನು ಉಲ್ಲಾಳ ನರಸಿಂಗ ರಾವ್ ಅವರು ಅನುಸರಿಸಿದ್ದಾರೆ.

ಇದನ್ನು ಮನದಟ್ಟುಮಾಡಿಕೊಳ್ಳಲು ಈ ಕೃತಿಯಿಂದ ಕೃತಿಕಾರರು ನೀಡಿರುವ ಕೆಲವು ನಿದರ್ಶನಗಳನ್ನು ಗಮನಿಸೋಣ:

**Civil and judicial** ವಿಭಾಗದಲ್ಲಿ **ಅಡವು, ಅಡಮಾನ** ಶಬ್ದಗಳಿಗೆ ಇಂಗ್ಲಿಷಿನಲ್ಲಿ ಹೀಗೆ ಅರ್ಥಗಳನ್ನು ನೀಡಲಾಗಿದೆ: **ಅಡವು, ಅಡಮಾನ** adavu, adamana. A mortgage; -ಚೇಟು, –ದಸ್ತವೇಜು (–chetu, -dastveju) a mortgage-deed; ತೋರ್– (tor-) a species of mortgage of real property, in which some land or part of an estate is pointed as security for the repayment of a loan (Chamier's Land Tenures of Canara 1853); a mortgage

without possession, an hypothecated mortgage (South Canra); ಭೋಗ್ಯಾದಿ– (bhogyadi-) a mortgage of real property in which the land itself is made over to the mortgagee, a usufructuary mortgage; -ಯದುರುನುಡಿ (–yadurunudi ) a receipt obtained by the mortgager of property from the mortgagee for things left as security for the debt ( Wilson's Glossary); a counterpart of a mortgage-deed (South Canara); ಮೇಲ್– (mel-) a second mortgage (South Canara) .

ಉಲ್ಲಾಳ ನರಸಿಂಗ ರಾವ್ ಅವರು ಇಂಗ್ಲಿಷ್ ಭಾಷೆಯಲ್ಲಿಯೂ ವಿದ್ವಾಂಸರಾದದ್ದರಿಂದ ಅವರು ನೀಡುವ ಅರ್ಥಗಳು ನಿಖರವಾಗಿಯೂ ನಿರ್ದುಷ್ಟವಾಗಿಯೂ ಕರಾರುವಾಕ್ಕಾಗಿಯೂ ಅತ್ಯಂತ ಸೂಕ್ತವಾಗಿಯೂ ಇರುತ್ತವೆ ಎಂಬುದಕ್ಕೆ ಬಿಡುಮಾನ್ಯಳು ಎನ್ನುವ ಶಬ್ದಕ್ಕೆ ಅವರು ನೀಡಿರುವ ಅರ್ಥವನ್ನು ಗಮನಿಸೋಣ :

**ಬಿಡುಮಾನ್ಯಳು** bidumanyalu. A wife divorced by her husband according to the Aliyasanthana law. Bhutalapandya defines ಬಿಡುಮಾನ್ಯಳು as a woman who (1) has become pregnant through a person socially lower than herself, (2) after puberty, has eloped with a person of an inferior caste, (3) has eloped with a person of an inferior caste after a divorce from her husband (South Canara).

ಎಲ್ಲ ಸಾಮಾಜಿಕ ಕ್ಷೇತ್ರಗಳ ಅದರಲ್ಲಿಯೂ ಮುಖ್ಯವಾಗಿ ವಾಣಿಜ್ಯ, ಕೋರ್ಟುಕಚೇರಿ ವ್ಯವಹಾರಗಳು, ಭೂಜಲ ಸಂಬಂಧೀ ವಿಚಾರಗಳಿಗೆ ಸಂಬಂಧ ಪಟ್ಟ ಶಬ್ದಗಳನ್ನು ಕುರಿತು ಶಿಕ್ಷಣಪ್ರಸಾರ ವ್ಯಾಪಕವಾಗುತ್ತಿದ್ದ ಕಾಲಘಟ್ಟದಲ್ಲಿ ರಚನೆಗೊಂಡ **ಎ ಕಿಸಮ್‌ವಾರ್ ಗ್ಲಾಸರಿ ಆಫ್ ಕ್ಯಾನರೀಸ್ ವರ್ಡ್ಸ್** ಶಬ್ದಕೋಶವು ಅತ್ಯಂತ ವಿಶಿಷ್ಟವೂ ವಿರಳವೂ ಅಪರೂಪವೂ ಆದ ಬಹೂಪಯೋಗಿ ನಿಘಂಟು ಎನ್ನುವ ಕೀರ್ತಿಗೆ ಭಾಜನವಾಗಿದೆ.

## ಟಿ.ಜಿ.ಮಾಬೆನ್ ಅವರ ಚಿಕ್ಕ ಚೊಕ್ಕ ಕನ್ನಡ-ಹಿಂದುಸ್ಥಾನಿ ಭಾಷಾಮಂಜರಿ (1904)

ಇದು ಬಾಸೆಲ್ ಮಿಷನ್ ಪ್ರೆಸ್ಸಿನಲ್ಲಿ ೧೯೦೪ ರಲ್ಲಿ ಎರಡನೆಯ ಮುದ್ರಣಗೊಂಡ ಕೃತಿ. ಇದರ ಲೇಖಕ ಟಿ.ಜಿ. ಮಾಬೆನ್ ಎಂಬುವರು. ಎರಡನೆಯ ಛಾಪೆ-ಬಹು ದೊಡ್ಡದು ಮಾಡಿಯದೆ- ಎಂಬ ಒಕ್ಕಣೆಯು ಶೀರ್ಷಿಕೆಯ ಅಡಿಯಲ್ಲಿ ಅಚ್ಚಾಗಿದೆ. ಮೊದಲನೆಯ ಮುದ್ರಣ ಯಾವಾಗ ಆಯಿತು ಎಂಬ ಸೂಚನೆಯು ಕೃತಿಯ ಆರಂಭದಲ್ಲಿರುವ ಮೊದಲನೆಯ ಮುದ್ರಣದ ಪೀಠಿಕೆಯ ಅಂತ್ಯದಲ್ಲಾಗಲೀ ಅಥವಾ ಕೃತಿಯ ಯಾವುದೇ ಭಾಗ ದಿಂದಲಾಗಲೀ ಗೊತ್ತಾಗುವುದಿಲ್ಲ. ಐದು ಮುದ್ರಣ ಕಂಡಿರುವ ಈ ಕೃತಿಯು ಎರಡನೆಯ ಮುದ್ರಣದ ಪೀಠಿಕೆಯಲ್ಲಿ ಬರುವ "ಮೊದಲನೆಯ ಮುದ್ರಣವು ಬಹು ಬೇಗ ಖರ್ಚಾಗಿ ಹೋದ್ದರಿಂದ ಎರಡನೆಯ ಮುದ್ರಣ ಬೇಗನೆ ಮಾಡಿಸಬೇಕಂತಲೂ, ಅದರಲ್ಲಿ ಊರ ಸಾಧಾರಣ ಮಾತುಗಳನ್ನು ಸಹ ಪ್ರಯೋಗಿಸಬೇಕಂತಲೂ ಅನೇಕರು ಅಪೇಕ್ಷಿಸಿದ ಕಾರಣ ಎರಡನೆಯ ಮುದ್ರಣವನ್ನು ಮಾಡಿಸಲಾಯಿತು; ಇದರಲ್ಲಿ ಹೆಚ್ಚು ಸಂಭಾಷಣಾವಾಕ್ಯಗಳನ್ನು ನಮ್ಮ ಊರ ಸಾಧಾರಣ ಮಾತುಗಳಿಂದ ರಚಿಸಿ ಕೂಡಿಸಲಾಗಿದೆ. ..... ಕೆಲವು ಕಡೆಗಳಲ್ಲಿ ಹಳ್ಳೀ ಮಾತುಗಳೂ ಸಿಕ್ಕು ವುವು." ಎಂಬ ಲೇಖಕರ ಮಾತುಗಳಿಂದ ಸುಮಾರು ಮೂರು ನಾಲ್ಕು ವರ್ಷಗಳ ಹಿಂದಷ್ಟೆ ಅರ್ಥಾತ್ ಸುಮಾರು ೧೯೦೦ ರಲ್ಲಿ ಇದರ


CANARESE GUIDE
TO
HINDUSTANI CONVERSATION
ಭಾಷಾಮಂಜರಿ
THE BANGALORE CITY
CO-OPERATIVE SOCIETY LTD.
NEW TARAGUPET
1904



ಪ್ರಥಮ ಮುದ್ರಣ ಬಂದಿರಬಹುದೆಂದು ಊಹೆ ಮಾಡಲು ಅವಕಾಶವಿದೆ. ಲೇಖಕ ಟಿ.ಜಿ. ಮಾಬೆನ್ ಯಾರು? ಅವರ ಉಳಿದ ಕೃತಿಗಳು ಇದ್ದರೆ ಯಾವುವು ? ಎಂಬುದನ್ನು ಗಮನಿಸೋಣ. ತಿಮೋಜಿ ಜಿ. ಮಾಬೆನ್ ಎಂಬ ಇವರ ಕನ್ನಡ ವ್ಯಾಕರಣ ಬೋಧಿನಿ' ಕೃತಿಯು 1896 ರಲ್ಲಿ ಬಾಸೆಲ್ ಮಿಷನ್ ಬುಕ್ ಮತ್ತು ಟ್ರಾಕ್ಟ್ ಡೆಪಾಸಿಟರಿಯಿಂದ ಮುದ್ರಣಗೊಂಡಿದೆ. ಈ ಎರಡನೆಯ ಮುದ್ರಣವು ಚೊಕ್ಕವೂ ನಿರ್ದೋಷವೂ ಆಗುವಂತೆ ರಿಯಾಯತಿ ಇಟ್ಟ ಛಾಪಾ ಖಾನೆಯ ಯಜಮಾನರಾದ ಎ. ಬಯರ್ ಬಾಖ್ ದೊರೆ ಯೆಂಬವರಿಗೆ ಟಿ.ಜಿ. ಮಾಬೆನ್ ರವರು ಕೃತಜ್ಞತೆಗಳನ್ನು ಅರ್ಪಿಸಿರುತ್ತಾರೆ. ಸುಮಾರು ಮಧ್ಯಮ ಗಾತ್ರದ ಜೇಬಿನಾಕಾರ ವಿನ್ಯಾಸದ, ೭೦ ಪುಟಗಳ ಈ ಪುಸ್ತಕದ ಆಗಿನ ರಿಯಾಯತಿ ಬೆಲೆ-ಕ್ರಯ ನಾಲ್ಕು ಆಣೆ. ಲೇಖಕ ಈ ಕೃತಿಯನ್ನು ಇಂಗ್ಲಿಷ್ ಭಾಷೆಯಲ್ಲಿ A canarese guide to Hindustani conversation ಎಂದು ನಿರ್ದೇಶಿಸಿದ್ದಾನೆ. ಇದರಲ್ಲಿ ಮುದ್ರಣವಾಗಿರುವ ಮೊದಲನೆಯ ಮುದ್ರಣದ ಪೀಠಿಕೆಯ ಮಾತುಗಳ ಪ್ರಕಾರ ಬಾಸೆಲ್ ಮಿಷನ್ ಛಾಪಾಖಾನೆಯ ಅಂದಿನ ಮಾಲಿಕರು ಜಿ.ಹಿರ್ನರ್ ದೊರೆಯವರು.

"ಹಿಂದುಸ್ಥಾನಿ ಭಾಷೆಯು ಪ್ರಯಾಣ ವ್ಯಾಪಾರಾದಿಗಳಲ್ಲಿ ಜನರೊಳಗಣ ವಹಿವಾಟಕ್ಕೆ ಬಹುಪ್ರಯೋಜನಕರವಾದ್ದರಿಂದ ಅದನ್ನು ಒಂದಿಷ್ಟು ತಿಳಿಯಲಿಕ್ಕೂ ಮಾತಾಡಲಿಕ್ಕೂ ಕಲಿಯಬೇಕೆಂಬ ಆಶೆಯು ಶಹರುಗಳನ್ನು ನೋಡುವ ಸಮಸ್ತರಲ್ಲಿಯೂ ಹುಟ್ಟುತ್ತದೆ. ಆದ್ದರಿಂದ ವ್ಯಾಕರಣವಿದ್ಯೆ ತಿಳಿದವರಿಗೆ ಮಾತ್ರವಲ್ಲ, ತಿಳಿಯದವರಿಗೂ ಆ ಭಾಷೆಯನ್ನು ತಕ್ಕಷ್ಟು ಆಡುವಂತೆ ಸಹಾಯವಾಗಬೇಕೆಂಬ ಇರಾದೆಯಿಂದ ಈ ಸಣ್ಣ ಕೃತಿಯನ್ನು ಪ್ರಕಟಿಸಲಾಯಿತು." ಎಂದು ಲೇಖಕರು ಈ ಕೃತಿಯ ಉದ್ದೇಶವನ್ನು ತಿಳಿಸಿರುತ್ತಾರೆ.

ಒಂದು ಒಳ್ಳೆಯ ವ್ಯಾಕರಣ–cum-ನಿಘಂಟು–cum- ಭಾಷಾವಿಜ್ಞಾನದ ಪುಸ್ತಕವಾಗಬಹುದಾಗಿದ್ದ ಲಕ್ಷಣಗಳು ಈ ಕೃತಿಗಿದೆ. ಆದರೆ ಕೃತಿಯ ಉದ್ದೇಶ ಒಂದು ಭಾಷೆಯನ್ನು ಸಾಮಾನ್ಯ ಜನರಿಗೆ ತಿಳಿಸಿ ಕೊಡುವುದಾಗಿದ್ದದ್ದರಿಂದ ಆ ಉದ್ದೇಶವು ನೆರವೇರಿಲ್ಲ. ತಾನು ಹಾಕಿಕೊಂಡ ಉದ್ದೇಶದ ಮಿತಿಯೊಳಗೆ ಇದು ಸಫಲವಾಗಿರುವ ಕೃತಿಯೇ ಸರಿ. ಈ ಪುಸ್ತಕದ ಉದ್ದೇಶಿತ ಭಾಷೆ ಹಿಂದೂಸ್ಥಾನಿ, ಉಲ್ಲೇಖಿತ ಭಾಷೆ ಕನ್ನಡ. ಉದ್ದೇಶಿತ ಹಿಂದುಸ್ಥಾನಿ ಭಾಷೆಯ ಧ್ವನಿವಿಜ್ಞಾನ ಹಾಗೂ ವ್ಯಾಕರಣ ಪ್ರಕ್ರಿಯೆಗಳನ್ನು ಉಲ್ಲೇಖಿತ ಕನ್ನಡ ಭಾಷೆಯಲ್ಲಿ ಸರಳವಾಗಿ ನಿರೂಪಿಸಿರುತ್ತಾರೆ.

ಒಟ್ಟು ೩೧ ಚಿಕ್ಕ ಚಿಕ್ಕ ವಿಭಾಗಗಳಿರುವ ಈ ಭಾಷಾಮಂಜರಿ ಕೃತಿಯಲ್ಲಿ ಪದದ ನೆಲೆ, ವಾಕ್ಯದ ನೆಲೆ ಮತ್ತು ವ್ಯಾಕರಣದ ವಿವಿಧ ಪ್ರಕ್ರಿಯೆಗಳ ನೆಲೆಯಲ್ಲಿ ಕನ್ನಡ–ಹಿಂದುಸ್ಥಾನಿ ದ್ವಿಭಾಷಿಕ ನಿಘಂಟಿನ ದ್ವೀಪಗಳಿವೆ. ವಾಕ್ಯದ ನೆಲೆಯ ನಿಘಂಟು ಭಾಷಾಂತರಕಾರರಿಗೆ ತುಂಬಾ ಉಪಯುಕ್ತವಾಗಿದೆ,

ಮೊದಲನೆಯ ವಿಭಾಗದಲ್ಲಿ ಹಿಂದೂಸ್ಥಾನಿ ಭಾಷೆಯ ಕೆಲವು ಅಕ್ಷರಗಳ ವಿಶಿಷ್ಟ ಉಚ್ಚಾರಣೆಯನ್ನು ಸ್ಪಷ್ಟೀಕರಿಸುತ್ತಾರೆ. "ಉದಾಹರಣೆಗೆ ಜ'– ಎಂಬ ಅಕ್ಷರವನ್ನು ಕುರಿತು ಗಮನಿಸಿ:

" ಜ' " ಎಂಬುದಾಗಿ ಮೇಲೆ (') ಈ ಗುರುತು ಕಾಣಿಸಿ ಬರೆದಿದ್ದಲ್ಲಿ, ಇಂಗ್ಲಿಷ್ z ಉಚ್ಚಾರ ಮಾಡಬೇಕು; ಅದಕ್ಕೆ ಸುಮಾರು " ದ್ಸ " ಎಂಬ ಉಚ್ಚಾರಣೆ ಬರುತ್ತದೆ. ಉದಾ: ಜಿ'ಯಾದ್, ಜ'ಮೀನ್, ಜ'ರೂರ್, ಇತ್ಯಾದಿ. [ ಇದಕ್ಕೆ ಗ್ರಾಮ್ಯವಾಗಿ ಕನ್ನಡದ " ಜ" ಉಚ್ಚಾರಣೆ ಕೊಡುವುದುಂಟು. ಹ್ಯಾಗಂದರೆ–ಜಿಯಾದ್, ಜಮೀನ್, ಜರೂರ್ ಇತ್ಯಾದಿ.]

ಅರ್ಧಾಕ್ಷರ ಇದ್ದಲ್ಲಿ ತುಳುವಿನ ಅರ್ಧಾಕ್ಷರದಂತೆ ಉಚ್ಚರಿಸದೆ, ಕನ್ನಡದ ಅರ್ಧಾಕ್ಷರದಂತೆ ಉಚ್ಚರಿಸಬೇಕು.

" ಖ, ಫ, ಗ, " ಎಂಬವುಗಳ ಶುದ್ಧ ಉಚ್ಚಾರಣೆಯು ಕನ್ನಡದಲ್ಲಿ ಇಲ್ಲದ್ದರಿಂದ ಅದನ್ನು ಬರಹ ಬಲ್ಲ ತುರುಕರಿಂದ ಕೇಳಿ, ಕಲಿತುಕೊಳ್ಳುವುದು ಒಳ್ಳೇದು. ಉದಾ: ಮಗರಿಬ್, ಫಖ್ತ್, ಇತ್ಯಾದಿ.

ಇನ್ನು ಸರ್ವನಾಮಗಳನ್ನು ಕುರಿತು ಅವಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವುದರೊಂದಿಗೆ ಹಿಂದುಸ್ಥಾನಿ ರೂಪಗಳನ್ನು ಪ್ರಾಯೋಗಿಕವಾಗಿ ಕೊಟ್ಟಿರುತ್ತಾರೆ.

ನಾನು=ಮೈಂನ್ ನೀನು=ತು ಅವನು=ಉನ್ನೆ, (ಉನ್ಹೆ)
ನನ್ನನ್ನು, ನನಗೆ=ಮುಝೆ, ನಿನ್ನನ್ನು, ನಿನಗೆ=ತುಝೆ, ಅವನನ್ನು=ಉನ್ಕು, ಉಸೆ
ಮುಝ್ಕು, ಮೆರೆಕು ತುಝ್ಕು, ತೆರೆಕು ಅವನಿಗೆ=ಉಸ್ಕು, ಉಸೆ
ನನ್ನಿಂದ=ಮುಝ್ಸೆ, ನಿನ್ನಿಂದ=ತುಝ್‌ಸೆ, ಅವನಿಂದ=ಉಸ್ಸೆ
ಮೆರೆಸೆ ತೆರೆಸೆ ಅದರಿಂದ=ಉಸ್ಸೆ
ನನ್ನ=ಮೆರಾ, ಮೆರೆ. ನಿನ್ನ=ತೆರಾ, ತೆರೆ ಅವನ=ಉಸ್ಕಾ
ನನ್ನಲ್ಲಿ=ಮೆರೆಹಾಂನ್, ನಿನ್ನಲ್ಲಿ=ತೆರೆಹಾಂನ್, ಅವನಲ್ಲಿ=ಉಸ್ಕೆಹಾಂನ್,
ಮೆರೆಯಹಾಂನ್ ತೆರೆಯಹಾಂನ್ ಉಸ್ಕೆಯಹಾಂನ್

ಈ ವಿವರಣೆಗಳಲ್ಲಿ ಸಂದರ್ಭೋಚಿತವಾಗಿ ಧ್ವನಿವಿಜ್ಞಾನ, ವ್ಯಾಕರಣ ಹಾಗೂ ನಿಘಂಟುಗಳ ಪ್ರಕ್ರಿಯೆಗಳನ್ನು ಹದವಾಗಿ ಮಿಶ್ರಣ ಮಾಡಿ ಕ್ರಿಯಾತ್ಮಕವಾಗಿ ( functional ) ಬಳಸಿ ನಿರೂಪಿಸಿರುತ್ತಾರೆ.

ಹಾಗೆಯೇ, ಬೇರೆ ವಿಭಾಗಗಳಲ್ಲಿ ವಿವಿಧ ವ್ಯಾಕರಣಗಳ ಪ್ರಕ್ರಿಯೆಗಳನ್ನು ಕುರಿತು ಕನ್ನಡಕ್ಕೂ ಹಿಂದೂಸ್ಥಾನಿ ಭಾಷೆಗೂ ಇರುವ ಸೂಕ್ಷ್ಮ ವ್ಯತ್ಯಾಸಗಳನ್ನು ಉದಾಹರಣೆಗಳೊಂದಿಗೆ ಸ್ಪಷ್ಟೀಕರಿಸುತ್ತಾರೆ.

೨೫ನೆ ವಿಭಾಗದಲ್ಲಿ ದೇಹದ ಅವಯವ, ಮಸಾಲೆ ಜೀನಸುಗಳು, ಕಾಯಿಪಲ್ಯ, ಮೀನುಗಳು, ಅಡಿಗೆ ಮನೆಯ ಸಾಮಾನು ವಗೈರೆಗಳು–ಈ ಕನ್ನಡ ಪದಗಳ ಪರ್ಯಾಯ ಹಿಂದುಸ್ಥಾನಿ ರೂಪಗಳನ್ನು ನೀಡಲಾಗಿದೆ. ವಿವಿಧ ಮಾದರಿಯ ಸಾಕಷ್ಟು ವಾಕ್ಯಗಳನ್ನು ರೂಪಿಸಿ ಅವುಗಳ ದ್ವಿಭಾಷಿಕ ಸಂಭಾಷಣಾ ರೂಪಗಳನ್ನು ಕೊಡುತ್ತಾರೆ. ಅಕ್ಷರ, ಪದ ಹಾಗೂ ವಾಕ್ಯಗಳ ನೆಲೆಯಲ್ಲಿ ಭಾಷಾವಿಜ್ಞಾನ, ವ್ಯಾಕರಣ ಮತ್ತು ನಿಘಂಟು– ಈ ಮೂರೂ ಶಿಸ್ತುಗಳನ್ನು ಗಮನದಲ್ಲಿರಿಸಿಕೊಂಡು ಕನ್ನಡ ಹಾಗೂ ಹಿಂದುಸ್ಥಾನಿ ಭಾಷೆಗಳ ಸೂಕ್ಷ್ಮಗಳನ್ನು ಸಾಮಾನ್ಯ ಜನರಿಗೆ ಸುಲಭವಾಗಿ ಗ್ರಾಹ್ಯವಾಗುವಂತೆ ವಿವರಿಸಿರುವುದು ಈ ಸಣ್ಣ ಕೃತಿಯ ವಿಶೇಷ. ಆ ಕಾಲಕ್ಕೆ ಅಗತ್ಯವಿದ್ದ ಎಲ್ಲ ಶಿಸ್ತುಗಳನ್ನು ಕುರಿತು ಹುಟ್ಟಿಕೊಂಡಿರುವ ಉಪಯುಕ್ತ ಪುಸ್ತಕಗಳ ಮಾಲಿಕೆಯಲ್ಲಿ ಈ ಕನ್ನಡ–ಹಿಂದುಸ್ಥಾನಿ ಭಾಷಾಮಂಜರಿ ಒಂದು ಒಳ್ಳೆಯ ಪ್ರಯತ್ನ.

## ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನ ಹೊಸಗನ್ನಡನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು(1838)

### (ಕನ್ನಡದಲ್ಲಿ ರಚನೆಗೊಂಡ ಮೊದಲ ಮುದ್ರಿತ ಹೊಸಗನ್ನಡ ವ್ಯಾಕರಣ)

---

ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನು ಬರೆದ ಈ ಹೊಸಗನ್ನಡನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು–**Hosagannada nudigannadi- a Grammar of the Modern Canarese Language** by **Krishnamacharya of srirangapattanam**, late pleader in the court of sudder adawlut at madras-ಎಂಬ ಈ ಕೃತಿಯು 1838ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಬುಕ್ ಅಂಡ್ ಟ್ರಾಕ್ಟ್ ಡೆಪಾಸಿಟರಿಯಲ್ಲಿ ಮುದ್ರಣಗೊಂಡಿದೆ. 1838ರಲ್ಲಿ ಮಂಗಳೂರಿನಲ್ಲಿ ಸ್ಥಾಪನೆಗೊಂಡ ಬಾಸೆಲ್ ಮುದ್ರಣಾಲಯದಲ್ಲಿ ಮುದ್ರಣಗೊಂಡ ಮೊಟ್ಟಮೊದಲ ಗ್ರಂಥ ಬಹುಶಃ ಇದೇ. ಒಟ್ಟು ಹತ್ತು ಪ್ರಕರಣಗಳಿರುವ ಈ ಕೃತಿಯಲ್ಲಿ xi+164 ಪುಟಗಳಿವೆ. ವಿಲಿಯಮ್ ಕ್ಯಾರಿ ಅವರ ಎ ಗ್ರಾಮ್ಮರ್ ಆಫ್ ದಿ ಕರ್ನಾಟ ಲಾಂಗ್ವೇಜ್(1817) ಮತ್ತು ಜಾನ್ ಮೆಕೆರಲ್ ಅವರ ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್(1820) ಎಂಬ ಎರಡು ಕೃತಿಗಳು ಈ ಕೃತಿಗಿಂತ ಮೊದಲೇ ಪ್ರಕಟಗೊಂಡಿ ದ್ದರೂ ಅವು ವಿದೇಶೀ ಪಂಡಿತರಿಂದ ಇಂಗ್ಲಿಷ್ ಭಾಷೆಯಲ್ಲಿ ರಚನೆ ಗೊಂಡ ಪುಸ್ತಕಗಳು. ಈ ಕೃತಿ ದೇಶೀಯ ವಿದ್ವಾಂಸನಿಂದ ಕನ್ನಡದಲ್ಲಿ ರಚನೆಗೊಂಡಿ ರುವ ಕೃತಿ. ಹೀಗಾಗಿ ಇದಕ್ಕೆ ಐತಿಹಾಸಿಕ ಮಹತ್ವವೂ ಇದೆ. ಅಷ್ಟೇ ಅಲ್ಲದೆ ಈ ಕೃತಿಯು ಕಾಲ್ಡ್‌ವೆಲ್‌ನ


ಹೊಸಗನ್ನಡನುಡಿಗನ್ನಡಿ

ಎಂಬ

ಹೊಸಗನ್ನಡ ವ್ಯಾಕರಣವು

HOSAGANNADANUDIGANNADI

K 8

A

GRAMMAR

OF

THE MODERN CANARESE LANGUAGE

BY

KRISHNAMACHARYA

SECOND EDITION

MANGALORE

BASEL MISSION BOOK & TRACT DEPOSITORY

188


113

**ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ**(1856) ಪ್ರಕಟಗೊಳ್ಳುವು ದಕ್ಕಿಂತ 18 ವರ್ಷ ಮೊದಲೇ ಪ್ರಕಟ ಗೊಂಡಿದೆ. ಮೊದಲ ಮುದ್ರಣವಾದ 44 ವರ್ಷಗಳ ನಂತರ 1882ರಲ್ಲಿ **ಹೊಸಗನ್ನಡ ನುಡಿಗನ್ನಡಿಯು** ಎರಡನೆಯ ಬಾರಿಗೆ ಮುದ್ರಣಗೊಂಡಿದೆ.

**ಕೃಷ್ಣಮಾಚಾರ್ಯನು** ದ್ರಾವಿಡ ಭಾಷಾ ವಿಜ್ಞಾನದ ಮೊದಲ ದೇಶೀಯ ವಿದ್ವಾಂಸನೆಂಬ ಖ್ಯಾತಿಗೆ ಭಾಜನನಾಗಿದ್ದಾನೆ. **ಶ್ರೀರಂಗಪಟ್ಟಣ** ಇವನ ಹುಟ್ಟೂರು. ಇಂಗ್ಲಿಷ್ ವಿದ್ಯೆಯನ್ನು ಪಡೆದ ಕರ್ನಾಟಕದವರಲ್ಲಿ ಇವನೇ ಆರಂಭ ಕಾಲದವನು. ಬ್ರಿಟಿಷರು ಆ ಕಾಲದಲ್ಲಿ ಮದರಾಸಿನಲ್ಲಿ ಸ್ಥಾಪಿಸಿದ್ದ **ಫೋರ್ಟ್ ಸೇಯಿಂಟ್ ಜಾರ್ಜ್ ಕಾಲೇಜ್ ಆಫ್ ಇಂಡಿಯನ್ ಲ್ಯಾಂಗ್‌ವೇಜಸ್** ಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮುಗಿಸಿ ನಂತರ ಕಾನೂನು ಪದವಿ ಗಳಿಸಿ ಮದರಾಸಿನಲ್ಲಿ ಸದರ್ ಅದಾಲತ್ ಕೋರ್ಟಿನಲ್ಲಿ ಪ್ಲೀಡರ್ ಆಗಿದ್ದನು. ಈತ ಕನ್ನಡ ಮಾತ್ರವಲ್ಲದೆ ತಮಿಳು, ತೆಲುಗು, ತುಳು, ಮಲಯಾಳಂ, ಪರ್ಷಿಯನ್, ಹಿಂದೂಸ್ಥಾನಿ, ಸಂಸ್ಕೃತ ಹಾಗೂ ಇಂಗ್ಲಿಷು ಭಾಷೆಗಳಲ್ಲಿಯೂ ಬಲ್ಲಿದನಾಗಿದ್ದನು.

ಇವನ ಕೃತಿಗಳು ಒಟ್ಟು ನಾಲ್ಕು : 1 **ಹೊಸಗನ್ನಡ ನುಡಿಗನ್ನಡಿ** (ಪ್ರಸ್ತುತ ಕೃತಿ) 2 **ಧಾತುಮಂಜರಿ** 3 **ಶಬ್ದಮಂಜರಿ** 4 **ಹಳಗನ್ನಡ ನುಡಿಗನ್ನಡಿ** . ಇತರ ಮೂರೂ ಕೃತಿಗಳು ಇದುವರೆವಿಗೂ ಲಭ್ಯವಾಗಿಲ್ಲ. ಆದರೆ **ಧಾತುಮಂಜರಿಯು** 1810ರಲ್ಲಿ ಪ್ರಕಟವಾಯಿತೆಂದು **ಐ. ಮಾ. ಮುತ್ತಣ್ಣನವರು 19ನೆಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ** ಕೃತಿಯಲ್ಲಿ ಹೇಳುತ್ತಾರೆ. ಇದು ನಿಜವಾಗಿದ್ದ ಪಕ್ಷದಲ್ಲಿ ಆ ಕೃತಿಯೇ ಕನ್ನಡದ ಮೊದಲ ಮುದ್ರಿತ ಪುಸ್ತಕವಾಗುತ್ತದೆ. ಆದರೆ ಅದು ಲಭ್ಯವಾಗುವವರೆಗೆ ಏನೂ ಹೇಳುವಂತಿಲ್ಲ.

ಪ್ರಸ್ತುತ ಕೃತಿಯ ಆರಂಭದಲ್ಲಿ ಎರಡು ಕಂದ ಪದ್ಯಗಳು ಹೀಗಿವೆ :

ಶ್ರೀರಮಣನ ಪದಕಮಲವ
ಸಿರದಿಂ ಸಾಷ್ಟಾಂಗಮೆರಗಿ ಕೃಷ್ಣಾಚಾರ್ಯಂ
ಶ್ರೀರಂಗಪುರನಿಕೇತಂ
ಬರೆದನು ಹೊಸಗನ್ನಡನುಡಿಗನ್ನಡಿಯೊಲವಿಂ

**ಹೊಸಗನ್ನಡನುಡಿಗನ್ನಡಿ**
**ಎಸೆವ ಪ್ರಶ್ನೋತ್ತರಾವಳಿ ರಚಿತವಾಕ್ಯಂ**
**ದಶಸಂಖ್ಯ ಪ್ರಕರಣಗಳಿ**
**ಮೆಸೆಗುಂ ವ್ಯಾಕರಣಮೊಶಿಯೆ ವಿಬುಧರುಮೆಲ್ಲಂ**

**ಕೃಷ್ಣಾಚಾರ್ಯಂ ಶ್ರೀರಂಗಪುರನಿಕೇತಂ**

ಎಂದರೆ ಕೃತಿಕಾರನಾದ ಶ್ರೀರಂಗಪಟ್ಟಣದ **ಕೃಷ್ಣಮಾಚಾರ್ಯ**. ಇದು ಸಂವಾದ ರೂಪದಲ್ಲಿ ರಚಿಸಿದ ಹೊಸಗನ್ನಡ ವ್ಯಾಕರಣ. ಈ ಕೃತಿಯು ಪ್ರಶ್ನೋತ್ತರಗಳ ಸ್ವರೂಪದಲ್ಲಿದೆ. ಕೃತಿಯಲ್ಲಿರುವ ಹತ್ತು ಪ್ರಕರಣಗಳು ಹೀಗಿವೆ:

**1 ಸಂಜ್ಞಾಪ್ರಕರಣ 2 ಸಂಧಿಪ್ರಕರಣ 3 ಶಬ್ದಪ್ರಕರಣ 4 ಆಖ್ಯಾತ ಪ್ರಕರಣ 5 ಕೃತ್ಪ್ರಕರಣ 6 ತದ್ಧಿತಪ್ರಕರಣ 7 ತತ್ಸಮ ಪ್ರಕರಣ 8 ತದ್ಭವಪ್ರಕರಣ 9 ಸಮಾಸಪ್ರಕರಣ 10 ಪ್ರಯೋಗಪ್ರಕರಣ.** ಹತ್ತೂ ಪ್ರಕರಣಗಳಿಂದ ಒಟ್ಟು 645 ಪ್ರಶ್ನೆಗಳಿದ್ದು ಅವುಗಳಿಗೆ ಉತ್ತರಗಳನ್ನು ನೀಡಲಾಗಿದೆ. ಪೀಠಿಕೆಯಲ್ಲಿ **ಭಟ್ಟಾಕಳಂಕ, ಕೇಶಿರಾಜ** ಹಾಗು **ಜಾನ್ ಮೆಕೆರೆಲ್** ಇವರುಗಳನ್ನು ಸ್ಮರಿಸಿಕೊಂಡಿದ್ದರೂ **ಕರ್ಣಾಟಕ ಭಾಷಾಭೂಷಣಕಾರ ನಾಗವರ್ಮನನ್ನೂ** ಹಾಗೂ **ವಿಲಿಯಂ ಕ್ಯಾರಿಯನ್ನೂ** ಹೆಸರಿಸದಿರುವುದು ಅಚ್ಚರಿಯ ಸಂಗತಿಯಾಗಿದೆ. ಹಾಗೆಯೇ **ಕೃಷ್ಣಮಾಚಾರ್ಯನ** ವ್ಯಾಕರಣದ ನಂತರ ಕನ್ನಡ ವ್ಯಾಕರಣಗಳನ್ನು ಇಂಗ್ಲಿಷ್ ಭಾಷೆಯಲ್ಲಿ ರಚಿಸಿದ ಪಾಶ್ಚಾತ್ಯ ಪಂಡಿತರುಗಳಾದ **ರಾಬರ್ಟ್ ಕಾಲ್ಡ್‌ವೆಲ್**(1856), **ಥಾಮಸ್ ಹಾಡ್ಸನ್**(1859), **ವುಲ್ಷ್**(ಕನ್ನಡ–1866), **ಜಿಗ್ಲರ್**(1872), **ಕಿಟ್ಟೆಲ್**(1903) ಹಾಗೂ **ಹೆರಾಲ್ಡ್ ಸ್ಪೆನ್ಸರ್**(1914) ಇವರುಗಳೂ ಕೂಡಾ ತಮ್ಮ ಕೃತಿಗಳಲ್ಲಿ ತಪ್ಪಿಯೂ **ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನ** ವ್ಯಾಕರಣವನ್ನು ಸ್ಮರಿಸಿಲ್ಲದಿರುವುದೂ ಆಶ್ಚರ್ಯದ ಸಂಗತಿಯೇ ಸರಿ.

ಈ ಕೃತಿಯ ಪೀಠಿಕೆಯಲ್ಲಿ ಲೇಖಕರು " **ಈ ಹೊಸಗನ್ನಡವನ್ನು ಕುರಿತು ಪೂರ್ವದಲ್ಲಿ ಜಾನ್ ಮಕ್ಕರೆಲು ದೊರೆಯವರು ಗ್ರಾಮರೆಂಬೊಂದು ವ್ಯಾಕರಣ ಪುಸ್ತಕವ ಮಾಡಿದರು ; ಆದರೆ ಅದರಲ್ಲಿ ಸೂತ್ರಗಳನ್ನು ಇಂಗಲೀಷು ಭಾಷೆಯಿಂದ ಹೇಳಿರುವದ್ದರಿಂದ ಅದು ಬಾರದವರು ಓದಲಿಕ್ಕದಶಕ್ಯವಾಗಿ ಹೋಯಿತು. ......... ಆ ಹೊಸಗನ್ನಡವನ್ನನುಸರಿಸಿದ್ದೇ ಹೊಸಗನ್ನಡವು; ............... ಈ ವ್ಯಾಕರಣವು ತತ್ಕಾಲದಲ್ಲಿ ಚನ್ನಪಟ್ಟಣದಲ್ಲಿ (ಎಂದರೆ ಈಗಿನ ಚೆನ್ನೈ) ಸದರದಾಲತ್ತು ಕೋರ್ಟಿನಲ್ಲಿ ವಕೀಲಾಗಿಯೂ ಪಂಡಿತೋದ್ಯೋಗಕ್ಕೆ ಯೋಗ್ಯತಾಪತ್ರಿಕೆಯನ್ನು ಪಡೆದವನಾಗಿಯೂ ಇರುವಂಥಾ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನೆಂಬ ನನ್ನಿಂದ ಮಾಡಲ್ಪಟ್ಟಿತು. ಆದರೆ ನಾನು ಕಾಲೀಜಿನಲ್ಲಿ ಪಂಡಿತ ವಿದ್ಯಾರ್ಥಿ ಯುದ್ಯೋಗದಲ್ಲಿರುವಾಗ ಕಾಲೀಜು**

ಬೋರ್ಡಿಗೆ ಸಿಕ್ರೆಟೇರಿಯಾಗಿದ್ದ ಕೆಪ್ಟನ್ ಹಾರ್ಕಿನನು ದೊರೆಯವರು, ಇಂಗಲೀಷೂ ಸಂಸ್ಕೃತವೂ ತಿಳಿಯದ ವಿದ್ಯಾರ್ಥಿಗಳಿಗೆ ಸುಲಭವಾಗಿ ತಿಳಿಯುವ ಹಾಂಗೆ ಕನ್ನಡದಲ್ಲಿ ಪ್ರಶ್ನೋತ್ತರರೂಪವಾಗೊಂದು ವ್ಯಾಕರಣವ ಮಾಡ ಹೇಳಿದ್ದರಿಂದ ಈ ಗ್ರಂಥವನ್ನು ನಾನು ಮಾಡಿದೆನು........ಈಗ ಸಿವಿಲುದ್ಯೋಗಸ್ಥರಾದ ಮಹಾರಾಜಶ್ರೀ ಜಾನ್ ವಾಕರು ದೊರೆಯವರು........... ಇದನ್ನು ಲೋಕೋಪಕಾರಾರ್ಥವಾಗಿ ನನಗೆ ದ್ರವ್ಯವಿಲ್ಲದೆ ಅಚ್ಚು ಹಾಕಿಸಿ ಪ್ರಸಿದ್ಧೀ ಮಾಡುತ್ತೇವೆಂದು ಹೇಳಿದ್ದರಿಂದಲೂ, ಕಡಮೇ ಭಾಷೆಗಳ ಹಾಂಗೆ ಅಭಿಮಾನಿ ದುರ್ಲಭವಾದ್ದರಿಂದಲೂ ಈ ಗ್ರಂಥವನ್ನು ಅವರ ಹೆಸರಿಗೆ ಅಂಕಿತವ ಕೊಟ್ಟು, ಗ್ರಂಥವನ್ನು ಸಹಾ ಅವರಿಗೆ ಕೊಟ್ಟುಬಿಟ್ಟೆನು....,... ಈ ಗ್ರಂಥವನ್ನು ನನಗಿಂತ ಅಲ್ಪಜ್ಞರಾದವರು ಮಾತ್ಸರ್ಯದಿಂದಲೂ ಸ್ವಪಾಂಡಿತ್ಯ ಪ್ರಕಾಶನಾರ್ಥವಾಗಿಯೂ ದೂಷಿಸಿದರೆ, ಅವರಿಗೆ ನಾನು ಹೆದರುವದಿಲ್ಲ. ಅಭಿಜ್ಞರಾಗಿಯೂ ವಿವೇಕಿಗಳಾಗಿಯೂ ಇರುವವರು ಗುಣವನ್ನು ಪ್ರಕಟನೇ ಮಾಡಿ ದೋಷವನ್ನು ಹೊರಗೆ ಹಾಕದೆ ಇರುವ ಸ್ವಭಾವ ಉಳ್ಳವರಾದ್ದರಿಂದ ನಾನು ನಿರ್ಭಯವಾಗೀ ಗ್ರಂಥವ ಮಾಡಿದೆನು ; ಮತ್ತೂ ಈ ಗ್ರಂಥವು ಅರ್ಥಾಪೇಕ್ಷೆಯಿಂದಾಗಲಿ ಪ್ರತಿಷ್ಠಾರ್ಥವಾಗಿಯಾಗಲಿ ಮಾಡಿದ್ದಲ್ಲ ; ಲೋಕೋಪಕಾರಾರ್ಥವಾಗಿ ನನಗೆ ದೇವರು ಬುದ್ಧಿಯ ಕೊಟ್ಟ ಮಟ್ಟಿಗೂ ಬರೆದಿದ್ದೇನೆ. ..............." ಹೀಗೆ ವಿನಂತಿಸಿಕೊಂಡು ಕೆಪ್ಟನ್ ಹಾರ್ಕಿನ್ ಮತ್ತು ಜಾನ್ ವಾಕರ್ ಎಂಬ ಇಬ್ಬರನ್ನು ವಿಶೇಷವಾಗಿ ಸ್ಮರಿಸಿಕೊಂಡಿದ್ದಾನೆ. ಇಲ್ಲಿ ಆ ಕಾಲದ ಕನ್ನಡದ ಶೈಲಿ ಗೊತ್ತಾಗುವುದರ ಜೊತೆಗೆ ಲೇಖಕರ ಪ್ರಾಮಾಣಿಕತೆ ಹಾಗೂ ಖಚಿತ ಅಭಿಪ್ರಾಯ ತಿಳಿಯುತ್ತದೆ. ಇನ್ನು ಇವನ ಕೃತಿಯಲ್ಲಿ ಬರುವ ಪ್ರಶ್ನೋತ್ತರ ಸಂವಾದದ ಒಂದೆರಡು ಮಾದರಿಗಳನ್ನು ಗಮನಿಸಬಹುದು.

ಮೂರನೆಯ ಶಬ್ದಪ್ರಕರಣದಲ್ಲಿ

ಪ್ರಶ್ನೆ : ಶಬ್ದಗಳೆಷ್ಟುವಿಧವು?

ಉತ್ತರ: ತತ್ಸಮ, ತದ್ಭವ, ದೇಶ್ಯ, ಅನ್ಯದೇಶ್ಯ, ಗ್ರಾಮ್ಯಗಳೆಂದು ಐದು ವಿಧವು

ಪ್ರಶ್ನೆ : ತತ್ಸಮವೆಂದರೇನು ?

ಉತ್ತರ : ಸಂಸ್ಕೃತ ದ್ರಾವಿಡಗಳಿಗೆ ಕನ್ನಡ ವಿಭಕ್ತಿಗಳು ಶೇರಿದರೂ, ಆ ಶಬ್ದಗಳಿಗೆ ಆ ಪ್ರತ್ಯಯಗಳು ಶೇರುವಾಗ ಕಡೆಯಕ್ಷರಕ್ಕೆ ಲೋಪಾಗಮಾದೇಶಗಳು ಬಂದು ಸೇರಿದರೂ ತತ್ಸಮ ಶಬ್ದಗಳು.

ಪ್ರ: ದೇಶ್ಯವೆಂದರೇನು ?

ಉ : ಅಚ್ಚಗನ್ನಡದಲ್ಲಿ ಮಾತ್ರವೆ ಪ್ರಯೋಗಿಸಲ್ಪಡುವುದು ದೇಶ್ಯವು.

ಪ್ರ: ಗ್ರಾಮ್ಯವೆಂದರೇನು ?

ಉ : ವ್ಯಾಕರಣಕ್ಕೆ ವಿರೋಧವಾದದ್ದು ಗ್ರಾಮ್ಯವು.

ಹತ್ತನೆಯ ಪ್ರಯೋಗ ಪ್ರಕರಣದಲ್ಲಿ

**ಪ್ರಶ್ನೆ** : ವಿಧಿ ಯಾವರ್ಥದಲ್ಲಿ ಬರುತ್ತದೆ?

**ಉತ್ತರ** : ತನಗುತ್ಕೃಷ್ಟನನ್ನಾಗಲಿ ನಿಕೃಷ್ಟನನ್ನಾಗಲಿ ಸಮಾನನನ್ನಾಗಲಿ ಮಾಡ ಹೇಳುವಿಕೆ. ಇದನ್ನೇ ಪ್ರಾಚೀನ ವ್ಯಾಕರಣದಲ್ಲಿ ಬಹಳ ವಿಧವಾಗಿ ಭೇದವ ಕಲ್ಪಿಸಿ ಹೇಳಿದ್ಧಾರೆ ; ಆ ವಿವರದಿಂದ ಬಹಳ ಪ್ರಯೋಜನವಿಲ್ಲವೆಂದು ಬರೆಯಲಿಲ್ಲವು.

**ಪ್ರಶ್ನೆ** : ಕನ್ನಡ ವ್ಯಾಕರಣ ವಿಷಯವಾಗಿನ್ನೂ ಹೇಳಬೇಕಾದ ವಿಷಯ ಉಂಟೋ ?

**ಉತ್ತರ** : ಬಹಳವುಂಟು. ಅವುಗಳನ್ನು ಹಳಗನ್ನಡ ವ್ಯಾಕರಣದಲ್ಲಿ ವಿಸ್ತಾರವಾಗಿ ಹೇಳುವದ್ದರಿಂದ ನೋಡಿಕ್ಕೊಳ್ಳುವುದು. ಈ ಕೊನೆ ಪ್ರಶ್ನೆಯ ಉತ್ತರದಿಂದ ಅವರು **ಹಳಗನ್ನಡ ನುಡಿಗನ್ನಡಿ**ಯನ್ನು ಬರೆದಿರುವುದು ದೃಢವಾಗುತ್ತದೆ. ಎಂಟನೆಯ ಅಧ್ಯಾಯದ ಪ್ರಶ್ನೆಯೊಂದಕ್ಕೆ ಉತ್ತರದಲ್ಲಿ "ಸಮಸ್ತವಾದ ಕನ್ನಡ ಶಬ್ದಗಳೂ ಈ ಎರಡು ಭಾಷೆಯಿಂದಲೇ ಬಂದದ್ದಾದ್ದರಿಂದ ವಿಶಿಷ್ಟಕ್ಕೂ ಈ ಗ್ರಂಥದಲ್ಲಿ ಹೇಳಿದರೆ, ಗ್ರಂಥ ವಿಸ್ತಾರವಾಗುತ್ತದೆಯಾದ್ದರಿಂದ ಆ ದಾರಿಯ ಮಾತ್ರವಿಲ್ಲಿ ತೋರಿಸಿ ಚನ್ನಾಗಿ **ಶಬ್ದಮಂಜರಿ ಧಾತುಮಂಜರಿ**ಗಳಲ್ಲಿ ವಿವರಿಸಲ್ಪಡುತ್ತದೆ" ಎಂದು ಹೇಳಿರುವು ದರಿಂದ ಕೃಷ್ಣಮಾಚಾರ್ಯನು **ಶಬ್ದಮಂಜರಿ** ಮತ್ತು **ಧಾತುಮಂಜರಿ** ಎಂಬ ಕೃತಿಗಳನ್ನು ಬರೆದಿದ್ದಾನೆಂಬುದು ತಿಳಿದುಬರುತ್ತದೆ.

1894ರಲ್ಲಿ **ರಾ. ರಘುನಾಥರಾಯ** ಎಂಬ ವಿದ್ವಾಂಸರು ತಮ್ಮ **ಕರ್ಣಾಟಕ ಭಾಷಾ ವ್ಯಾಕರಣೋಪನ್ಯಾಸಮಞ್ಜರಿ** ಎಂಬ ಕೃತಿಯಲ್ಲಿ **ರೈಸ್, ಜಾನ್ ಮೆಕರೆಲ್, ರಾಮಸ್ವಾಮಿ ಶಾಸ್ತ್ರಿ** ಹಾಗೂ **ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ**ರ ವ್ಯಾಕರಣಗಳನ್ನು – ಅವು ಆಡುಭಾಷೆಯ ವ್ಯಾಕರಣಗಳೇ ಹೊರತು ಗ್ರಂಥಸ್ಥ ಭಾಷೆಯ ವ್ಯಾಕರಣಗಳಲ್ಲ, ಆದ್ದರಿಂದ " ಹಿರಿಯವರು ಮಾತನಾಡಿಕೊಳ್ಳುವ ಮಾತಿಗೆ" ಮಾತ್ರ ವ್ಯಾಕರಣವನ್ನು ಕಲ್ಪಿಸಬೇಕೆಂಬ ಬುದ್ಧಿ ಹುಟ್ಟಿದುದಕ್ಕೆ ಕನ್ನಡಿಗರೆಲ್ಲರೂ ವ್ಯಸನ ಪಡಬೇಕಾಗಿದೆ. **ಕೃಷ್ಣಮಾಚಾರ್ಯ**ರೂ **ರಾಮಸ್ವಾಮಿ ಶಾಸ್ತ್ರಿ**ಗಳೂ ತಂತಮ್ಮ ವ್ಯಾಕರಣದಾದಿಯಲ್ಲಿ ಬರೆದಿರುವ ಪ್ರಶ್ನೋತ್ತರಗಳನ್ನು ನೋಡಿದರೆ, ಇವರಿಗೆ ಹೊಸಗನ್ನಡವೆಂಬುದರ ಅರ್ಥವು ತಿಳಿಯಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.– ಎಂದು ಕಟುವಾಗಿ ಟೀಕಿಸಿರುತ್ತಾರೆ. ಆದರೆ ಬರಹದ ಭಾಷೆಗಿಂತ ಆಡುಭಾಷೆಗೆ ಭಾಷಾಶಾಸ್ತ್ರದ ದೃಷ್ಟಿಯಿಂದ ಬೆಲೆ ಹೆಚ್ಚು ಎಂಬುದು ಈಗಿನ ತಿಳುವಳಿಕೆ. ಹೀಗಾಗಿ **ರಘುನಾಥರಾಯ**ರ ವ್ಯಾಕರಣಕ್ಕಿಂತ **ಕೃಷ್ಣಮಾಚಾರ್ಯ**ನ ವ್ಯಾಕರಣಕ್ಕೆ ಅಧಿಕೃತತೆ ಹೆಚ್ಚು. ಹೊಸಗನ್ನಡದ ಮೊದಲ ವ್ಯಾಕರಣವಾಗಿ ಐತಿಹಾಸಿಕವಾಗಿ ಮಾತ್ರವಲ್ಲದೆ ಗುಣಾತ್ಮಕವಾಗಿಯೂ ಮೇಲುಮಟ್ಟದ್ದಾಗಿರುವ **ಹೊಸಗನ್ನಡನುಡಿಗನ್ನಡಿ** ಕೃತಿಯು ಒಂದು ವಿರಳ ಕೃತಿಯಾಗಿ ಕಂಗೊಳಿಸುತ್ತಿದೆ.

## ತಾಳಿಕೆ ಬಾಳಿಕೆಯ ವಿಶಿಷ್ಟ ಕೃತಿ ಕರ್ಣಾಟಕ ವಾಗ್ವಿಧಾಯಿನಿ(1854)

'ಕರ್ಣಾಟಕ ವಾಗ್ವಿಧಾಯಿನಿ' ಎಂಬ ಈ ವ್ಯಾಕರಣ ಗ್ರಂಥವು 1886ರಲ್ಲಿ 6ನೆಯ ಆವೃತ್ತಿಯ ಮುದ್ರಣವಾಗಿ ಬೆಂಗಳೂರಿನ ಆಗಿನ ಮೈಸೂರು ಗವರ್ನಮೆಂಟ್ ಪ್ರೆಸ್ಸಿನಲ್ಲಿ ಪ್ರಕಟವಾಗಿದೆ. ಈ ಕೃತಿಯು 'ಟ್ರಾನ್ಸ್ಲೇಟರ್ ಮ. ರಾಮಸ್ವಾಮಿ ಶಾಸ್ತ್ರಿಗಳಿಂದ ರಚಿಸಲ್ಪಟ್ಟದ್ದು'. ಆರನೆಯ ಆವೃತ್ತಿಯಲ್ಲಿ 10,000(ಹತ್ತು ಸಾವಿರ) ಪ್ರತಿಗಳು ಮುದ್ರಣವಾಗಿರುವುದು ಈ ಕೃತಿಯ ಉಪಯುಕ್ತತೆ ಮತ್ತು ಜನಪ್ರಿಯತೆಗಳಿಗೆ ದ್ಯೋತಕವಾಗಿದೆ. ಮೈಸೂರು ಸರ್ಕಾರದ ಅಂದಿನ ಸಾರ್ವಜನಿಕ ಶಿಕ್ಷಣ ಇಲಾಖೆ ಇದನ್ನು ಪ್ರಕಟಿಸಿರುತ್ತಾರೆ. ಅಷ್ಟ ಕಿರೀಟಾಕಾರದ 163+v ಪುಟಗಳ ಈ ಕೃತಿಯ ಬೆಲೆ ಎಲ್ಲಿಯೂ ನಮೂದಾಗಿಲ್ಲ. 1854ರಲ್ಲಿ ಮೊದಲು ಅಚ್ಚಾದ ಈ ಕೃತಿಯ 5ನೆಯ ಮುದ್ರಣ 1969ರಲ್ಲೂ 7ನೆಯ ಆವೃತ್ತಿಯ ಮುದ್ರಣ 1890ರಲ್ಲೂ ಆಗಿದೆ. 2,3 ಮತ್ತು 4ನೆಯ ಆವೃತ್ತಿಗಳನ್ನು ಕುರಿತ ಮಾಹಿತಿ ಅಲಭ್ಯವಾಗಿದೆ.

ಮ. ರಾಮಸ್ವಾಮಿ ಶಾಸ್ತ್ರಿಗಳು ಬಹುಶ್ರುತ ವಿದ್ವಾಂಸರು. ಇವರು ರಚಿಸಿರುವ 'ಲಘುಲಂಪಕಾ ಗ್ರಂಥವು' ಎಂಬ (ಪ್ರಮೇಯಾಧ್ಯಾಯ, ನಷ್ಟಜಾತಕಾಧ್ಯಾಯ, ಚಿಂತಾಪರಿಜ್ಞಾನಾಧ್ಯಾಯ, ಫಲಾಧ್ಯಾಯ, ಶಲ್ಯ ಜ್ಞಾನಾಧ್ಯಾಯ, ನಷ್ಟವಿಜ್ಞಾನಾಧ್ಯಾಯ ಮತ್ತು ಮಿಶ್ರಕಾಧ್ಯಾಯ ಎಂಬ ಅಧ್ಯಾಯ ಗಳನ್ನೊಳಗೊಂಡ) ಜ್ಯೋತಿಷ ಕೃತಿಯು 1872ರಲ್ಲಿ, ಪಂಚಪ್ರಾಣವಾಯುಗಳ ಸ್ವರೂಪವನ್ನು ನಿರೂಪಿಸುವ 'ನಾಡೀಶಾಸ್ತ್ರ' ಎಂಬ ಹೊತ್ತಗೆಯನ್ನು 1908ರಲ್ಲಿ , ಹೊನ್ನಪ್ಪ ಎನ್ನುವವರೊಂದಿಗೆ ರಚಿಸಿದ 'ಕರ್ನಾಟ ಕಲ್ಪದ್ರುಮಂ' ಎಂಬ ನಿಘಂಟು 1885ರಲ್ಲಿ ಪ್ರಕಟಗೊಂಡಿದೆ. ಹರ್ಮನ್ ಎಫ್. ಇ. ಎಂಬ ಲೇಖಕನು ಬರೆದ Elementary agri cultural class book ಎಂಬ ಕೃತಿಯ ಅನುವಾದವಾದ, ಮಣ್ಣಿನ ವೈವಿಧ್ಯ



ವಿಚಾರಗಳು, ವ್ಯವಸಾಯವನ್ನು ಕುರಿತ ತಿಳಿವಳಿಕೆಯನ್ನು ನಿರೂಪಿಸುವ 'ವ್ಯವಸಾಯ ಕ್ರಮ ಬೋಧಿನಿ'ಯನ್ನು 1879 ರಲ್ಲಿ ರಚಿಸಿರುತ್ತಾರೆ. ಹೀಗೆ ವಿಭಿನ್ನ ಶಾಸ್ತ್ರಗಳಾದ ವ್ಯಾಕರಣ, ನಿಘಂಟು, ನಾಡೀಶಾಸ್ತ್ರ, ವ್ಯವಸಾಯಶಾಸ್ತ್ರ ಹಾಗೂ ಜ್ಯೋತಿಷ ಶಾಸ್ತ್ರಗಳನ್ನು ಕುರಿತ ಕೃತಿ ರಚನೆ ಮಾಡಿರುವುದು ಶಾಸ್ತ್ರಿಗಳ ಅಗಾಧವಾದ ವಿದ್ವತ್ತನ್ನು ಸೂಚಿಸುತ್ತದೆ.

GLOSSARY OF TERMS.

—:o:—

| | |
|---|---|
| ಅಕ್ಷರ ಲಕ್ಷಣ .. | Orthography. |
| ಅನುಸ್ವಾರ .. | The nasal sign. |
| ಅಕರ್ಮಕ ಧಾತು .. | Intransitive verb. |
| ಅಧಿಕರಣ ವಿಭಕ್ತಿ .. | Locative case. |
| ಅಧೀನ ವಾಕ್ಯ .. | Subordinate sentence. |
| ಅಪಾದಾನ ವಿಭಕ್ತಿ .. | Ablative case. |
| ಅನ್ಯ ದೇಶ್ಯ .. | Foreign word. |
| ಅಪೂರ್ಣ ವರ್ತಮಾನ ರೂಪ .. | Present imperfect. |
| ಅಪೂರ್ಣ ಭೂತರೂಪ .. | Imperfect. |
| ಅಪೂರ್ಣ ಭವಿಷ್ಯತ್ .. | Future imperfect. |
| ಅಂಕಿತ ನಾಮ .. | Proper noun. |
| ಅರಿಸಮಾಸ .. | Hybrid compound. |
| ಅವ್ಯಯ .. | Indeclinable word. |
| ಅವ್ಯಯಾತ್ಮಕ ಕ್ರಿಯಾರೂಪ .. | Indeclinable verbal form. |
| ಅವ್ಯಯೀಭಾವ .. | Adverbial compound. |
| ಆಗಮ .. | Insertion. |
| ಆತ್ಮಾರ್ಥಕ ಸರ್ವನಾಮ .. | Reciprocal pronoun, |
| ಆದೇಶ .. | Change or permutation. |
| ಆನುಕೂಲ್ಯ ಸಂಬಂಧವಾಕ್ಯ .. | Copulative co-ordinate sentence. |
| ಉಭಯಾತ್ಮಕಸಂಬಂಧವಾಕ್ಯ .. | Disjunctive co-ordinate sentence. |
| ಏಕವಚನ .. | Singular number. |
| ಒತ್ತಕ್ಷರಗಳು .. | Double consonants. |
| ಓಷ್ಠ್ಯಗಳು .. | Labials. |
| ಕರ್ತೃವಿಭಕ್ತಿ .. | Nominative case. |

ಅಕ್ಷರ ಲಕ್ಷಣ, ಶಬ್ದ ಲಕ್ಷಣ, ವಾಕ್ಯ ಲಕ್ಷಣ, ಛಂದೋಲಕ್ಷಣ ಎಂಬ ನಾಲ್ಕು ಪ್ರಮುಖ ಅಧ್ಯಾಯಗಳ ಜೊತೆಗೆ ಹಳೇಕನ್ನಡ ಲಕ್ಷಣ ಎಂಬ ಒಂದು ಕಿರು ಅಧ್ಯಾಯವೂ ಸೇರಿದೆ. ಈ ಅಧ್ಯಾಯವು ಆ ಕಾಲಘಟ್ಟದಲ್ಲಿ ಸಾಕಷ್ಟು ಚರ್ಚೆಗೆ ಗ್ರಾಸವಾಗಿದ್ದು, 1896ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡದ ಮಹಾ ಮಹೋಪಾಧ್ಯಾಯರಾಗಿದ್ದ ಶ್ರೀ ರಾ. ರಘುನಾಥರಾಯರ ಕರ್ಣಾಟಕ ಭಾಷಾ ವ್ಯಾಕರಣೋಪನ್ಯಾಸ ಮಞ್ಜರಿ' (ಪ್ರಜಾವಾಣಿ, ಸಾ.ಪು, 17 ಜುಲೈ 2011, ಹಳತು ಹೊನ್ನು) ಕೃತಿಯಲ್ಲಿ ತೀಕ್ಷ್ಣ ಚರ್ಚೆಗೆ ಒಳಗಾಗಿದೆ. ಒಂದೆಡೆ ಆ ಕೃತಿಯಲ್ಲಿ ರಘುನಾಥರಾಯರು ವಾಗ್ವಿಧಾಯಿನಿಯಲ್ಲಿನ ಕೆಲವು ಅಂಶಗಳನ್ನು ಕುರಿತು "ಈಗಿನವರು ಪಾಠಶಾಲೆಗೆಂದು ಬರೆದ ವಾಗ್ವಿಧಾಯಿನಿ ಮುಂತಾದ ವ್ಯಾಕರಣಗಳಿಂದ ಇಲ್ಲಿಯ ಪ್ರಯೋಗಗಳಲ್ಲಿ ಕೆಲವನ್ನು ತಿಳಿಯುವುದು ಅಸಾಧ್ಯವಲ್ಲವೇ?....ಹೀಗಿರುವುದಕ್ಕೆ ಕಾರಣವುಂಟು. ಜಾನ್ ಮೆಕೆರೆಲ್ ಸಾಹೇಬನೊಬ್ಬರು ಗ್ರಾಮರ್ ಎಂಬೊಂದು ವ್ಯಾಕರಣ ಪುಸ್ತಕವನ್ನು ಮಾಡಿದರೆಂದು ಹೊಸಗನ್ನಡ ನುಡಿಗನ್ನಡಿಯನ್ನು ಬರೆದ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯರವರು ತಾವು ಬರೆದ ಗ್ರಂಥದ ಪೀಠಿಕೆಯಲ್ಲಿ ಹೇಳುತ್ತಾರೆ...... ಇದನ್ನು ನೋಡಿದರೆ ತಮ್ಮ ಪುಸ್ತಕವನ್ನು ಯೂರೋಪಿಯನ್ ಸೋದರರಿಗೆ ಬರೆದಂತೆ ತೋರುತ್ತದೆ. ಇವರಿಗೆ ಕನ್ನಡವೆಷ್ಟು ತಿಳಿದಿತ್ತೋ ನಮಗೆ ತಿಳಿಯದು.....ಈ ರೀತಿಯಲ್ಲಿ ಹಾಕಿದ ಮೇಲ್ಪಜ್ಞೆಯನ್ನು ವಾಗ್ವಿಧಾಯಿನಿಯನ್ನು

ರಚಿಸಿದ ರಾಮಸ್ವಾಮಿಶಾಸ್ತ್ರಿಗಳೆಂಬ ಮಹನೀಯರು ಅನುಸರಿಸಿ .....ಕೃಷ್ಣಮಾಚಾರ್ಯರೂ ರಾಮಸ್ವಾಮಿಶಾಸ್ತ್ರಿಗಳೂ ತಂತಮ್ಮ ವ್ಯಾಕರಣದಾದಿಯಲ್ಲಿ ಬರೆದಿರುವ ಪ್ರಶ್ನೋತ್ತರಗಳನ್ನು ನೋಡಿದರೆ, ಇವರಿಗೆ ಹೊಸಗನ್ನಡವೆಂಬುದರ ಅರ್ಥವು ತಿಳಿಯಲಿಲ್ಲವೆಂಬುದು ಸ್ಪಷ್ಟ ವಾಗುತ್ತದೆ.....ವಿದ್ಯಾಭ್ಯಾಸ ಇಲಾಖೆಯ ಮುಖ್ಯಾಧಿಕಾರಿಗಳು ಒಬ್ಬರಾಗುತ್ತ ಲೊಬ್ಬರು ಈ ಬಗೆಯ ವ್ಯಾಕರಣವನ್ನು ಸ್ವೀಕರಿಸುತ್ತಿರುವುದನ್ನು ನೋಡಿದರೆ ವಿಸ್ಮಯವೂ ವಿಷಾದವೂ ಹುಟ್ಟುವುದು......... ವಾಗ್ವಿಧಾಯಿನಿ, ಶಬ್ದಾದರ್ಶಗಳ ಜತೆಯಲ್ಲಿ ಕೊಟ್ಟಿದ್ದರೆ, ಕನ್ನಡಕ್ಕೆ ಈಗಿರುವ ದುರ್ದೆಶೆಯು ಒದಗುತ್ತಿರಲಿಲ್ಲ. ಹಾಗೆ ಮಾಡಲಿಲ್ಲವಲ್ಲಾ! ಎಂದು ವಿಷಾದಿಸಬೇಕಾಗಿದೆ. " ಎಂದು ಕಟು ಟೀಕೆಗೆ ಒಳಪಡಿಸಿದ್ದಾರೆ. ಇಂತಹ ಪ್ರತಿಕ್ರಿಯೆಗಳು ಆ ಕಾಲದ ಕೃತಿಗಳಿಗೆ ಸಾಮಾನ್ಯವಾಗಿತ್ತು.

ಒಟ್ಟು 181 ಖಚಿತ ವ್ಯಾಕರಣೀಯಾಂಶಗಳನ್ನು ಒಳಗೊಂಡಿರುವ ಈ ಕೃತಿಯ ಕೊನೆಯಲ್ಲಿ ನೀಡಿರುವ ವ್ಯಾಕರಣೀಯ ಪಾರಿಭಾಷಿಕ ಪರ್ಯಾಯ ಪದಕೋಶವು ಕನ್ನಡ ಶಬ್ದಗಳಿಗೆ ಇಂಗ್ಲಿಷ್ ಪರ್ಯಾಯಗಳನ್ನು ಕೊಟ್ಟಿರುವುದು ಅಭ್ಯಾಸಿಗಳಿಗೆ ತುಂಬಾ ಉಪಯುಕ್ತವಾಗಿದೆ.

ವ್ಯಾಕರಣವಿಷಯ ಕಕ್ಷೆಗೆ ಒಳಪಡದಿದ್ದರೂ ಕೃತಿಕಾರರು ಛಂದೋ ಲಕ್ಷಣವನ್ನೂ ಇಲ್ಲಿ ಸೇರಿಸಿರುತ್ತಾರೆ. ಶಾಲಾವಿದ್ಯಾರ್ಥಿಗಳಿಗೆ ರಚಿತವಾಗುತ್ತಿದ್ದ ವ್ಯಾಕರಣಗಳಲ್ಲಿಯೇ ಅಳವಡಿಸುತ್ತಿದ್ದ ಆ ಕಾಲದ ಪದ್ಧತಿ ಇವತ್ತಿನವರೆಗೂ ಮುಂದುವರೆದುಕೊಂಡು ಬಂದಿದೆ. ಈ ಕೃತಿಯ ಇನ್ನೊಂದು ವಿಶೇಷವೆಂದರೆ ಇಡೀ ಕೃತಿ ಪ್ರಶ್ನೋತ್ತರ ರೂಪದಲ್ಲಿರುವುದು.

ಶಬ್ದ ಲಕ್ಷಣಗಳನ್ನು ವಿವರಿಸುವ ಶಬ್ದೋತ್ಪತ್ತಿ ಪ್ರಕರಣದ ತದ್ಭವ ಶಬ್ದಗಳು ಎಂಬ ಅಧ್ಯಾಯದಲ್ಲಿನ ಕೆಲವು ಅಂಶಗಳು ಕುತೂಹಲ ಕಾರಿಯಾಗಿದೆ. ಉದಾಹರಣೆಗೆ ವಂಧ್ಯೆ ಸಂಸ್ಕೃತ ಶಬ್ದಕ್ಕೆ ಬಂಜೆ ಎಂಬ ತದ್ಭವ ರೂಪ ನೀಡಿರುತ್ತಾರೆ. ಇಂತಹ ಸಂದರ್ಭಗಳಲ್ಲಿ ಅರ್ಥ ಸಂದಿಗ್ಧತೆ ಏರ್ಪಡುತ್ತದೆ. ಹಾಗೆಯೇ ಶಾಸ್ತ್ರಿಗಳ ಹಳಗನ್ನಡ ಹೊಸಗನ್ನಡಗಳ ಪರಿಕಲ್ಪನೆಯು ಚಿಂತನಯೋಗ್ಯವಾಗಿದೆ. ಕೃತಿಕಾರರು ಹೊಸಗನ್ನಡ ಎಂದರೆ 'ಕನ್ನಡ ದೇಶದಲ್ಲಿ ಈಗಿನ ಜನರು ಮಾತನಾಡುವ ಮಾತು' ಎಂತಲೂ ಹಳೆ ಕನ್ನಡ ಎಂದರೆ 'ಗದ್ಯ ಪದ್ಯ ಕಾವ್ಯಗಳಲ್ಲಿ ಮಾತ್ರವೇ ಪ್ರಯೋಗಿಸಿ ಇರುವ ಮಾತು' ಎಂದೂ ತೀರ್ಮಾನ ನೀಡುತ್ತಾರೆ. ಶಬ್ದ ಸಮಾಸ ಪ್ರಕರಣದಲ್ಲಿ ಸಂಸ್ಕೃತ ಸಮಾಸ, ಕನ್ನಡ ಸಮಾಸ ಮತ್ತು ಅರಿಸಮಾಸ- ಇವುಗಳನ್ನು ಕುರಿತು ವಿವೇಚಿಸಿದ್ದಾರೆ. ಆದರೆ ಆರ್. ತಾತಾ ಅವರ ಭಾಷಾಶಾಸ್ತ್ರ ಮತ್ತು ಹೆರಾಲ್ಡ್ ಸ್ಪೆನ್ಸರನ ಕ್ಯಾನರೀಸ್ ಗ್ರಾಮರ್ ಕೃತಿಗಳಲ್ಲಿ ಪ್ರಸ್ತಾಪಿತವಾಗಿರುವ

'ವೀಪ್ಸಾ ಸಮಾಸ'ದ ಪ್ರಸ್ತಾಪ ಇಲ್ಲಿಲ್ಲ. ಪುಸ್ತಕದೊಳಗಡೆ ಬರುವ ಪ್ರತಿ ಪ್ರಕರಣದ ಹೆಸರಿಗೆ ಪರ್ಯಾಯ ಇಂಗ್ಲಿಷ್ ರೂಪಗಳನ್ನು ನೀಡಿರುವುದು ಸಮಂಜಸವಾಗಿದೆ ಹಾಗು ಇಂಗ್ಲಿಷ್ ವಿದ್ಯಾಭ್ಯಾಸದ ಪ್ರತಿಫಲವಾಗಿದೆ. ಕೃದಂತಗಳನ್ನು ಕುರಿತ ನಿರೂಪಣೆಯಲ್ಲಿ ಕುಳಿ, ಇ, ಇಗ, ಉಗ, ಅ, ಪುರುಕಿ ಯೆಂಬ ಪ್ರತ್ಯಯಗಳು ಧಾತುಗಳಿಗೆ ಸೇರಿ ಆಗುವ ರೂಪಗಳನ್ನು ಉದಾಹರಣೆಗಳೊಂದಿಗೆ ನೀಡುತ್ತಾರೆ. ಹಾಗೆಯೇ ಕ್ರಿಯಾನಾಮಗಳಿಗೆ ಸೇರುವ ಹಲವಾರು ಪ್ರತ್ಯಯಗಳ ದೀರ್ಘ ಪಟ್ಟಿಯು ಸೋದಾಹರಣವಾಗಿ ಬಂದಿದೆ. ಹಳೇ ಕನ್ನಡ ವಿವೇಚನೆಯಲ್ಲಿ ಸಪ್ತ ವಿಭಕ್ತಿ ರೂಪಗಳು ಹಾಗೂ ಸರ್ವನಾಮಗಳ ಕೋಷ್ಟಕಗಳನ್ನು ಕೊಟ್ಟಿರುವುದು ಹೊಸಗನ್ನಡದೊಂದಿಗೆ ತುಲನಾತ್ಮಕವಾಗಿ ವಿಶ್ಲೇಷಿಸಲು ಅನುಕೂಲವಾಗಿದೆ. ಪದಪರ್ಯಾಯ ಎಂಬ ಪ್ರಕರಣದಲ್ಲಿ (ಆರ್ಡರ್ ಆಫ್ ವರ್ಡ್ಸ್) ವಾಕ್ಯಗಳಲ್ಲಿ ಬರುವ ಪದಗಳ ಅನುಕ್ರಮಣಿಕೆಯನ್ನು ಕುರಿತು ವಿವೇಚಿಸಲಾಗಿದೆ. ಇಲ್ಲಿ ನಾಮಪದ ಎಂಬುದಕ್ಕೆ ಆಖ್ಯೆ ಎಂತಲೂ ಕ್ರಿಯಾಪದ ಎಂಬುದಕ್ಕೆ ಆಖ್ಯಾತ ಎಂತಲೂ ಕೊಂಚ ವಿಭಿನ್ನವಾಗಿ ಪದಗಳ ಬಳಕೆ ಇದೆ. ಪದಗಳ ಅರ್ಥವಿಚಾರ ಎಂಬ ಪ್ರಕರಣದಲ್ಲಿ ಕೆಲವು ಕುತೂಹಲ ವಿಚಾರಗಳಿವೆ. ಪದಗಳ ಅರ್ಥವನ್ನು- ರೂಢ, ಯೋಗ ಮತ್ತು ಯೋಗರೂಢ- ಎಂದು ಮೂರು ರೀತಿಯಲ್ಲಿ ವರ್ಗೀಕರಿಸಿರುತ್ತಾರೆ. 'ನಿಘಂಟು ಉಪಮಾನ, ಆಪ್ತವಾಕ್ಯ, ಲೋಕವ್ಯವಹಾರ ವ್ಯಾಖ್ಯಾನ ಮೊದಲಾದ ಸಾಧನಗಳಿಂದಾಗುವ ಅರ್ಥವು ರೂಢವೆನ್ನಿಸುವುದು--- ಉದಾ=ಕದ, ಕುದುರೆ, ಆನೆ. ಶಬ್ದೋತ್ಪತ್ತಿ ಪ್ರಕರಣದಲ್ಲಿ ಹೇಳಿದ ಹಾಗೆ ಶಬ್ದಗಳ ಮೂಲಧಾತುಗಳ ಅವಯವಾರ್ಥ ವಿಶೇಷಗಳಿಂದ ತಿಳಿಯುವ ಅರ್ಥವು ಯೋಗವೆನ್ನಿಸುವುದು----ಉದಾ=ಹಾವಾಡಿಗ, ವರ್ತಕ, ಗುಣಶಾಲಿ.'

ಛಂದೋಲಕ್ಷಣದಲ್ಲಿ ಛಂದೋ ಲಕ್ಷಣ ನಿರ್ಣಯ ಹಾಗೂ ವೃತ್ತರಚನಾ ಪ್ರಕರಣಗಳಿದ್ದು ಅಕ್ಷರ ವೃತ್ತಗಳು ಹಾಗೂ ಆರು ಷಟ್ಪದಿಗಳ ಬಗ್ಗೆ ಮಾತ್ರ ವಿಚಾರ ಮಾಡಿರುತ್ತಾರೆ.

1854 ರಿಂದ 1890 ರವರೆವಿಗೆ 36 ವರ್ಷಗಳಲ್ಲಿ ಏಳು ಮುದ್ರಣಗಳನ್ನು ಕನ್ನಡದ ಒಂದು ವ್ಯಾಕರಣ ಗ್ರಂಥವು ಕಂಡಿರುವುದು ನಿಜಕ್ಕೂ ಅಂದಿನ ಅಕ್ಷರಕಲಿಕೆಯಪ್ರೀತಿಗೆ ನಿದರ್ಶನವಾಗಿದೆ ಎನ್ನಬಹುದು. ಅಲ್ಲದೆ ಇಂಗ್ಲಿಷರಿಂದ ದೇಶಿಯರ ಮೇಲೆ ಆಗಿರುವ ಪ್ರಭಾವವನ್ನೂ ಇಲ್ಲಿ ಗುರುತಿಸಬಹುದು. ಕನ್ನಡದಂತಹ ಒಂದು ಭಾಷಾಪರಂಪರೆಯಲ್ಲಿ ಶಿಕ್ಷಣ ಎಲ್ಲರಿಗೂ ಎಟುಕಲು ತೊಡಗುತ್ತಿದ್ದ ಕಾಲದೊಳಗೆ ಇಂತಹ ಕೃತಿಗಳು ಪ್ರಮುಖ ಪಾತ್ರ ವಹಿಸುತ್ತದೆ ಎನ್ನಬಹುದು. ಏನೇ ಆಗಲಿ ತಾಳಿಕೆ ಬಾಳಿಕೆ ಪಡೆದುಕೊಂಡ ಕನ್ನಡದ ಮಹತ್ವದ ಕೃತಿ 'ಕರ್ಣಾಟಕ ವಾಗ್ವಿಧಾಯಿನಿ' ಎಂಬ ಅಂಶವನ್ನು ದಾಖಲಿಸಬೇಕು.

# ದಕ್ಷಿಣಾಮೂರ್ತಿ ಶಾಸ್ತ್ರಿಯವರ 'ಶಬ್ದಭಾಸ್ಕರವು' (1869)

**ಶಬ್ದಭಾಸ್ಕರವು 1869**ರಲ್ಲಿ ಬೆಂಗಳೂರಿನ 'ಕರ್ಣಾಟಕ ಪ್ರೆಸ್' ಅಚ್ಚುಕೂಟದಲ್ಲಿ ಮುದ್ರಣಗೊಂಡಿರುವ ಒಂದು ವ್ಯಾಕರಣ ಶಾಸ್ತ್ರ ಗ್ರಂಥ. ಇದರ ಲೇಖಕರು **ಪಂಡಿತ ದಕ್ಷಿಣಾಮೂರ್ತಿ ಶಾಸ್ತ್ರಿ** ಅವರು. ಈ ಕೃತಿಯು **1871**ರಲ್ಲಿ ಎರಡನೇ ಬಾರಿಗೆ ಮುದ್ರಣಗೊಂಡಿದೆ. **1870**ರಲ್ಲಿ ಇದೇ ಲೇಖಕರ ಕನ್ನಡ **ತೊರವೆ ರಾಮಾಯಣ, 1887**ರಲ್ಲಿ **ಶ್ರೀಮದಧ್ಯಾತ್ಮ ರಾಮಾಯಣವನ್ನು ಕುರಿತ ಕನ್ನಡದ ಟೀಕೆ** ಮತ್ತು **1888**ರಲ್ಲಿ **3** ಭಾಗಗಳಲ್ಲಿ **ಜೈಮಿನಿ ಭಾರತದ ಟೀಕೆಗಳು (1913**ರಲ್ಲಿ ಇವು ಮೂರೂ ಭಾಗಗಳು ಒಟ್ಟಿಗೆ ಒಂದು ಸಂಪುಟವಾಗಿ ಪ್ರಕಟವಾಗಿದೆ) ಪ್ರಕಟಗೊಂಡಿರುತ್ತವೆ. ಇವರ ಮತ್ತೊಂದು ಕೃತಿಯಾದ **ವಿದ್ಯಾರಣ್ಯ ಮುನಿ** ಅಚ್ಚಾದ ಕಾಲ ಗೊತ್ತಿಲ್ಲ. **ಶಬ್ದಭಾಸ್ಕರ** ಕೃತಿಯನ್ನು ರಚಿಸಿದ ಕಾಲವನ್ನು ದಕ್ಷಿಣಾಮೂರ್ತಿ ಶಾಸ್ತ್ರಿಯವರು ಸಾಮಾನ್ಯವಾಗಿ ಶಾಸನಗಳಲ್ಲಿ ಕಾಲಸೂಚನೆ ನೀಡುವ ಕ್ರಮದಲ್ಲಿ ನೀಡಿರುವುದು ಒಂದು ವಿಶೇಷ. ಕಾಲ ಸೂಚನೆಯ ಪದ್ಯ ಇಂತಿದೆ:

ಗಗನ ಋಷಿ ನವ ವೇದ ಸಂಖ್ಯಾ
ನಿಗಮ ಸಿದ್ಧಾಕಲಿಯುಗಾಬ್ಧಿಗ
ಚೊಗೆಯುತಿರಲಾ ಪುಷ್ಯ ಬಹುಳದ ಷಷ್ಠಿ ಸೋಮದೊಳು
ಅಗಣಿತಾನಿರ್ವಾಚ್ಯಮಹಿನ
ವಿಗತಮಾಯನ ದೇವದೇವನ
ನಗಸುತೆಯು ಕೃಪೆಯಿಂದಲೀ ಕೃತಿ ಪೂರ್ತಿಯಾಗಿಹುದು.

ಇಲ್ಲಿ **ಕೃತಿಕಾರರು ವಾಮಗತಿಚಲನೆಯ** ಕ್ರಮವನ್ನೊಳಗೊಂಡಿರುವ **ಮಹಾಭಾರತ ಯುದ್ಧ ಸಂವತ್ಸರ** ಅಥವಾ **ಯುಧಿಷ್ಠಿರ ಸಂವತ್ಸರ** ಅಥವಾ **ಕಲಿಯುಗ ಸಂವತ್ಸರದ** ಪರಿಗಣನೆಯಲ್ಲಿ ಕೃತಿ ರಚನೆಯ ಕಾಲಸೂಚನೆಯನ್ನು ನೀಡಿರುತ್ತಾರೆ. ಅದನ್ನು ಈ ರೀತಿ ಬಿಡಿಸಬಹುದು:

1) ಗಗನ = ೦ 2) ಋಷಿ = 7 3) ನವ = 9 4) ವೇದ = 4 ಹೀಗಾಗಿ **ಗಗನ ಋಷಿ ನವ ವೇದ ಸಂಖ್ಯಾ** ಎಂದರೆ **0794** ಆಗುತ್ತದೆ. ಈ ಸಂಖ್ಯೆಯನ್ನು **ವಾಮಗತಿ ಚಲನೆ ಅರ್ಥಾತ್** ಬಲದಿಂದ ಎಡಕ್ಕೆ ಬರೆಯಬೇಕು. ಆಗ ಈ ಸಂಖ್ಯೆಯು **4970** ಆಗುತ್ತದೆ. ಮಹಾಭಾರತ ಯುದ್ಧ ಕ್ರಿ.ಪೂ. **3102**ರಲ್ಲಿ ನಡೆಯಿತೆಂದೂ ಕಲಿಯುಗ ಸಂವತ್ಸರ ಕ್ರಿ.ಪೂ **3101**ರಲ್ಲಿ ಆರಂಭವಾಯಿತೆಂದೂ ಈ ಕಾಲಗಣನೆಕಾರರ ಲೆಕ್ಕಾಚಾರ. ಇದರ ಪ್ರಕಾರ **4970**ರಲ್ಲಿ **3101**ನ್ನು ಕಳೆಯಬೇಕು. ಆಗ ಉಳಿಕೆ **1869** ಆಗುತ್ತದೆ. ಆದ್ದರಿಂದ ಈ ಕ್ರಮದಲ್ಲಿ **ಶಬ್ದಭಾಸ್ಕರ** ಮುದ್ರಣಗೊಂಡ ಕಾಲ ಕ್ರಿ.ಶ.**1869. 1/8** ಡೆಮಿ ಆಕಾರದ **61** ಪುಟಗಳಿರುವ ಈ **ಶಬ್ದಭಾಸ್ಕರ** ಕೃತಿಯಲ್ಲಿ **162** ಕಂದಪದ್ಯಗಳು, **1** ಉತ್ಪಲಮಾಲಾ ವೃತ್ತ, **2** ಚಂಪಕಮಾಲಾ ವೃತ್ತ ಹಾಗೂ **114** ಭಾಮಿನಿ ಷಟ್ಪದಿಗಳನ್ನು ಒಳಗೊಂಡ **279** ಪದ್ಯಗಳಿವೆ. ಈ ಕೃತಿಯ ಅಂದಿನ ಬೆಲೆ ಎಂಟು ಆಣೆ (**0-8-0** ಆಣೆ). ಕೃತಿಕಾರರು ತಮ್ಮನ್ನು ಮತ್ತು ತಮ್ಮ ಕೃತಿಯನ್ನು ಕುರಿತು ಒಂದು ಭಾಮಿನಿ ಷಟ್ಪದಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ:

ಪರಮಕಲ್ಯಾಣಾಖ್ಯ ಪತ್ತನ
ವರನಿಲಯ ನಾರಾಯಣಾತ್ಮಜ

ಪರಿಪರಿಯ ವಿದ್ಯಾವಿಲಾಸಿಯು ದಕ್ಷಿಣಾಮೂರ್ತಿ
ವಿರಚಿಸಲ್ತಾ ತೊಡಗಿದಂ ತ
ದ್ಗುರುಪದಂಗಳ ನೆನೆವ ಬಲ್ಪಿಂ
ವರಕೃತಿಯ **ಶಬ್ದೋಘ ಸಾಗರ**ವೆಂಬ ಪೆಸರಿಟ್ಟು.

ಕವಿಯ ಸ್ಥಳ ಕಲ್ಯಾಣವೆಂಬ ಪ್ರಸಿದ್ಧ ಪಟ್ಟಣ. ಕವಿಯ ತಂದೆಯ ಹೆಸರು ನಾರಾಯಣ. ಕವಿ ಪರಿಪರಿಯ ವಿದ್ಯಾವಿಲಾಸಿಯಾದ ದಕ್ಷಿಣಾಮೂರ್ತಿ. ಇವನ ವರಕೃತಿಯ ಹೆಸರು 'ಶಬ್ದೋಘ ಸಾಗರ'. ಆದರೆ ಕೃತಿಯ ಮೇಲೆ ಅಚ್ಚಾಗಿರುವ ಹೆಸರು " **ಶಬ್ದಭಾಸ್ಕರ** ".

ವಿಷಯಾನುಕ್ರಮಣಿಕೆಯಲ್ಲಿ ಅಕ್ಷರ ಖಂಡವು, ಶಬ್ದ ಖಂಡವು ಮತ್ತು ವಾಕ್ಯ ಖಂಡವು ಎಂಬ ಮೂರು ಅಧ್ಯಾಯಗಳಿದ್ದು ಭಾಷೆಯ ಮೂರೂ ನೆಲೆಗಳಾದ ಅಕ್ಷರ, ಶಬ್ದ ಮತ್ತು ವಾಕ್ಯ ವಿಚಾರಗಳನ್ನು ಕುರಿತ ನಿರೂಪಣೆ ಇದೆ. ಕನ್ನಡ ಮತ್ತು ತೆಲುಗು ಭಾಷೆಗಳಿಗೆ ಸಾಮಾನ್ಯವಾಗಿ ಬಳಸುತ್ತಿದ್ದ ಏಕರೂಪದ ಲಿಪಿಯನ್ನು ಈ ಕೃತಿಯ ಮುದ್ರಣದಲ್ಲಿ ಬಳಸಲಾಗಿದೆ. ಈ ಕೃತಿಯಲ್ಲಿ ಬರುವ ವಿಷಯಗಳನ್ನು ಕುರಿತು ಒಂದು ಷಟ್ಪದಿಯಲ್ಲಿ ಹೀಗೆ ಹೇಳಿದೆ:

ಬಾಲರಿಗೆ ಸುಖಬೋಧೆಗಾಗಿಯೆ
ಲಾಲಿತದಿ ಪೇಳುವೆನು ವರ್ಣದ



ಜಾಲವನು ಸಂಧಿಯನು ದೇಶ್ಯದ ತತ್ಸಮಾದಿಗಳ
ಮೂಲರೂಪಗಳಾ ಕ್ರಿಯಾಪದ
ಜಾಲರೂಪಗಳವ್ಯಯಂಗಳ
ಬಾಳಿಕೆಯ ರೀತಿಗಳನುಸುರ್ವೆಂ ಬುಧರೊಲಿಯುವಂತೆ

ಅಕ್ಷರ ಖಂಡದಲ್ಲಿ ವರ್ಣ ವಿಭಾಗ ಪ್ರಕರಣ ಮತ್ತು ಸಂಧಿ ಪ್ರಕರಣಗಳಿವೆ. ಶಬ್ದ ಖಂಡದಲ್ಲಿ ತತ್ಸಮ ಶಬ್ದ, ತದ್ಭವ ಶಬ್ದ, ದೇಶ್ಯ ಶಬ್ದ, ಹೂಣ ಶಬ್ದ, ಮ್ಲೇಚ್ಛದೇಶ್ಯ ಶಬ್ದ, ಗ್ರಾಮ್ಯ ಶಬ್ದ, ಶಬ್ದ ವಿಭಾಗ, ಸಮಾಸ ಪ್ರಕರಣ, ನಾಮಪದ–ಸರ್ವನಾಮ–ಕ್ರಿಯಾಪದ ಹಾಗೂ ಅವ್ಯಯ ಪ್ರಕರಣಗಳಿವೆ. ವಾಕ್ಯ ಖಂಡದಲ್ಲಿ ಆಖ್ಯಾತ ಪ್ರಕರಣ, ವಿಶೇಷ್ಯಾದಿ ಪ್ರಕರಣ, ಕಾರಕ ಪ್ರಕರಣ, ಉಪಪ್ರಕರಣಗಳೆಂಬ ಪ್ರಕರಣಗಳಿವೆ.

ಈ ಪುಸ್ತಕವು ಸಾಮಾನ್ಯವಾಗಿ ಸಾಂಪ್ರದಾಯಿಕ ವ್ಯಾಕರಣಗಳನ್ನೇ ಅನುಸರಿಸಿದೆ. ಆದರೆ ಕೃತಿಕಾರರು ಅನೇಕ ಉಪಯುಕ್ತ ವಿವಿಧ ಪಟ್ಟಿಗಳನ್ನು ನೀಡಿರುವುದು ಆಧುನಿಕತೆಯ ಪ್ರಭಾವದಿಂದಲೇ. ಸಂಸ್ಕೃತ, ಪ್ರಾಕೃತ, ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ತೌಲನಿಕ ವರ್ಣ ಮಾಲೆಗಳ ಪಟ್ಟಿ, ಕನ್ನಡ ಶಬ್ದಗಳ ರೂಪವಾಲೆ, ಪುರುಷತ್ರಯ ರೂಪವಾಲೆ, ಸರ್ವನಾಮಗಳ ವಿಭಕ್ತಿರೂಪಮಾಲೆ, ಸಂಖ್ಯಾ ಪರಿಮಾಣವಾಚಕ ರೂಪಮಾಲೆ, ನಾಮಾತ್ಮಕ ಕ್ರಿಯಾಪದಗಳ ರೂಪಮಾಲೆ, ಭಾವರೂಪಗಳು, ಧಾತುಗಳ ಮುಂದೆ ಬರುವ ಪ್ರತ್ಯಯ ಮಾಲೆ, 'ಇ' ಕಾರಾಂತ ಧಾತುರೂಪ ಮಾಲೆ, ವಿಕೃತ 'ಇರ್' ಧಾತುವಿನ ವಿವಿಧ ರೂಪಮಾಲೆ, ವಿಕೃತಗಳಾದ ನಿಷೇಧ ರೂಪಗಳು, ಊನಕ್ರಿಯೆಗಳ ರೂಪಮಾಲೆ, ಪುರುಷಪ್ರತ್ಯಯ ಸಂಯುಕ್ತ ರೂಪಮಾಲೆ– ಮುಂತಾದುವುಗಳ ವಿವರವಾದ ಪಟ್ಟಿ ಕೃತಿಕಾರರ ನಿಶಿತಮತಿ ಹಾಗೂ ಬಹುಶ್ರುತತ್ವಕ್ಕೆ ನಿದರ್ಶನವಾಗಿದೆ. ಆಧುನಿಕ ಭಾಷಾವಿಜ್ಞಾನಿಗಿರಬಹುದಾದ ಸೂಕ್ಷ್ಮಜ್ಞತೆ, ಒಳನೋಟ ಹಾಗೂ ಶಿಸ್ತಿನ ಅಂಶಗಳನ್ನು ಕೃತಿಯ ಕೆಲವು ಭಾಗಗಳಲ್ಲಿ ಗಮನಿಸಬಹುದು. ಈ ವ್ಯಾಕರಣ ಗ್ರಂಥ ವಿದ್ಯಾರ್ಥಿಗಳಿಗಿಂತ ವಿಶೇಷವಾಗಿ ಅಧ್ಯಾಪಕರಿಗೆ ಹೆಚ್ಚು ಉಪಯುಕ್ತ. ಕನ್ನಡ ಭಾಷೆಯ ಕಲಿಕೆ, ಬೋಧನೆ ಹಾಗೂ ಅಭಿವ್ಯಕ್ತಿಯ ದೃಷ್ಟಿಯಿಂದ 19 ನೆಯ ಶತಮಾನದಲ್ಲಿ ಹಲವಾರು ಉಪಯುಕ್ತ ವ್ಯಾಕರಣ ಗ್ರಂಥಗಳೂ ನಿಘಂಟುಗಳೂ ರಚನೆಗೊಂಡವು. ಈ ನಿಟ್ಟಿನಲ್ಲಿ 'ಶಬ್ದಭಾಸ್ಕರ' ದೇಸಿವಿದ್ವಾಂಸರೊಬ್ಬರಿಂದ ರಚಿತವಾದ ಒಂದು ಮಹತ್ವದ ಕೃತಿ.

# ರಾ. ರಘುನಾಥರಾಯ ಅವರ 'ಕರ್ಣಾಟಕ ಭಾಷಾ ವ್ಯಾಕರಣೋಪನ್ಯಾಸ ಮಂಜರಿ' (1894)

ರಾ. ರಘುನಾಥರಾಯ ಅವರು ರಚಿಸಿರುವ 'ಕರ್ಣಾಟಕ ಭಾಷಾ ವ್ಯಾಕರಣೋಪನ್ಯಾಸ ಮಂಜರಿ' ಎಂಬ ಈ ಕೃತಿಯು ೧೮೯೪ರಲ್ಲಿ ಮುದ್ರಣಗೊಂಡಿದೆ. ಈ ಕೃತಿಯಲ್ಲಿ ಎರಡು ಅಧ್ಯಾಯಗಳಿವೆ. ಪ್ರಥಮೋಪನ್ಯಾಸದಲ್ಲಿ 'ಭಾಷಾಸ್ವರೂಪ ನಿರೂಪಣೆ' ಇದ್ದು ದ್ವಿತೀಯೋಪನ್ಯಾಸದಲ್ಲಿ 'ನವೀನೋತ್ಪತ್ತಿ ವಿವರಣ'ವಿದೆ. ಪುಸ್ತಕ ಒಟ್ಟು ೧೧೮ ಪುಟಗಳನ್ನೊಳಗೊಂಡಿದೆ. ಎಲ್ಲಿಯೂ ಬೆಲೆಯನ್ನು ನಮೂದಿಸಿಲ್ಲ. ಪೀಠಿಕೆಯಲ್ಲಿ ಕೃತಿಕಾರರು " ಬೆಂಗಳೂರು ಶೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟ ವ್ಯಾಕರಣವನ್ನು ವಿದ್ಯಾರ್ಥಿಗಳಿಗೆ ಹೇಳಿಕೊಡುವ ಸಂದರ್ಭದಲ್ಲಿ ಸುಮಾರು ಮೂರು ವರ್ಷಗಳ ಕೆಳಗೆ ಈ ಉಪನ್ಯಾಸಗಳ ಮುಖ್ಯಾಂಶಗಳನ್ನು ಬರೆದಿಟ್ಟೆನು. ಪರಿಷ್ಕರಿಸಿ ಮುದ್ರಿಸುವುದಕ್ಕೆ ತಕ್ಕಷ್ಟು ಕಾಲ ದೊರೆಯದಿದ್ದುದರಿಂದಲೂ, ಅಲ್ಪಜ್ಞನಾದ ನಾನು ವ್ಯಾಕರಣಶಾಸ್ತ್ರ ವಿಷಯ ಕವಾದ ಗ್ರಂಥಗಳನ್ನು ಬರೆವುದಕ್ಕೆ ಬದಲಾಗಿ ನನಗಿಂತಲೂ ಪ್ರಾಜ್ಞರಾದವರು ಬರೆವುದು ಉತ್ತಮವೆಂದು ತೋರಿದುದರಿಂದಲೂ ಇಷ್ಟೂ ಕಾಲ ಸುಮ್ಮನಿದ್ದುದಾಯಿತು. ಶಬ್ದಾನುಶಾಸನಕ್ಕೆ ಮ॥ ರೈಸ್ ಸಾಹೇಬರವರು ಬರೆದಿರುವ ಪೀಠಿಕೆಯಲ್ಲಿಯೇ ಆಗಲಿ, ಕನ್ನಡ ಇಂಗ್ಲಿಷ್ ನಿಘಂಟಿಗೆ ರೆವರೆಂಡ್ ಕಿಟ್ಟೆಲ್ ಸಾಹೇಬರು ಬರೆದಿರುವ ಪೀಠಿಕೆಯಲ್ಲಿಯೇ ಆಗಲಿ ಹೊಸಗನ್ನಡದ ನಿಜಸ್ಥಿತಿ ಪ್ರಕಟನೆಗೆ ಬಾರದಿರುವುದನ್ನು ನೋಡಿ, ಸುಮ್ಮಗಿರು


ಕರ್ಣಾಟಕ ಭಾಷಾ
ವ್ಯಾಕರಣೋಪನ್ಯಾಸಮಂಜರಿ.

ಪ್ರಥಮೋಪನ್ಯಾಸ.

ಭಾಷಾಸ್ವರೂಪ ನಿರೂಪಣ.

1. ಗೌಡ ದ್ರಾವಿಡಭಾಷಾವರ್ಗಗಳ ವಿಷಯು—

ವುದು ಸರಿಯಲ್ಲವೆಂದು ನಂಬಿ, ಧೈರ್ಯ ಮಾಡಿ, ಈ ಉಪನ್ಯಾಸ ಗಳನ್ನು ಮುದ್ರಿಸಿ ರುತ್ತೇನೆ." ಎಂದು ತಾವು ಈ ಕೃತಿರಚನೆ ಮಾಡಿರುವುದಕ್ಕೆ ಕಾರಣವನ್ನು ನೀಡಿರುತ್ತಾರೆ. ತಮಿಳಿನ ವಿಷಯಕ್ಕೆ ಶೆಂಟ್ರಲ್ ಕಾಲೇಜು ಅಸಿಸ್ಟೆಂಟ್ ಮೇಸ್ಟರ್ ಕೃಷ್ಣಸ್ವಾಮಿ ಅಯ್ಯರ್ ಅವರು, ತೆಲುಗು ವಿಷಯಕ್ಕೆ ಶೆಂಟ್ರಲ್ ಕಾಲೇಜಿನ ಮುನ್ಷಿಯವರಾದ ಜಿಯ್ಯರ್ ಸೂರಿಯವರು ಮಾಡಿದ ನೆರವನ್ನು ರಘುನಾಥರಾಯರು ಸ್ಮರಿಸಿಕೊಂಡಿರುತ್ತಾರೆ. ಈ ಕೃತಿಯನ್ನು ಆಮೂಲಾಗ್ರವಾಗಿ ಪಠಿಸಿ ತಮ್ಮ ಕೆಲವಭಿಪ್ರಾಯಗಳನ್ನು ಹಿತೈಷಿಗಳ ತೆರದಲ್ಲಿ ಕೃತಿಕಾರರಿಗೆ ತಿಳಿಸಿದ ಎಸ್.ಜಿ.ನರಸಿಂಹಾಚಾರ್ಯ ಮತ್ತು ಎಂ.ಎ. ರಾಮಾನುಜ ಯ್ಯಂಗಾರ್ಯರನ್ನು ಲೇಖಕರು ಕೃತಜ್ಞತೆಯಿಂದ ನೆನೆಸಿಕೊಳ್ಳುತ್ತಾರೆ.

ಪ್ರಥಮೋಪನ್ಯಾಸದಲ್ಲಿ ಗೌಡದ್ರಾವಿಡ ಭಾಷಾವರ್ಗಗಳ ವಿಷಯ, ದ್ರಾವಿಡ ಭಾಷಾವರ್ಗದ ನಾನಾ ಭಾಷೆಗಳ ವಿವರ, ದ್ರಾವಿಡ ಭಾಷೆಗಳಲ್ಲಿ ಕಾಣಬರುವ ಪರಸ್ಪರ ಸಂಬಂಧಗಳು, ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಹುಟ್ಟಿದವುಗಳಲ್ಲವೆಂಬುದಕ್ಕೆ ನಿದರ್ಶನ, ಸಂಸ್ಕೃತಕ್ಕೂ ದ್ರಾವಿಡ ಭಾಷೆಗಳಿಗೂ ಇರುವ ಸಂಬಂಧ, ಸಂಸ್ಕೃತಕ್ಕೂ ಕನ್ನಡಕ್ಕೂ ಇರುವ ಸಂಬಂಧ, ಹೊಸಗನ್ನಡ ಅನ್ಯ ದೇಶೀಯ ಭಾಷೆಗಳಿಗೂ ಇರುವ ಸಂಬಂಧ ಹಾಗೂ ಕರ್ಣಾಟಕ ಭಾಷಾ ಸ್ವರೂಪ– ಇವುಗಳನ್ನು ಕುರಿತ ದೀರ್ಘ ವಿವರಣೆಗಳಿವೆ.

ದ್ವಿತೀಯೋಪನ್ಯಾಸದಲ್ಲಿ ಕನ್ನಡವು ಗ್ರಂಥಸ್ಥವಾಗಿ ನಿಂತ ಕಾಲ, ಕನ್ನಡದ ಕಾಲ ವಿಬೇಧಗಳು, ಹಳಗನ್ನಡ ಹೊಸಗನ್ನಡಗಳೆಂಬ ವಿಬೇಧಗಳಿಗೆ



8

9

ರಾ. ರಘುನಾಥರಾಯ.

ಅರ್ಥನಿರ್ಣಯ, ಹೊಸಗನ್ನಡವು ಪ್ರಾಬಲ್ಯದಶೆಗೆ ಬಂದ ಸಂದರ್ಭ, ಹೊಸಗನ್ನಡಕ್ಕೂ ಹಳಗನ್ನಡಕ್ಕೂ ಇರುವ ಮುಖ್ಯ ಭೇದಗಳು, ಹೊಸ ಗನ್ನಡಕ್ಕೆಂದು ರಚಿಸಿರುವ ವ್ಯಾಕರಣ ಪುಸ್ತಕಗಳ ವಿಷಯ ಹಾಗೂ ಕರ್ಣಾಟಕ ವ್ಯಾಕರಣ ರಚನಾಕ್ರಮ-ಇವುಗಳನ್ನು ಕುರಿತ ಚರ್ಚೆ ಹಾಗೂ ವಿಶ್ಲೇಷಣೆಗಳಿವೆ.

ಲೇಖಕರು ವ್ಯಾಕರಣವೆಂದು ನಿರೂಪಿಸಿರುವ ಈ ವಿಷಯಗಳನ್ನು ಕುರಿತ ಅನೇಕ ಅಭಿಪ್ರಾಯಗಳಲ್ಲಿ ಆಧುನಿಕ ಭಾಷಾ ವಿಜ್ಞಾನಿಯೊಬ್ಬನ ತೀಕ್ಷ್ಣ ಮತಿಯನ್ನು ಗಮನಿಸಬಹುದು. ಯಾವುದೇ ಪೂರ್ವಾಭಿಪ್ರಾಯ ಗಳಿಗೊಳಗಾಗದೆ ಸಮಚಿತ್ತದಿಂದ ತಮ್ಮ ಖಚಿತ ಅಭಿಪ್ರಾಯಗಳನ್ನು ಕೃತಿಕಾರರು ನೀಡಿರು ತ್ತಾರೆ. ಇದು ಶಾಸ್ತ್ರಗಳ ಬರಹಗಾರನೊಬ್ಬನಿಗೆ ಇರಬೇಕಾದ ಎಲ್ಲ ಶಿಸ್ತುಗಳನ್ನಳವಡಿಸಿಕೊಂಡಿರುವ ಬರೆವಣಿಗೆ. ದೇಶೀಯ ಭಾಷೆಗಳನ್ನು ಕುರಿತು ವಿವರಿಸಿರುವ ಸಂದರ್ಭದಲ್ಲಿ ರಘುನಾಥರಾಯರು 'ಫಾರಷಿ ಅರಬ್ಬಿ ಇಂಗ್ಲೀಷು ಮುಂತಾದ ಭಾಷೆಗಳು ಇಂಡಿಯಾ ದೇಶದಲ್ಲಿ ಅನೇಕರಿಂದ ಆಡಲ್ಪಟ್ಟಿದ್ದರೂ ದೇಶೀಯ ಭಾಷೆಗಳಲ್ಲ' ಎಂದು ಈ ಮುಂತಾದ ಸಣ್ಣಪುಟ್ಟ ವಿವರಗಳನ್ನೂ ಹೇಳುತ್ತಾರೆ. ಅವರ ಗಮನಿಕೆಗಳಲ್ಲಿ ಆಧುನಿಕ ವಿಮರ್ಶಕ ನಿಗಿರುವ ಸೂಕ್ಷ್ಮ ಒಳ ನೋಟಗಳನ್ನು ಗಮನಿಸಬಹುದು.

ಮುಖ್ಯವಾಗಿ ಈ ಕೃತಿಯಲ್ಲಿ ಲೇಖಕರು ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಹುಟ್ಟಿದುವುಗಳಲ್ಲ ಮತ್ತು ದ್ರಾವಿಡ ಭಾಷೆಗಳು ಪರಸ್ಪರ ಸಂಬಂಧ ಉಳ್ಳ ಭಾಷೆಗಳು ಎಂಬುದನ್ನು ಸಾಧಾರವಾಗಿ ನಿದರ್ಶನಪೂರ್ವಕವಾಗಿ ಖಚಿತಪಡಿಸುತ್ತಾರೆ. ಜೊತೆಗೆ ಹಳಗನ್ನಡ ಹೊಸಗನ್ನಡಗಳೆಂಬ ಭೇದಗಳಿಗೆ ಅರ್ಥನಿರ್ಣಯ ಮಾಡುವಲ್ಲಿ ಕಾಲ್ಡ್‌ವೆಲ್, ರೈಸ್ ಮತ್ತು ಕಿಟ್ಟೆಲ್‌ರಿಗಿಂತ ಭಿನ್ನವಾದ ಆಲೋಚನಾ ಕ್ರಮವನ್ನು ಪ್ರತಿಪಾದಿಸುತ್ತಾರೆ. ಒಂದು ದೃಷ್ಟಿಯಿಂದ ಇಲ್ಲಿ ದೇಸಿ ಚಿಂತನೆಯ ಹೊಳಹುಗಳು ಇರುವುದನ್ನು ಮನಗಾಣಬಹುದು.

ಇನ್ನೊಂದೆಡೆ, ೧೮೨೦ ರಲ್ಲಿ ಪ್ರಕಟವಾದ 'A Grammer of the Karnatak Language' ಎಂಬ ಜಾನ್ ಮೆಕರೆಲ್ ಅವರ ವ್ಯಾಕರಣವನ್ನೂ ಮತ್ತು ೧೮೩೮ರಲ್ಲಿ ಪ್ರಕಟವಾದ ಶ್ರೀರಂಗ ಪಟ್ಟಣದ ಕೃಷ್ಣಮಾಚಾರ್ಯರ' ಹೊಸ ಗನ್ನಡ ನುಡಿಗನ್ನಡಿ ಎಂಬ ಹೊಸ ಗನ್ನಡ ವ್ಯಾಕರಣವು 'ಎಂಬ ವ್ಯಾಕರಣಗಳನ್ನು ಕುರಿತು: "ಜಾನ್ ಮೆಕರೆಲ್ ಸಾಹೇಬರೊಬ್ಬರು ಗ್ರಾಮರ್ ಎಂಬೊಂದು ವ್ಯಾಕರಣ ಪುಸ್ತಕವನ್ನು ಮಾಡಿದರೆಂದು ಹೊಸಗನ್ನಡ ನುಡಿ ಗನ್ನಡಿಯನ್ನು ಬರೆದ ಶ್ರೀರಂಗ ಪಟ್ಟಣದ ಕೃಷ್ಣಮಾಚಾರ್ಯರವರು ತಾವು ಬರೆದ ಗ್ರಂಥದ ಪೀಠಿಕೆಯಲ್ಲಿ ಹೇಳುತ್ತಾರೆ. ಇವರು ತಮ್ಮ ವ್ಯಾಕರಣ ಸೂತ್ರಗಳನ್ನು ಇಂಗ್ಲೀಷಿನಲ್ಲಿ ಬರೆದರಂತೆ. ಇದನ್ನು ನೋಡಿದರೆ ತಮ್ಮ ಪುಸ್ತಕವನ್ನು ತಮ್ಮ ಯೂರೋಪಿಯನ್ ಸಹೋದರರಿಗೆ ಬರೆದಂತೆ ತೋರುತ್ತದೆ. ಇವರಿಗೆ ಕನ್ನಡವೆಷ್ಟು ತಿಳಿದಿತ್ತೋ ನಮಗೆ ತಿಳಿಯದು." ಹೀಗೆ ಅಭಿಪ್ರಾಯ ಪಡುತ್ತಾರೆ. ಇಲ್ಲಿ ಅವರು ತಮ್ಮ ವಿಷಯಕ್ಕೆ ಸಂಬಂಧಪಟ್ಟ ಕೃತಿಯೊಂದು ಹೊರಬಂದಿರುವುದನ್ನು ಗುರುತಿಸಿ ಅದನ್ನು ಗ್ರಹಿಸಲಾರದ ಸ್ಥಿತಿಯನ್ನು ಒಪ್ಪಿಕೊಂಡಿರುತ್ತಾರೆ. ಮುಂದುವರೆಯುತ್ತಾ ರಘುನಾಥರಾಯ ಅವರು "ಕರ್ಣಾಟಕ ದೇಶದಲ್ಲೀಗ ಹಿರಿಯವರು ಮಾತನಾಡಿಕೊಳ್ಳುವ ಮಾತಿಗೆ" ಕೃಷ್ಣ ಮಾಚಾ ರ್ಯರು ವ್ಯಾಕರಣವನ್ನು ಕಲ್ಪಿಸಿದರು; ಮತ್ತು ಅವರ ದಾರಿಯನ್ನು ಹಿಡಿದು ರಾಮಸ್ವಾಮಿ ಶಾಸ್ತ್ರಿಗಳು "ಕನ್ನಡ ದೇಶದಲ್ಲಿ ಈಗಿನ ಜನರು ಮಾತನಾಡುವ ಮಾತಿಗೆ ವ್ಯಾಕರಣವನ್ನು ಕಲ್ಪಿಸಿದರೇ ಹೊರತು ಗ್ರಂಥದ ಪ್ರಯೋಗಗಳನ್ನು ಅನುಸರಿಸಿ ವ್ಯಾಕರಣವನ್ನು ಬರೆಯಲಿಲ್ಲ. ಆದುದರಿಂದಲೇ ಇವರ ವ್ಯಾಕರಣಗಳಲ್ಲಿ ಗ್ರಂಥದ ಪ್ರಯೋಗಗಳ ಮಾತನ್ನೆತ್ತಿಲ್ಲ" ಎಂದು ಹೇಳಿ ಆ ಕಾಲಕ್ಕೆ ಪ್ರಚುರದಲ್ಲಿದ್ದ ಭಾಷೆ ಎಂದರೆ ಗ್ರಂಥಸ್ಥ ಭಾಷೆ, ಆಡುಭಾಷೆಯಲ್ಲ ಎಂಬ ಹಳೆಯ ಅಭಿಪ್ರಾಯವನ್ನೇ ಪುಷ್ಟೀಕರಿಸಿದ್ದಾರೆ. ಕೆಲವೆಡೆ ಭಾಷೆಯನ್ನು ಕುರಿತ ಸಾಂಪ್ರದಾಯಿಕ ಅಭಿಪ್ರಾಯಗಳನ್ನೇ ಲೇಖಕರು ಮುಂದೊಡ್ಡಿದ್ದರೂ ಅಲ್ಲಲ್ಲಿ ಆಧುನಿಕ ವಿಚಾರಗಳನ್ನೂ ವ್ಯಕ್ತಪಡಿಸಿರುವುದನ್ನು ಗಮನಿಸಬಹುದು. ಈ ಕೃತಿಯು ಕನ್ನಡ ವ್ಯಾಕರಣ ಮತ್ತು ಭಾಷಾವಿಜ್ಞಾನ ಶಾಸ್ತ್ರ ಗ್ತಂಥಗಳ ಸರಣಿಯಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

# ಉಪಯುಕ್ತ ವ್ಯಾಕರಣ ಕೃತಿ : ವಾಚಕ ಬೋಧಿನಿ(1894)

ವಾಚಕ ಬೋಧಿನಿ ಎಂಬ ಈ 60 ಪುಟಗಳ ಪುಟ್ಟ ವ್ಯಾಕರಣ ಕೃತಿಯ ಲೇಖಕರು ಎಂ.ಬಿ.ಶ್ರೀನಿವಾಸಯ್ಯಂಗಾರ್ಯರು. ಅವರ ಪೂರ್ಣ ಹೆಸರು ಮಂಡ್ಯಂ ಭೀಮರಾವ ಶ್ರೀನಿವಾಸ ಅಯ್ಯಂಗಾರ್. 10,000 ಪ್ರತಿಗಳು ಅಚ್ಚುಗೊಂಡಿರುವ 17ನೆಯ ಆವೃತ್ತಿಯಾದ ಪ್ರಸ್ತುತ ಕೃತಿಯು 1928ರಲ್ಲಿ ಮೈಸೂರಿನಲ್ಲಿದ್ದ ಗವರ್ನಮೆಂಟ್ ಬ್ರಾಂಚ್ ಪ್ರೆಸ್‌ನಲ್ಲಿ ಮುದ್ರಿತವಾಗಿದೆ. ಮೈಸೂರು ಸರ್ಕಾರದ ಸಾರ್ವಜಿಕ ಶಿಕ್ಷಣ ಇಲಾಖೆ ಇದನ್ನು ಪ್ರಕಟಿಸಿದೆ. ಇದರ ಮೊದಲ ಮುದ್ರಣ 1894ರಲ್ಲಿ ಆಯಿತು. 1894 ರಿಂದ 1935ರವರೆವಿಗೆ ಈ ಕೃತಿ 25ಕ್ಕೂ ಹೆಚ್ಚು ಬಾರಿ ಬೆಳಕು ಕಂಡಿದೆ. 1915 ರಲ್ಲಿ ಮರಣ ಹೊಂದಿದ ಮಂಡ್ಯಂ ಭೀಮರಾವ್ ಶ್ರೀನಿವಾಸ ಅಯ್ಯಂಗಾರ್ಯರು ಆ ಕಾಲಕ್ಕೆ ಎಂ.ಎ. ಪದವೀಧರರಾಗಿದ್ದರು. ಮೈಸೂರು ನಿವಾಸಿಗಳಾಗಿದ್ದ ಇವರು ಚಿತ್ರದುರ್ಗ ಪಟ್ಟಣದ ಸರ್ಕಾರಿ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದು ನಂತರ ಮೈಸೂರು ಸರ್ಕಾರದ ವಿದ್ಯಾ ಇಲಾಖೆ ಯಲ್ಲಿ ಟ್ರಾನ್ಸ್‌ಲೇಟರ್ ಆಗಿದ್ದರು. ಮೈಸೂರಿನಿಂದ 1888ರಲ್ಲಿ ಬರುತ್ತಿದ್ದ 'ಹಿತ ಬೋಧಿನಿ' ಮಾಸಪತ್ರಿಕೆಯ ಸಂಸ್ಥಾಪಕರುಗಳಲ್ಲಿ ಇವರೂ ಒಬ್ಬರು ಮತ್ತು ಆ ಮಾಸ ಪತ್ರಿಕೆಯ ಬಹು ಮುಖ್ಯ ಬರಹಗಾರರು. ಈ ಕೃತಿಯನ್ನಲ್ಲದೆ ಇವರು ಇನ್ನೂ ಹಲವಾರು



ಕೃತಿಗಳನ್ನು ರಚಿಸಿರುತ್ತಾರೆ. ನಾಟಕಾ ಚಾರ್ಯ ಷೇಕ್ ಸ್ಪಿಯರ್ ರವರ ಸಿಂಬೆಲೈನ್ ನಾಟಕದ ಭಾಷಾಂತರ ವಾದ ಜಯಸಿಂಹ ರಾಜಚರಿತೆ (1886), ತಮಿಳು ಗ್ರಂಥ ವೊಂದರ ಅನುವಾದ 'ನಿತ್ಯಾನು ಸಂಧಾನ ಟೀಕೆ', 1884ರಲ್ಲಿ ಎಂ.ಎಸ್. ಪುಟ್ಟಣ್ಣನವರೊಂದಿಗೆ ತಮಿಳಿನ ಕುರುಳ್ ಗ್ರಂಥದ ಅನುವಾದ 'ನೀತಿ ಚಿಂತಾಮಣಿ, 1907ರಲ್ಲಿ ಕುಲಶೇಖರ ಆಳ್ವಾರರ ಸಂಸ್ಕೃತ ಗ್ರಂಥದ ಕನ್ನಡ-ಇಂಗ್ಲಿಷ್ ಭಾಷಾಂತರಗಳನ್ನೊಳಗೊಂಡ 'ಮುಕುಂದ ಮಾಲಾ ಸ್ತೋತ್ರ', ಹಿಂದೂ ದೇಶದ ನಾಗರಿಕ ಹಾಗೂ ಹೇಮ ರಾಜ ವಿಲಾಸ ಇವು ಇವರ ಕನ್ನಡದ ಕೃತಿಗಳು. ಇವರ ತಮಿಳು ಕೃತಿಗಳು-1)ತಿರುಪಲ್ಲಾಂಡು, 2) ಅಮಲಾಂದಿ ಪಿರನ್ 3)ತಿರುಪಳ್ಳಿ ಎಲುಚಿ 4) ತಿರುಪ್ಪಾವೈ 5) ಕಣ್ಣಿ ಯುನ್ ಶಿರುತ್ತಂಬು.

ಗ್ರಂಥಕರ್ತರು ಪೀಠಿಕೆಯಲ್ಲಿ "ವ್ಯಾಕರಣಶಾಸ್ತ್ರವನ್ನು ಓದಿ ಅರ್ಥಗ್ರಹಣ ಮಾಡುವುದು ಯಾವ ಭಾಷೆಯಲ್ಲಿಯೂ ಸುಲಭವಲ್ಲ. ಇದನ್ನು ಬಾಲಕರಿಗೆ ಸುಲಭವಾಗಿ ತಿಳಿಸುವ ಇಂಗ್ಲಿಷ್ ಮುಂತಾದ ಭಾಷೆಗಳಲ್ಲಿ ಬಹು ಸಾಧನಗಳುಂಟು. ಅಂಥವುಗಳು ಕನ್ನಡದಲ್ಲಿ ಬಹಳವಾಗಿಲ್ಲ. ಬಾಲಕರ ಉಪ ಯೋಗಕ್ಕಾಗಿ ಈಗ ಪ್ರಚಾರ ದಲ್ಲಿರುವ ವ್ಯಾಕರಣದ ಪುಸ್ತಕ ಗಳಲ್ಲಿ ಹೇಳಿದ ಲಕ್ಷಣಗಳು ಬಾಲಕರಾದ ವಿದ್ಯಾರ್ಥಿಗಳಿಂದ ಸುಲಭವಾಗಿ ಗ್ರಹಿಸಲ್ಪಡಲು ಉದಾಹರಣೆಗಳೂ, ಅಭ್ಯಾಸ ಗಳೂ, ಹೇರಳವಾಗಿಲ್ಲದ ಕಾರಣ ಈ ಶಾಸ್ತ್ರಾಭ್ಯಾಸವು ಅನೇಕ ವಿದ್ಯಾರ್ಥಿಗಳಿಗೆ ಕಷ್ಟ ತೋರಿ, ಇದರಲ್ಲಿ ಒಂದು ಜುಗುಪ್ಸೆಯುಂಟಾಗಿ, ಬಲವಂತದಿಂದ ಅವರು ಓದುವಂತೆ ಕಾಣಬರುವುದು. ಈ ಕುಂದಕವನ್ನು ಕೈಯಲ್ಲಾದ ಮಟ್ಟಿಗೂ ನಿವಾರಣೆ ಮಾಡುವುದು ಎಲ್ಲಾ ಹಿತಚಿಂತಕರ ಕೆಲಸವಾಗಿದೆ. ಈ ಸ್ಥಿತಿಯನ್ನು ಸರಿ ಮಾಡಲು ಈ ಚಿಕ್ಕ ಪುಸ್ತಕವು ಒಂದು ಹೊಸರೀತಿಯಿಂದ ಬರೆಯಲ್ಪಟ್ಟಿದೆ." ಎಂದು ಈ ಕೃತಿರಚನೆಯ ಹಿನ್ನೆಲೆಯನ್ನು ಹೇಳಿದ್ದಾರೆ. ಈ ಪುಸ್ತಕವನ್ನು ಪರಿಷ್ಕರಿಸಿರುವುದು ಮೈಸೂರು ವಿದ್ಯಾ ಇಲಾಖೆಯ 'ಟೆಕ್ಸ್ಟ್ ಬುಕ್ ಕಮಿಟಿ'. ಆ ಕಮಿಟಿಯ ಅಧ್ಯಕ್ಷರು ಬಿ.ಎಂ.ಶ್ರೀಕಂಠಯ್ಯನವರು. ಸದಸ್ಯರುಗಳು 1) ಪಂಡಿತ ಕರಿಬಸವ ಶಾಸ್ತ್ರಿಗಳು 2)ಪಂಡಿತ ತಿರುವಳ್ಳವರ್ ಶ್ರೀನಿವಾಸ ರಾಘವಾಚಾರ್ಯರು ಹಾಗೂ 3) ಪಂಡಿತ ಕಾನಕಾನಹಳ್ಳಿ ವರದಾ ಚಾರ್ಯರು. ಈ ಸಭೆ ಯವರು ಗ್ರಂಥಕರ್ತರ ಉದ್ದೇಶವನ್ನೇ ಮುಖ್ಯ ವಾಗಿಟ್ಟುಕೊಂಡು,

ಕರ್ನಾಟಕದ ವ್ಯಾಕರಣ ಸಂಪ್ರದಾಯವನ್ನು ಬಿಟ್ಟು ಹೋಗದಂತೆ ಸಾಧ್ಯವಾದ ಮಟ್ಟಿಗೆ ಇಂಗ್ಲಿಷ್ ಮಾದರಿಯನ್ನು ಅನುಸರಿಸಿರುತ್ತಾರೆ. ಈ ಕೃತಿಯ ವಿಷಯಸೂಚಿಯಂತೆ ಪೀಠಿಕೆ, ಪದಪ್ರಕರಣ, ವಾಕ್ಯ ಪ್ರಕರಣಗಳ ಶೀರ್ಷಿಕೆಯ ಅಡಿಯಲ್ಲಿ ನಾಮಪದ, ಕ್ರಿಯಾಪದ, ಅವ್ಯಯ, ಪದಸ್ವರೂಪ ಕಥನ, ವಾಕ್ಯರಚನೆ ಮತ್ತು ವಾಕ್ಯ ವಿಭಜನೆ– ಈ ವಿಷಯಗಳನ್ನು ಕುರಿತು ವಿವೇಚಿಸಲಾಗಿದೆ. ಪ್ರತಿ ಪಾಠಗಳ ಕೊನೆಯಲ್ಲಿ 'ಅಭ್ಯಾಸ'ಗಳನ್ನು ನೀಡಲಾಗಿದ್ದು ಒಟ್ಟು 25 ಅಭ್ಯಾಸಗಳಿವೆ. ಉದಾಹರಣೆಗಾಗಿ 'ಅನ್ವಯ ವಾಕ್ಯಭೇದಗಳು' ಎಂಬ ಪಾಠದ ಕೊನೆಯ 24ನೆಯ ಅಭ್ಯಾಸದಲ್ಲಿ ಕೆಲವನ್ನು ಗಮನಿಸಬಹುದು.

1) 'ಅನ್ವಯ' ಎಂದರೇನು?

2) ವಾಕ್ಯದಲ್ಲಿ ಅನ್ವಯಕ್ರಮ ಹೇಗೆ?

3) ಅನ್ವಯಕ್ರಮದಿಂದ ಒಂದು ವಾಕ್ಯ ರಚಿಸಿ ತೋರಿಸಿ

4) ವಾಕ್ಯಗಳನ್ನು ಎಷ್ಟು ವಿಧವಾಗಿ ರಚಿಸಬಹುದು?

5) 'ಉಪವಾಕ್ಯ' ಎಂದರೇನು?

6) ಕೆಳಗೆ ಕೊಟ್ಟಿರುವ ವಾಕ್ಯಗಳಲ್ಲಿ ಅನ್ವಯಕ್ರಮ ಸರಿಯಾಗಿದೆಯೆ? ಅವು ಯಾವ ಬಗೆಯ ವಾಕ್ಯಗಳು? (ಈ ಪ್ರಶ್ನೆಯ ಜೊತೆಗೆ 12 ವಿವಿಧ ಮಾದರಿಯ ವಾಕ್ಯಗಳನ್ನು ನೀಡಲಾಗಿದೆ)

ಲೇಖಕರ ಶಾಸ್ತ್ರ ನಿರೂಪಣಾ ಶೈಲಿ ಹೃದಯಂಗಮವಾಗಿದ್ದು ಓದುಗರಿಗೆ ಸಂವಹನವಾಗಿ ಸಾರ್ಥಕವಾಗಿದೆ. ಹೇಳಿರುವ ಅಂಶಗಳು ಸುಲಭವಾಗಿ ತಿಳಿಯುವಂತೆ ಲಲಿತವಾದ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ನಿದರ್ಶನಕ್ಕಾಗಿ 'ಸರ್ವನಾಮ' ಪಾಠದ ಕೆಲ ಅಂಶಗಳನ್ನು ಗಮನಿಸಬಹುದು:

"1) ಇಬ್ಬರು ಸಂಭಾಷಣೆ ಮಾಡುತ್ತಿರುವಾಗ 'ನಾನು' ಎಂಬ ಸರ್ವನಾಮವು ಮಾತನಾಡುವವನನ್ನು ತಿಳಿಸುತ್ತದೆ. 'ನಾವು' ಎನ್ನುವುದು ಮಾತನಾಡುವವನ ಜೊತೆಗೆ ಇತರರನ್ನು ಸೇರಿಸಿ ಹೇಳುತ್ತದೆ. 'ನಾನು', 'ನಾವು' ಇವೆರಡಕ್ಕೂ ಉತ್ತಮ ಪುರುಷ ಸರ್ವನಾಮವೆಂದು ಸಂಜ್ಞೆ

2) ಯಾರೊಡನೆ ನಾವು ಮಾತಾಡುತ್ತಿದ್ದೇವೋ ಅವನನ್ನು 'ನೀನು' ಎನ್ನುವುದನ್ನು ಹೇಳುತ್ತದೆ. 'ನೀವು' ಎನ್ನುವುದು ಅವನ ಜೊತೆ ಇತರರನ್ನು ಸೇರಿಸಿ ಹೇಳುತ್ತದೆ. 'ನೀನು' 'ನೀವು' ಇವೆರಡಕ್ಕೂ ಮಧ್ಯಮ ಪುರುಷ ಸರ್ವನಾಮವೆಂದು ಸಂಜ್ಞೆ

3) ಮಾತನಾಡುವವರನ್ನು ಬಿಟ್ಟು ಮಿಕ್ಕ ಎಲ್ಲಾ ಜನರನ್ನೂ, ಸಂಭಾಷಣೆಗಳಿಗೆ ವಿಷಯವಾದ ಪದಾರ್ಥಗಳನ್ನೂ ಅವನು, ಅವಳು, ಅದು ಮುಂತಾದುವುಗಳನ್ನು

ಹೇಳುತ್ತದೆ. ಇವಕ್ಕೆ ಪ್ರಥಮ ಪುರುಷ ಸರ್ವ ನಾಮವೆಂದು ಸಂಜ್ಞೆ."

ಭಾಷೆಯ ಪ್ರಮುಖ ನೆಲೆಗಳು ಮೂರು 1. ಅಕ್ಷರ 2. ಪದ 3. ವಾಕ್ಯ

ಈ ಪಠ್ಯವು ಪ್ರೌಢಶಾಲಾ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡಿರುವುದರಿಂದ ಅಕ್ಷರ ನೆಲೆಯ ವಿವೇಚನೆಯನ್ನು ಪೂರ್ತಿ ಕೈಬಿಟ್ಟು ಭಾಷೆಯ ನಾಲ್ಕು ಕೌಶಲಗಳಾದ ಆಲಿಕೆ, ಗ್ರಹಿಕೆ, ಮಾತನಾಡುವುದು ಮತ್ತು ಬರೆಯುವುದು– ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪದ ಹಾಗೂ ವಾಕ್ಯಗಳ ನೆಲೆಗಳಲ್ಲಿ ವಿಶ್ಲೇಷಿಸಲಾಗಿದೆ. ಇದಕ್ಕೆ ಪೂರಕವಾಗಿ ಸಂಕ್ಷಿಪ್ತವಾಗಿ ಲೇಖನ ಚಿಹ್ನೆಗಳನ್ನು ಕುರಿತ ವಿವರಣೆ ನೀಡಿರುವುದು ಪುಸ್ತಕದ ಉಪಯುಕ್ತತೆಯನ್ನು ಹೆಚ್ಚಿಸಿದೆ.

ಹಾಗಯೇ ಪದಸ್ವರೂಪ ಕಥನ ಎಂಬ ಪಾಠದಲ್ಲಿ ಲೇಖಕರು ಒಂದು ವಾಕ್ಯವನ್ನು ತೆಗೆದುಕೊಂಡು ಅಲ್ಲಿನ ಪದಸ್ವರೂಪವನ್ನು ಹೇಳಿರುವ ಕ್ರಮವನ್ನು ಗಮನಿಸಿ :

"ವಾಕ್ಯ : ಮಳೆಗಾಲದಲ್ಲಿ ಮೋಡಗಳು ಕಪ್ಪಗೆ ಕಟ್ಟಿ, ಭೂಮಿಗೆ ಮಳೆಯನ್ನು ಹೊಯ್ಯುತ್ತದೆ.-----ಈ ವಾಕ್ಯದಲ್ಲಿ ಏಳು ಪದಗಳಿವೆ

1). ಮಳೆಗಾಲದಲ್ಲಿ---ನಾಮಪದ, ಭಾವನಾಮ, ನಪುಂಸಕ ಲಿಂಗ, ಏಕವಚನ, ಸಪ್ತಮೀ ವಿಭಕ್ತಿ

2). ಮೋಡಗಳು---ನಾಮಪದ, ವಸ್ತುವಾಚಕ, ನಪುಂಸಕ ಲಿಂಗ, ಬಹುಇವಚನ, ಪ್ರಥಮಾ ವಿಭಕ್ತಿ

3). ಕಪ್ಪಗೆ--- ಅವ್ಯಯ, ರೀತಿಯನ್ನು ಹೇಳುವ ಕ್ರಿಯಾ ವಿಶೇಷಣ

4). ಕಟ್ಟಿ---ಅವ್ಯಯ, ಅಸಂಪೂರ್ಣ ಕ್ರಿಯಾರ್ಥಕ

5). ಭೂಮಿಗೆ---= ನಾಮಪದ, ವಸ್ತುವಾಚಕ, ನಪುಂಸಕ ಲಿಂಗ, ಏಕವಚನ, ಚತುರ್ಥೀ ವಿಭಕ್ತಿ

6). ಮಳೆಯನ್ನು--- ನಾಮಪದ, ವಸ್ತುವಾಚಕ, ನಪುಂಸಕ ಲಿಂಗ, ಏಕವಚನ, ದ್ವಿತೀಯಾ ವಿಭಕ್ತಿ

7). ಹೊಯ್ಯುತ್ತದೆ.---ಕ್ರಿಯಾಪದ, ವರ್ತಮಾನ ಕಾಲ, ಪ್ರಥಮ ಪುರುಷ, ನಪುಂಸಕ ಲಿಂಗ, ಬಹುವಚನ, ಸಕರ್ಮಕ ಧಾತು."

ಹೀಗೆ ಲೇಖಕರ ನಿರೂಪಣಾ ಶೈಲಿ ಸರಳವಾಗಿರುವುದರಿಂದ ಕೃತಿ ಸುಲಭಗ್ರಾಹ್ಯವಾಗಿದೆ.

ನಾಲ್ಕು ದಶಕಗಳ ಕಾಲದಲ್ಲಿ 25ಕ್ಕೂ ಹೆಚ್ಚು ಬಾರಿ ಮುದ್ರಣ ಕಂಡ ಈ ವ್ಯಾಕೃತಿಯು ಕನ್ನಡ ವ್ಯಾಕರಣ ಗ್ರಂಥಗಳ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿದೆ.

# ಕನ್ನಡ ವ್ಯಾಕರಣ
# KANARESE GRAMMAR-Harold Spencer ( 1914)

ಕನ್ನಡದಲ್ಲಿ ವ್ಯಾಕರಣ ಗ್ರಂಥಗಳಿಗೆ ಕೊರತೆಯೇನಿಲ್ಲ. 1150ರ ನಾಗವರ್ಮನಿಂದ ಇಲ್ಲಿಯವರೆಗೆ ನೂರಾರು ವ್ಯಾಕರಣ ಗ್ರಂಥಗಳು ಬಂದಿವೆ. ಇದೇ ನಾಗವರ್ಮ ಸಂಸ್ಕೃತದಲ್ಲಿ ರಚಿಸಿದ "ಕರ್ಣಾಟಕ ಭಾಷಾಭೂಷಣಂ" ಮತ್ತು ಕನ್ನಡದಲ್ಲಿ ಬರೆದ "ಶಬ್ದಸ್ಮೃತಿ", 1275ರ ಕೇಶಿರಾಜನ "ಶಬ್ದಮಣಿ ದರ್ಪಣಂ", 1600ರ ಭಟ್ಟಾಕಳಂಕ ಸಂಸ್ಕೃತದಲ್ಲಿ ರಚಿಸಿದ "ಶಬ್ದಾನುಶಾಸನಂ" ಇವು ಪ್ರಮುಖ
ಹಳಗನ್ನಡದ ವ್ಯಾಕರಣಗಳು. ಮುಖ್ಯವಾಗಿ 1810ರಿಂದ 1899ರವರೆಗೆ 10ಜನ ದೇಶೀಯ ವಿದ್ವಾಂಸರು ಕನ್ನಡದಲ್ಲಿ ಮತ್ತು 10 ಜನ ಪಾಶ್ಚಾತ್ಯ ಪಂಡಿತರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಮಹತ್ವದ



ವ್ಯಾಕರಣ ಗ್ರಂಥಗಳನ್ನು ರಚಿಸಿರುತ್ತಾರೆ. Hans Janeson ಎಂಬ ಪಾಶ್ಚಾತ್ಯ ಪಂಡಿತನು ಸು.1850ರಲ್ಲಿ ಜರ್ಮನ್ ಭಾಷೆಯಲ್ಲಿ "Grammatic der canari" ಎಂಬ ಕನ್ನಡ ವ್ಯಾಕರಣ ಗ್ರಂಥವೊಂದನ್ನು ರಚಿಸಿದ್ದು ವಿಶೇಷ. Rev.F.Kittel ಅವರೇ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ 'ಶಬ್ದಮಣಿ ದರ್ಪಣಂ"ನ ಸಂಪಾದನೆಯನ್ನೊಳಗೊಂಡು 4 ವ್ಯಾಕರಣ ಗ್ರಂಥಗಳನ್ನು ರಚಿಸಿರು ತ್ತಾರೆ.

ಕನ್ನಡದ ಮೊದಲ ಉಪ ಲಬ್ಧ ಮುದ್ರಿತ ಪುಸ್ತಕವು 1817 ರಲ್ಲಿ ಅಚ್ಚಾದ W.Carey, D.D. ಅವರ "Grammar of Kurnata Language" ಎಂಬ ವ್ಯಾಕರಣ ಗ್ರಂಥವೇ ಆಗಿದೆ. ಉಪ ಲಬ್ಧವಿಲ್ಲದ, ಆದರೆ 1810ರಲ್ಲಿ ಮುದ್ರಣಗೊಂಡಿತೆಂದು ತಿಳಿದು ಬಂದಿರುವ ಕೃತಿಯೂ ಕೃಷ್ಣ ಮಾಚಾರ್ಯರು ರಚಿಸಿದ "ಧಾತುಮಂಜರಿ" ಎಂಬ ಕನ್ನಡ ವ್ಯಾಕರಣ ಕೃತಿಯೇ ಆಗಿದೆ. W.Careyಯ ವ್ಯಾಕರಣದಲ್ಲಿನ ದೋಷಗಳನ್ನು ಪರಿಷ್ಕರಿಸಿ 1820ರಲ್ಲಿ ಜಾನ್ ಮೆಕ್ಕೆರೆಲ್ "A Grammar of Karnata Language" ಎಂಬ ಕೃತಿಯನ್ನು ರಚಿಸಿ ದನು. ಈ ಕೃತಿಯನ್ನು ಪರಿಷ್ಕರಿಸಿ Thomas Hodson ಎಂಬ ವಿದ್ವಾಂಸನು 1859ರಲ್ಲಿ "Elementary Grammar of the Kannada or Canarese Language " ಎನ್ನುವ ಕೃತಿರಚನೆ ಮಾಡಿದನು. ಈ ಕೃತಿಯನ್ನು ಪರಿಷ್ಕರಿಸಿ "Kanarese Grammar" ಕೃತಿರಚನೆ ಮಾಡಿದ್ದು Herald Spencer, B.A. ಎಂಬಾತ.

ಪ್ರಸ್ತುತ ಈ ಕೃತಿಯು 1914ರಲ್ಲಿ ಮೈಸೂರಿನ ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಣಗೊಂಡಿದೆ. ಒಟ್ಟು 330 ಪುಟಗಳಿರುವ ಈ ಕೃತಿಯ ಬೆಲೆ ಎಲ್ಲೂ ನಮೂದನೆಗೊಂಡಿಲ್ಲ. 1950ರಲ್ಲಿ ಈ ಕೃತಿಯನ್ನು ಪರಿಷ್ಕರಿಸಿ W.Peterson, B.D. ಮೈಸೂರಿನ ವೆಸ್ಲಿಯನ್ ಪ್ರೆಸ್ಸಿನಿಂದ ಪ್ರಕಟಗೊಳಿಸಿದನು. ಹೀಗಾಗಿ W.Carey ಯವರ ವ್ಯಾಕರಣ ಗ್ರಂಥವು ವಿಭಿನ್ನ ಕಾಲದಲ್ಲಿ ವಿಭಿನ್ನ

ಲೇಖಕರಿಂದ ಪರಿಷ್ಕರಣೆಗೆ ಒಳಗಾಗಿದೆ. ಈ ಸರಣಿಯಲ್ಲಿನ ಮಹತ್ವದ ಕೃತಿ ಹೆರಾಲ್ಡ್ ಸ್ಪೆನ್ಸರ್‌ನ ಹಾಲಿ ಕೃತಿ " Kanarese Grammar ". ಕೃತಿಯ ಪ್ರಿಫೇಸಿನಲ್ಲಿ ಕೃತಿಕಾರನು ಎಚ್.ಗುಲ್‌ಫೋರ್ಡ್, ಐ.ಫೀಲ್ಡರ್, ಈ.ಪಿ.ರೈಸ್, ಡಬ್ಲ್ಯೂ.ಎಚ್.ತೋರ್ಪ್‌ಡಬ್ಲ್ಯೂ.ಈ.ಟಾಮ್ಲಿನ್ಸನ್, ಕೆ.ವೆಂಕಟಾಚಾರ್-ಹಾಸನ ಹಾಗೂ ಡಾ.ಕಿಟ್ಟೆಲ್ ಅವರುಗಳನ್ನು ತನ್ನ ಕೃತಿಗೆ ವಿವಿಧ ಹಂತಗಳಲ್ಲಿ ಸಹಾಯ ಮಾಡಿದ್ದನ್ನು ಸ್ಮರಿಸಿಕೊಂಡಿದ್ದಾನೆ. ಈ ಕೃತಿಗೆ ಮೂಲ ಹಿಂದೆ ಹೇಳಿದಂತೆ 1859ರಲ್ಲಿ ರಚಿತವಾದ ಥಾಮಸ್ ಹಾಡ್ಸನ್ ಅವರ ಕೃತಿ. ಇದು 1864ರ ಹೊತ್ತಿಗೇನೆ 2ನೆಯ ಮುದ್ರಣ ಕಂಡಿತ್ತು. ಇಂತಹ ಜನಪ್ರಿಯವಾಗಿದ್ದ ಕೃತಿಯನ್ನು ಪರಿಷ್ಕರಿಸಿದ್ದು ಸ್ಪೆನ್ಸರನ ವಿಶೇಷ.

ಸ್ಪೆನ್ಸರನ ಈ ಕೃತಿಯು ಇತರ ಪಾಶ್ಚಾತ್ಯ ವಿದ್ವಾಂಸರ ಕೃತಿಗಳಂತೆ ಸಂಪೂರ್ಣವಾಗಿ ಇಂಗ್ಲಿಷ್ ಭಾಷೆಯಲ್ಲೇ ಇದೆ. ಈ ಕೃತಿಯನ್ನು ಹೊರತರಲು ಕಾರಣ ಸ್ಪೆನ್ಸರ್ರೇ ಮುನ್ನುಡಿಯಲ್ಲಿ ಹೇಳುವಂತೆ "ಸಮಿತಿಯ ಮೊದಲ ಉದ್ದೇಶವೆಂದರೆ ತಾರತಮ್ಯಾನುಸಾರ ವರ್ಗೀಕರಿಸಿದ ಅಭ್ಯಾಸಗಳನ್ನೊಳಗೊಂಡು ಹಾಡ್ಸನ್ರ ಪುಸ್ತಕದ ನವೀನ ಹಾಗೂ ಪರಿಷ್ಕರಿಸಿದ ಆವೃತ್ತಿಯನ್ನು ಹೊರತರುವುದು.(ಮೂಲ ಇಂಗ್ಲಿಷಿನಲ್ಲಿದೆ)" ಜೊತೆಗೆ ಪ್ರಕಾಶಕರ ಕೋರಿಕೆಯಂತೆ ಕನ್ನಡ ಪದಗಳು, ವಾಕ್ಯಗಳು ಹಾಗೂ ನಿದರ್ಶನಗಳಿಗೆ ಇಂಗ್ಲಿಷ್ ಭಾಷೆಯ ಲಿಪ್ಯಂತರವನ್ನು ಉಳಿಸಿಕೊಳ್ಳಲಾಗಿದೆ. 330 ಪುಟಗಳ ಈ ಪುಸ್ತಕದಲ್ಲಿ 4 ಅಧ್ಯಾಯಗಳೂ 31 ಪಾಠಗಳೂ ಇವೆ. ಕೊನೆಯಲ್ಲಿ ಪದಕೋಶ ಹಾಗೂ ಶಬ್ದಸೂಚಿಗಳ ಜೊತೆಗೆ ಸಂಬಂಧಾರ್ಥಕ ಸರ್ವನಾಮಗಳು, ಮೂಲಸಂಖ್ಯೆಗಳು, ಅಸಮರೂಪ ಕ್ರಿಯಾಪದಗಳು, ಅನುಕರಣ ಪದಗಳು, ಪಂಚಾಂಗ-ಕಾಲ ಮತ್ತು ಋತುಮಾನಗಳು, ವ್ಯಾಕರಣ ಪಾರಿಭಾಷಿಕ ಶಬ್ದಗಳು ಮತ್ತು ಲೇಖನ ಚಿಹ್ನೆಗಳು ಈ ಅತ್ಯಂತ ಉಪಯುಕ್ತ 7 ಅನುಬಂಧಗಳು ಇವೆ. ವರ್ಣಮಾಲೆ ಎಂಬ ಮೊದಲ ಪಾಠದಲ್ಲಿ ಕನ್ನಡದ ವರ್ಣಮಾಲೆಯನ್ನು ಸಮಗ್ರವಾಗಿ ವಿವರಿಸಿರುವುದರ ಜೊತೆಗೆ ಕನ್ನಡ ಕಾಗುಣಿತದ ಸಂಪೂರ್ಣ ಪಟ್ಟಿಯನ್ನು ವಿವರಣೆಯೊಂದಿಗೆ ನೀಡಲಾಗಿದೆ. ಪ್ರತಿಯೊಂದು ಪಾಠಗಳ ಅಂತ್ಯದಲ್ಲಿಯೂ ವಿವರವಾದ ಅಭ್ಯಾಸಗಳನ್ನು ನೀಡಲಾಗಿದೆ.

ಈ ವ್ಯಾಕರಣ ಕೃತಿಯಲ್ಲಿ ಭಾಷೆಯ ಮೂರು ನೆಲೆಗಳಾದ ಅಕ್ಷರ, ಪದ

ಮತ್ತು ವಾಕ್ಯ ವಿಷಯಗಳಲ್ಲಿ ಅಕ್ಷರ ಮತ್ತು ಪದ(ಶಬ್ದ) ಪ್ರಕರಣಗಳನ್ನು ವಿಶೇಷವಾಗಿ ಗಮನಿಸಲಾಗಿದೆ. ವಾಕ್ಯವಿಷಯಕ್ಕೆ ಕೃತಿಕಾರ ಪ್ರವೇಶಿಸಿಯೇ ಇಲ್ಲ. ಇದು ಈ ಕೃತಿಯ ಒಂದು ಬಹು ದೊಡ್ಡ ಕೊರತೆ. ಏಕೆಂದರೆ ಭಾಷೆ ವ್ಯವಹಾರದಲ್ಲಿರುವುದೇ ವಾಕ್ಯ ರೂಪಗಳಲ್ಲಿ. ಇದು ಹಿಂದಿನ ಅನೇಕ ವ್ಯಾಕರಣ ಗ್ರಂಥಗಳ ದೋಷವೂ ಆಗಿದೆ. ಅನು ಬಂಧ1ರಲ್ಲಿ ನೀಡಿರುವ ಸಂಬಂಧಾರ್ಥಕ ನಾಮಪದ ಗಳಲ್ಲಿ ಕನ್ನಡದ ಕೆಲವು ಸೂಕ್ಷ್ಮಗಳನ್ನು ಹೆರಾಲ್ಡ್ ಸ್ಪೆನ್ಸರ್ ಸವಿವರವಾಗಿ ಸ್ಪಷ್ಟೀಕರಿಸುತ್ತಾನೆ. ನಿದರ್ಶನಕ್ಕೆ **ದೊಡ್ಡಪ್ಪ , ದೊಡ್ಡಮ್ಮ, ಚಿಕ್ಕಪ್ಪ** ಮತ್ತು **ಚಿಕ್ಕಮ್ಮ** ಶಬ್ದಗಳಿಗೆ ಈ ರೀತಿ ವಿವರಿಸುತ್ತಾನೆ : ತಂದೆಯ ಸೋದರರು ಹಾಗೂ ತಾಯಿಯ ಸೋದರಿಯರಿಗೆ ತಾಯ್ತಂದೆಯರಷ್ಟೇ ಅಥವಾ ಅದಕ್ಕಿಂತ ಸ್ವಲ್ಪ ಮಾತ್ರ ಕಡಿಮೆ ವಿಶೇಷ ಸ್ಥಾನಮಾನ ನೀಡಲಾಗಿದೆ. " While not called actually ಅಪ್ಪ appa and ಅಮ್ಮ amma, they are called ದೊಡ್ಡಪ್ಪ doddappa ಚಿಕ್ಕಪ್ಪ chikkappa ದೊಡ್ಡಮ್ಮ doddamma ಚಿಕ್ಕಮ್ಮ chikkamma. The wife of ದೊಡ್ಡಪ್ಪ doddappa is called ದೊಡ್ಡಮ್ಮ doddamma and the husband of a ದೊಡ್ಡಮ್ಮ doddamma is called ದೊಡ್ಡಪ್ಪ doddappa ; similarly for the other terms." ಸ್ಪೆನ್ಸರ್ ಸಮಾಸಗಳನ್ನು ಕುರಿತು ಹೇಳುವಾಗ **ವೀಪ್ಸಾ ಸಮಾಸ** ಎಂಬ ಒಂದು ಕುತೂಹಲಕಾರಿ ಸಂಗತಿಯನ್ನು ಹೇಳಿದ್ದಾನೆ. ಅದನ್ನು ಕುರಿತು"ಇಲ್ಲಿ ವಿವರಿಸಲಾಗಿರುವ ಹಲವು ರೀತಿಯ ಪ್ರತಿರೂಪ, ಪುನರುಕ್ತಿ, ಇತ್ಯಾದಿ ರೂಪಗಳನ್ನು 'ವೀಪ್ಸಾ ಸಮಾಸ' ಎಂಬುದರ ಸಾಮಾನ್ಯ ಹೆಸರಿನಡಿ ಸಂಗ್ರಹಿಸಲಾಗಿದೆ. ವೀಪ್ಸೆ Veepsaa means 'repitition'. ಎನ್ನುತ್ತಾನೆ. ಉದಾಹರಣೆಯಾಗಿ **ಹೊತ್ತು ಹೊತ್ತಿಗೆ, ಮನೆಮನೆಗೆ, ಹೇಳಿಹೇಳಿ, ಏನೇನೂ, ಇದ್ದೇಇರುತ್ತದೆ, ವಿಧವಿಧ, ಇಷ್ಟಿಷ್ಟು** ಇತ್ಯಾದಿ. ಅರಿಸಮಾಸವನ್ನು HYBRID SAMASA ಎಂದು ಕರೆದಿರುವುದೊಂದು ವಿಶೇಷ. ಹೀಗೆ ಈ ಕೃತಿಯು ಅನೇಕ ಅಪೂರ್ವಸಂಗತಿಗಳ ಆಗರವಾಗಿದೆ. ಆ ಕಾಲಕ್ಕೆ ಕನ್ನಡ ಭಾಷೆಯ ಪ್ರಯೋಗಗಳ ಸೂಕ್ಷ್ಮಾತಿಸೂಕ್ಷ್ಮಗಳನ್ನು ವಿವರಿಸುವಂತಹ ಒಂದು ಅಪೂರ್ವ ವ್ಯಾಕರಣ ಗ್ರಂಥ ಪ್ರಕಟವಾಗಿರುವುದು ವಿಶೇಷವೇ ಸರಿ.

# ಆರ್.ತಾತಾ ಅವರ 'ಭಾಷಾಶಾಸ್ತ್ರ'.(1914)

ಶ್ರೀ **ಆರ್.ತಾತಾ.** ಎಂ.ಎ., ಎಲ್.ಟಿ., ರಾಜಮಹೇಂದ್ರ, ಇವರ **'ಭಾಷಾಶಾಸ್ತ್ರ'** ಎಂಬ ಈ ಕೃತಿಯು 'ದಿ ಕರ್ನಾಟಕ ಗ್ರಂಥಮಾಲಾ ಸೀರೀಸ್'ನ 66ನೇ ಕೃತಿಯಾಗಿ 1914ರಲ್ಲಿ ಮೈಸೂರಿನ 'ದಿ **ಜಿ.ಟಿ.ಎ.ಪ್ರೆಸ್** 'ನಲ್ಲಿ ಅಚ್ಚಾಗಿದೆ. ಡೆಮಿ ಅಷ್ಟಾಕಾರದ 6+76 ಪುಟಗಳನ್ನೊಳಗೊಂಡಿರುವ ಈ ಕೃತಿ ಬಹುಶಃ ಭಾಷಾಶಾಸ್ತ್ರವನ್ನು ಕುರಿತ ಕನ್ನಡದ ಮೊಟ್ಟಮೊದಲ ಕೃತಿ ಇರಬಹುದು. ಇದರ ಬೆಲೆ ಪುಸ್ತಕದಲ್ಲಿ ಎಲ್ಲಿಯೂ ನಮೂದಾಗಿಲ್ಲ. 1876ರಿಂದ 1932ರವರೆಗೆ ಜೀವಿಸಿದ್ದ ಶ್ರೀ **ಆರ್.ತಾತಾ** ಅವರು ಈ ಕೃತಿಯನ್ನಲ್ಲದೆ ಇನ್ನೂ ನಾಲ್ಕು ಕೃತಿಗಳನ್ನು ರಚಿಸಿರುತ್ತಾರೆ.

1. ತಮಿಳಿನ ಪದಿನೇಳ್ಕಣಕ್ಕು ಕೃತಿಯ ಕನ್ನಡಾನುವಾದ-**ಕನ್ನಡ ನಾಲಡಿ**-1915-ಜಿ.ಟಿ.ಎ.ಪ್ರೆಸ್ 2. **ಸಮಂತಭದ್ರಸ್ವಾಮಿಗಳ** ಸಂಸ್ಕೃತದ **ರತ್ನಕರಂಡದ ಕನ್ನಡಾನುವಾದ** 3. **ದಯಾಬೋಧೆ** 4. **ಉದ್ದಾಯನ ಚರಿತೆ**-ನಯಸೇನನ ಧರ್ಮಾಮೃತದಲ್ಲಿ ಬರುವ ಕತೆ-1914-ಭಾಮಿನಿ ಷಟ್ಪದಿ. ಸದರೀ ಕೃತಿ **'ಭಾಷಾಶಾಸ್ತ್ರ'** ದ ಪೀಠಿಕೆಯಲ್ಲಿ ಶ್ರೀ **ತಾತಾ** ಅವರು "ಇದಲ್ಲದೆ ಕನ್ನಡವೆಂಬ ಮಾತನ್ನೇ ನೆಟ್ಟಗೆ ನುಡಿಯಲಿಕ್ಕೆ ತಿಳಿಯದ ವಿದ್ವಾಂಸರು ಪಾಶ್ಚಾತ್ಯರೆಂದೇ ಭ್ರಾಂತಿಗೊಂಡಿದ್ದದು ನಮ್ಮ ತಪ್ಪೆಂದೀಗಳೀಗಳೆ ತಿಳಿಯಿತು. ಏಕೆಂದರೆ:- ಮತ್ತಿನ ನಮ್ಮ ನಾಡಿನ ಒಂದೆರಡು ನುಡಿಗಳನ್ನು ಕಲ್ತವರೂ ನಮ್ಮ ಕನ್ನಡ ನುಡಿಯನ್ನು ಕಾಲಿಂದ ತಲೆವರೆಗೂ ತಿಳಿದವರಂತೆ ನಟಿಸಿ ಎಲ್ಲರನ್ನೂ ಮಂಕುಗೊಳಿಸಿ ತಮಗೆ ತೋರಿದಂತೆ ಕನ್ನಡದ ಸುದ್ದಿ ಯನ್ನಾಡುತ್ತಿರುವರು. ಇದು





ಮಾತ್ರ ದೂಷಣೆಯೆಂದು ತಿಳಿದು ಭಾಷಾ ಬಾಂಧವರೆಲ್ಲರೂ ಇಂತಹ ಮಾತುಗಳನ್ನು ಕೇಳದೆ ತಾವೇ ಚೆನ್ನಾಗಿ ಯೋಚಿಸಿ ನಿಜ ಸ್ವರೂಪವನ್ನು ತಿಳಿಯಲು ಯತ್ನಿಸಬೇಕೆಂಬುದೇ ನನ್ನ ಸಂಕಲ್ಪವಿದರಲ್ಲಿ. ಇದಲ್ಲದೆ ಇಂತಹ ಬಾಯ್ಬಡಿಕರ ಭಾಷಾ ತತ್ವಕ್ಕೆ ಗ್ರಂಥ ರಚನೆ ಮಾಡುವಲ್ಲಿ ಅವಶ್ಯಕವಾದ ಸಾಮರ್ಥ್ಯ, ಸಾಮಗ್ರಿ, ಬಹುಭಾಷಾ ಪಾಂಡಿತ್ಯವಿವಾವುದೂ ಇಲ್ಲದೆ ಬರೆದುಬಿಟ್ಟಿರುವ ಈ ನನ್ನ ಗ್ರಂಥದಲ್ಲಿ ವಿವಿಧವಾದ ದೋಷಗಳೂ ಇರಲಿಕ್ಕೆ ಸಾಕು. . . . .ಅದಲ್ಲದೆ **ದ್ರಾವಿಡಭಾಷೆಗೂ ಕನ್ನಡಕ್ಕೂ ಇರುವ ಸಂಬಂಧವು ಇನ್ನೂ ನೆಟ್ಟಗೆ ಎಲ್ಲಿಯೂ ವಿಸ್ತಾರವಾಗಿ ಹೇಳಿಲ್ಲ.** ಅಲ್ಲಲ್ಲಿ ಭಾಷಾಪಕ್ಷಪಾತದಿಂದ ಭಾಷಾತತ್ವವೂ ಪಕ್ಷಪಾತವಾಗಿರುವುದು. (Patriotic Philology) ಇವೇ ಮೊದಲಾದ ವಿಷಯಗಳನ್ನು ಅವಕಾಶವು ದೊರೆತಂದು ಮುಂದೆ **ಕನ್ನಡ ನುಡಿ**ಯೆಂಬ ಹೆಸರಿನಿಂದ ಯಥಾಮತಿಯಾಗಿ ಹೇಳಿ ಕನ್ನಡಿಗರಲ್ಲಿ ಸಮರ್ಪಿಸಬೇಕೆಂದಿರುವೆನು." ಎಂದು ಹೇಳಿರುವ ಈ ಮಾತುಗಳು ತುಂಬಾ ಕುತೂಹಲಕಾರಿಯಾಗಿದೆ. ಆದರೆ ಅವರ **"ಕನ್ನಡ ನುಡಿ"** ಎಂಬ ಕೃತಿಯು ಬರಲೇ ಇಲ್ಲ. ತಮ್ಮ ಬುದ್ಧಿಶಕ್ತಿ ಹಾಗೂ ಬರೆವಣಿಗೆಯನ್ನು ಕುರಿತ ಅವರ ಹಿಂಜರಿಕೆ ಅಳುಕುಗಳು ಅವರ ವಿನಯ ಸಂಯಮಗಳಿಗೆ ಸಾಕ್ಷಿ.

ಈ ಕೃತಿಯಲ್ಲಿ ಒಟ್ಟು ಐದು ಪ್ರಕರಣಗಳಿವೆ. ಮೊದಲನೆಯ ಪ್ರಕರಣವು 'ಭಾಷೆಯೂ ಭಾಷಾ ಪರಿಚಯವೂ' ಭಾಷೆಯನ್ನು ಕುರಿತ ವಿವೇಚನೆಗೆ ಮೀಸಲಾಗಿದೆ. ಭಾಷೆಯೆಂದರೇನು?, ಅವಸ್ಥೆಗಳು, ಉಪಭಾಷೆಗಳೂ ಸೋದರ ಭಾಷೆಗಳೂ, ಭಾಷಾಶಾಸ್ತ್ರ(Philology), ವ್ಯಾಕೃತಿಯ(ವ್ಯಾಕರಣ)ಪದ್ಧತಿ ಸಿದ್ಧಾಂತ, ಸಾಮಾನ್ಯ ವ್ಯಾಕರಣ, ಅವಸ್ಥಾಫಲ– ಇವುಗಳನ್ನು ಕುರಿತು ವಿವೇಚಿಸುತ್ತದೆ. " ಸೋದರ ಭಾಷೆಗಳಾದ **ಸಂಸ್ಕೃತ, ಗ್ರೀಕು, ಲಾಟಿನ್ನು**ಗಳನ್ನು ಪರೀಕ್ಷಿಸುವುದೂ ಕೇವಲ ಚರಿತ್ರಾನ್ವೇಷಣದಿಂದ. . . .



ಪೂರ್ವದ ಹಳ್ಗನ್ನಡ, ಹಳಗನ್ನಡ, ಎಳಗನ್ನಡ, ಹೊಸಗನ್ನಡ ಇವುಗಳ ಹುಟ್ಟನ್ನು ಚನ್ನಾಗಿ ವಿಚಾರಿಸಿದರೆ ಇದು ಕನ್ನಡ ಭಾಷೆಯ ಚರಿತ್ರೆಗನುಕೂಲವಾಗುವುದು. . . . . . ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿರುವ ಅರ್ಥರೂಪಸಾದೃಶ್ಯವುಳ್ಳ ಪದಗಳನ್ನು ನೋಡಿ ಆದಿದ್ರಾವಿಡದಲ್ಲಿ ಅದರ ಸ್ವರೂಪವನ್ನು ನಿರ್ಧರಿಸಬಹುದು." ಎಂಬ ಲೇಖಕರ ಗಮನಿಕೆಯನ್ನು ಈ ಕೃತಿರಚನಾಕಾಲದ ಹಿನ್ನೆಲೆಯಲ್ಲಿ ಗುರುತಿಸಬೇಕು. ಇಲ್ಲಿ ಪ್ರಸ್ತಾಪಿಸಿರುವ **ಎಳಗನ್ನಡ** ಎಂಬ ಪರಿಕಲ್ಪನೆ **ಈಶ್ವರಕವಿಯ ಕವಿಜಿಹ್ವಾಬಂಧನ**ದಲ್ಲಿಯೂ ಉಲ್ಲೇಖಗೊಂಡಿದೆ.

ಎರಡನೆಯ ಪ್ರಕರಣ 'ಶಬ್ದ ಪ್ರಕರಣ.' ಇದರಲ್ಲಿ ಶಬ್ದಗಳು, ಸ್ವರ, ವ್ಯಂಜನ, ಮೇಳನ ಪ್ರಕ್ರಿಯೆ (Synthesis) ಹಾಗೂ ಸ್ಖಲನ (glides) ಪ್ರಕ್ರಿಯೆಗಳನ್ನು ಕುರಿತ ಸಾಮಾನ್ಯ ಪರಿಚಯವಿದೆ. 'ಶಬ್ದಾವಸ್ಥೆಗಳು' ಎಂಬುದು ಮೂರನೆಯ ಪ್ರಕರಣ. ಇಲ್ಲಿ ಅಂಗಪಲ್ಲಟ (Organic shifting), ಶ್ರವಣಾವಸ್ಥೆಗಳು(Accoustic changes), ಮಿಶ್ರಾವಸ್ಥೆ, ವಿಯುಕ್ತಾವಸ್ಥೆ, ಬಾಹ್ಯಾವಸ್ಥೆ, ಶಬ್ದವಿಧಿ, ಶಬ್ದಲಾಘವ, ಶಬ್ದಸ್ಥೈರ್ಯ, ಶಬ್ದಾವಸ್ಥೆಗಳ ಸಾಧಾರಣಧರ್ಮಗಳಾದ ಮಿತವ್ಯಯ, ಸೌಲಭ್ಯಾಕಾಂಕ್ಷೆ, ಸೋಮಾರಿತನ–ಈ ಮುಂತಾದವುಗಳನ್ನು ಕುರಿತ ಚಿಂತನೆಗಳಿವೆ. ವ್ಯಾಕರಣವನ್ನು ಅಲಕ್ಷಿಸಿ ರಳಕುಳಕ್ಷಳಗಳನ್ನು ಧಿಕ್ಕರಿಸಿದ ಧೀಮಂತ **ಹರಿಹರ ಕವಿಯ** ಪ್ರಸ್ತಾಪ ಇಲ್ಲಿ ಬರುತ್ತದೆ. ನಾಲ್ಕನೆಯ ಪ್ರಕರಣ 'ರೂಪೋತ್ಪತ್ತಿ'. ಈ ಪ್ರಕರಣದಲ್ಲಿ ಭಾಷೋತ್ಪತ್ತಿ, ಸಮಾಸಗಳು, ಅವಯವೋತ್ಪತ್ತಿ, ಬರಿಯ ಪದಗಳು, ಪ್ರತ್ಯಯಗಳು, ನಾಮಾದಿಗಳ ಉತ್ಪತ್ತಿ, ಕ್ರಿಯಾಪದದುತ್ಪತ್ತಿ, ನಿಪಾತಾವ್ಯಯೋತ್ಪತ್ತಿ (Particles), ವೀಪ್ಸೆ, ಸಮಾನಾಧಿಕರಣಾವ್ಯಯ (concord), ಬರೆಯುವ ಭಾಷೆ ಮತ್ತು ನುಡಿಯುವ ಭಾಷೆ, ಲಗಿತ ಭಾಷೆ–ಈ ಮುಂತಾದುವನ್ನು ಕುರಿತ ಪೃಥಕ್ಕರಣವಿರುವುದು. ಇವರು ಪ್ರಸ್ತಾಪಿಸಿರುವ 'ವೀಪ್ಸಾ ಸಮಾಸ ' ಎಂಬ ಪ್ರಸ್ತಾಪ ಹೆರಾಲ್ಡ್ ಸ್ಪೆನ್ಸರ್‌ನ ಕ್ಯಾನರೀಸ್ ಗ್ರಾಮರ್ (ಸ್ಪೆನ್ಸರನ 'ಅಪೂರ್ವ ವ್ಯಾಕರಣ'–ಸಾಪ್ತಾಹಿಕ ಪುರವಣಿ–9 ಅಕ್ಟೋಬರ್ 2011) ಕೃತಿಯಲ್ಲಿ ಬಂದಿದೆ. ಸ್ಪೆನ್ಸರನ ಕೃತಿಯು ಕೂಡಾ 1914 ರಲ್ಲಿಯೇ ಮೈಸೂರಿನ ವೆಸ್ಲಿ ಮಿಷನ್ ಪ್ರೆಸ್‌ನಲ್ಲಿ ಅಚ್ಚಾಗಿದೆ ಎಂಬುದು ಗಮನಾರ್ಹ. ತಾತಾ ಮತ್ತು ಸ್ಪೆನ್ಸರ್ ಇವರುಗಳಿಗೆ ಪರಸ್ಪರರ ಪರಿಚಯವಿತ್ತೆ, ಇವರೀರ್ವರೂ ಪರಸ್ಪರರ ಪುಸ್ತಕಗಳನ್ನು ಪರಿಶೀಲಿಸಿದ್ದರೇ ಎಂಬುದು ಗೊತ್ತಿಲ್ಲ. ಒಟ್ಟಿನಲ್ಲಿ

'ವೀಪ್ಸೆ' ಎಂಬ ಪರಿಕಲ್ಪನೆಯು ತಾತಾ ಹಾಗೂ ಸ್ಪೆನ್ಸರರ ಕೃತಿಗಳಲ್ಲಿ ಏಕಕಾಲದಲ್ಲಿ ಉಲ್ಲೇಖಗೊಂಡಿರುವುದು ಕುತೂಹಲಕಾರಿಯಾದ ಅಂಶ. ವೀಪ್ಸೆ ಎಂದರೆ ದ್ವಿರುಕ್ತಿ-ತಂತಮ್ಮ, ಈ ಬಂದನೀಬಂದನ್ ಎಂಬಂತೆ. 'ಬರೆಯುವ ಭಾಷೆ ಮತ್ತು ನುಡಿಯುವ ಭಾಷೆ' ಯನ್ನು ಕುರಿತ ಚರ್ಚೆಯಲ್ಲಿ ಹೀಗೆ ಹೇಳುತ್ತಾರೆ: "ವಾಡಿಕೆಯಾದ ಉಪಭಾಷೆಯನ್ನು ನಿಕೃಷ್ಟ ವೆಂದೆಣಿಸುವುದು ಸರಿಯಲ್ಲ. ಕೆಲವು ಪ್ರದೇಶಗಳಲ್ಲಿ ಬಂದಾರೆ, ಬಂದಿದಾರೆ,. . (ಬಂದರು) ಎಂಬುದಕ್ಕೆ ಬದಲಾಗಿ ಹೇಳುವುದುಂಟು. ಚನ್ನಾಗಿ ಯೋಚಿಸಿದರೆ ಬಂದಾರ್ ಎಂಬ ಹಳೇ ರೂಪದಿಂದ ಇವೆರಡೂ ಹುಟ್ಟಿದುವು". ಈ ರೀತಿಯ ಅನೇಕ ಅಪೂರ್ವ ಗಮನಿಕೆಗಳು ಹಾಗೂ ಒಳನೋಟಗಳನ್ನು ತಾತಾ ಅವರಲ್ಲಿ ಗಮನಿಸಬಹುದು.

ಐದನೆಯ ಪ್ರಕರಣ 'ಭಾಷಾವಸ್ಥೆಗಳು' ಎಂಬ ಭಾಗ. ಈ ಪ್ರಕರಣದಲ್ಲಿ ಪರ್ವಗಳು(ಅವಸ್ಥೆಗಳು), ಉಪಭಾಷೆಗಳ ಉತ್ಪತ್ತಿ, ಭಾಷಾಕುಟುಂಬಗಳು, ಮಿಶ್ರಭಾಷೆಗಳು, ಅವಸ್ಥೆಯ ವೇಗ, ಭಾಷೆಯ ಪ್ರಾಚೀನತೆ– ಈ ಮುಂತಾದ ವಿಚಾರಗಳಿವೆ. ಇಲ್ಲಿ ಒಂದೆಡೆ ಆರ್.ತಾತಾ ಅವರು "ಜನಾಂಗವು ಒಬ್ಬೊಬ್ಬರ ನುಡಿಗಳಲ್ಲಿ ಅಧಿಕಾರವನ್ನು ವಹಿಸದಿದ್ದರೆ ಎರಡು ತಲಾಂತರದವರ ನುಡಿಗಳು ಪರಸ್ಪರ ಅರ್ಥವಾಗದೆ ಹೋಗುತ್ತವೆ" ಎಂಬ ಎಚ್ಚರದ ಮಾತು ನುಡಿಯುತ್ತಾರೆ. ಹೀಗೆಯೇ ಇದಕ್ಕೆ ಪೂರಕವಾಗಿ "ಅನಾವಶ್ಯವಾದ ಪ್ರಭೇದಗಳು ಸಾಧಾರಣವಾಗಿ ಭಾಷೆಯಲ್ಲಿರುವುದಿಲ್ಲ." ಎಂದೂ ಸರಿಯಾಗಿಯೇ ಗುರುತಿಸಿರುತ್ತಾರೆ.

ನಿಘಂಟು, ವ್ಯಾಕರಣ ಮುಂತಾದ ಕೃತಿಗಳು ಬಹುಪಾಲು ಸಾಂಪ್ರದಾಯಿಕ ಮಾರ್ಗದಲ್ಲಿ ರಚನೆಗೊಳ್ಳುತ್ತಿದ್ದ ಒಂದು ಶತಮಾನದ ಹಿಂದೆ, ಮುಂದೆ ಅಪಾರವಾಗಿ ಚಾಲನೆಗೆ ಬರಲಿದ್ದ, ಅಗಾಧ ಸಾಧ್ಯತೆಗಳಿದ್ದ, ನಿರಂತರವಾಗಿ ಸಮಕಾಲೀನವಾಗಲಿದ್ದ "ಭಾಷಾಶಾಸ್ತ್ರ(Linguistics)" ಎಂಬ ನಿಖರವಾದ ವಿರಳ ಶಿಸ್ತನ್ನು ಕುರಿತ 1914 ರಷ್ಟು ಹಿಂದೆಯೇ ಬಂದ **ಶ್ರೀ ಆರ್.ತಾತಾ** ಅವರ ಈ ಕೃತಿಯು ಕನ್ನಡದ ಅಪಾರ ಸಾಧ್ಯತೆಗೆ ಸಾಕ್ಷಿಯಾಗಿದೆ. **ಶ್ರೀರಂಗ, ತೀ.ನಂ.ಶ್ರೀ, ಬಿಳಿಗಿರಿ, ಚಿದಾನಂದ ಮೂರ್ತಿ, ಶಂಕರ ಭಟ್, ಕೆ.ವಿ.ನಾರಾಯಣ್, ಕೃಷ್ಣಪರಮೇಶ್ವರ ಭಟ್ಟ** ಇವರಂತಹ ಭಾಷಾವಿಜ್ಞಾನಿಗಳಿಗಿಂತ ಒಂದೆರಡು ತಲೆಮಾರಿನಷ್ಟು ಹಿಂದೆಯೇ ಆಗಿಹೋದ **ಶ್ರೀ ಆರ್.ತಾತಾ** ಅವರನ್ನು ಕನ್ನಡ ಭಾಷಾಲೋಕವು ಮರೆಯುವಂತೆಯೇ ಇಲ್ಲ.

## ಭಾರತಿ ಸಂಪಂಗಿರಾಮ ಅವರ 'ಪ್ರಶ್ನೋತ್ತರ ಲೇಖ್ಯಬೋಧಿನಿ' (1901)

ಇದು ೧೯೨೭ರಲ್ಲಿ ಒಂಬತ್ತನೆಯ ಮುದ್ರಣ ಕಂಡ ಒಂದು ವ್ಯವಹಾರ ಕನ್ನಡದ ಪುಸ್ತಕ. ಮೊದಲನೆಯ ಮುದ್ರಣದ ಕಾಲ ಗೊತ್ತಿಲ್ಲ. ಆದರೆ ಒಳಗಿನ ಉದಾಹೃತ ಪತ್ರಗಳಲ್ಲಿನ ದಿನಾಂಕದ ಆಧಾರದ ಮೇಲೆ ೧೯೦೧ರಲ್ಲಿ ಮೊದಲ ಮುದ್ರಣಗೊಂಡಿರುವುದೆಂದು ಊಹಿಸಲು ಅವಕಾಶವಿದೆ. ಸವಿನುಡಿಯ ಗ್ರಂಥಮಾಲೆಯ ಈ ಕೃತಿ ಬೆಂಗಳೂರಿನ 'ವಿ.ನೈಡ್ ಅಂಡ್ ಕಂಪನಿ, ಪವರ್ ಪ್ರೆಸ್ಸಿನಲ್ಲಿ' ಮುದ್ರಣಗೊಂಡಿದೆ. ಇದನ್ನು ಪ್ರಕಟಿಸಿರುವವರು ಟಿ.ಎನ್.ಶ್ರೀನಿವಾಸ ಶೆಟ್ಟರು. ಪುಸ್ತಕದ ಆರಂಭದಲ್ಲಿ

ಸಂಪಾದಕರಾದ
**ಭಾರತಿ ಸಂಪಂಗಿರಾಮೈಯನವರ**
ಅಥವ
ಪ್ರಚಾರಕರಾದ
**ಟಿ.ಎನ್.ಶ್ರೀನಿವಾಸ ಶೆಟ್ಟರವರ ಕೈಬರಹವಾದರೂ**
ಅವರುಗಳ ನಾಮಧಾಮಗಳಡಗಿದ ಮುದ್ರೆಯಾದರೂ ಇಲ್ಲದ
ಪ್ರಶ್ನೋತ್ತರ ಲೇಖ್ಯಬೋಧಿನಿ ಎನ್ನುವ ಈ ಪುಸ್ತಕವು ಯಾರ ಬಳಿಯಲ್ಲಿ
ಇದ್ದರೂ ಅಂತವರು ರಾಜಶಾಸನವನ್ನು ಅನುಸರಿಸಿ ಕಳುವಿನ ಆಪಾದನೆಗೆ
ಗುರಿಯಾಗತಕ್ಕದ್ದು.

ಎಂಬ ಒಕ್ಕಣೆಯಿದೆ.

ಸುಮಾರು ಇಪ್ಪತ್ತೊಂದು ವರ್ಷಗಳಲ್ಲಿ ಒಂಬತ್ತು ಮುದ್ರಣಗಳಲ್ಲಿ ಈ ಕೃತಿಯ ಒಟ್ಟು ಹದಿನೈದು ಸಾವಿರ ಪ್ರತಿಗಳು ಹೊರಬಂದಿರುವುದರಿಂದ ಇದು ಆ ಕಾಲಕ್ಕೆ ತುಂಬಾ ಉಪಯುಕ್ತ ಹಾಗೂ ಜನಪ್ರಿಯವಾಗಿತ್ತು. ಆದರೆ ಕೃತಿಯ ಪೀಠಿಕೆಯಲ್ಲಿ "ಸಜ್ಜನ ವಿಧೇಯ, ಭಾರತಿ ಸಂಪಂಗಿರಾಮ" ಅವರು 'ಕುಗ್ರಾಮವಾಸಿಗಳಾದ ನಮ್ಮ ದೇಶಸೋದರರ ಉಪಯೋಗ ಮತ್ತು ಉಪಕಾರಕಾರಿಯಾಗಿರಲೆಂದು ಪ್ರಪ್ರಥಮದಲ್ಲಿ ಇದನ್ನು ಪ್ರಕಟಿಸಲಾಯಿತು. ಎಂಟಾವರ್ತಿಯ ಮುದ್ರಣದ ಹನ್ನೆರಡು ಸಾವಿರ ಪ್ರತಿಗಳು ಜನತೆಯ ಕೈಯಲ್ಲಿ ಸೇರಿ ಒಂಬತ್ತನೆಯ ಈ ಮುದ್ರಣಕ್ಕೆ ಅವಕಾಶ ದೊರೆತಿರುವುದರಿಂದ ತಕ್ಕಮಟ್ಟಿನ ಅಲ್ಪಮಾತ್ರ ಪ್ರಯೋಜನವಿರಬಹುದೆಂದು



ಊಹಿಸುವುದಕ್ಕೆ ಅವಕಾಶ ವುಂಟಾಯಿತು' ಎಂದು ವಿನಯದಿಂದ ಹೇಳಿದ್ದಾರೆ.

೫೭೬ ಪುಟಗಳಿರುವ ಈ ಕೃತಿಯಲ್ಲಿ ೧. ವಿದ್ಯಾರ್ಥಿಕಾಂಡ ೨. ಶಾಸನಕಾಂಡ ೩. ವ್ಯವಹಾರಕಾಂಡ ೪. ಜ್ಞಾನಕಾಂಡ ಎಂಬ ನಾಲ್ಕು ಅಧ್ಯಾಯಗಳಿವೆ. ವಿದ್ಯಾರ್ಥಿಕಾಂಡದಲ್ಲಿ ಲೇಖನ ಚಿಹ್ನಗಳು- ಕ್ಷೇಮಸಮಾಚಾರ ಕಾಗದಗಳು, ವಿವಿಧ ಮತಮಾನ್ಯಗಳಿಗೆ ಬರೆಯುವ ಕಾಗದಗಳು, ಅಂಗಡಿ ಮುಂಗಟ್ಟು-ದಸ್ತಾವೇಜು-ಕಂದಾಯ ಇಲಾಖೆ-ಬಾಡಿಗೆ ಕರಾರು ಇತ್ಯಾದಿ-ಮರಣಶಾಸನ (ವಿಲ್)-ದತ್ತುಸ್ವೀಕಾರ-ಕೌಟುಂಬಿಕ ಮುಂತಾದ ಪತ್ರಗಳ ವಿವರಗಳೂ ಉದಾಹರಣೆಗಳೊಂದಿಗಿದೆ. ಒಟ್ಟು ವಿಶೇಷವೆಂದರೆ ಪ್ರತಿಯೊಂದು ವಿಷಯವೂ ಪ್ರಶ್ನೋತ್ತರಗಳ ಮಾದರಿಯಲ್ಲಿವೆ. ಕೆಲವನ್ನು ಗಮನಿಸಿ.

ಅ). ಗಂಡನು ಹೆಂಡತಿಗೆ ಪತ್ರ ಬರೆದಾಗ ನಿರ್ದೇಶಿಸುವ ರೀತಿ:

**ಶ್ರಿಮತ್ಸಕಲಸದ್ಗುಣಗಣಾಲಂಕೃತೆಯಾದ ಉಭಯಕುಲಪವಿತ್ರೀಕೃತ ಸಮಸ್ತ ಪುರುಷಾರ್ಥಭಾಗಿನಿಯಾದ ಹರಿದ್ರಾಕುಂಕುಮಾನ್ವಿತೆ ಸೌಭಾಗ್ಯವತಿ ಮತ್ಪ್ರಿಯಪತ್ನಿ ಭಾಗೀರಥಿಗೆ.**

ಆ). ವಿಟನೊಬ್ಬ ನಾಯಕಿಯನ್ನುದ್ದೇಶಿಸಿ ನಿರ್ದೇಶಿಸುವುದು:

**ಶ್ರೀಮನ್ಮಹಾರಾಜಾಧಿರಾಜಾಸ್ಥಾನಾದಿ ಸಭಾಲಂಕಾರಭೂಷಿತೆಯಾದ ನಾಟ್ಯಾಭಿನಯ ಗಾನಪ್ರವೀಣಳಾದ ಸಕಲ ಸದ್ಗುಣಾಭರಣೆಯಾದ ದೇವಬ್ರಾಹ್ಮಣ ಪೂಜಾಧನ್ಯದೇಹಿಯಾದ ನಿತ್ಯಮಾಂಗಲ್ಯಶೋಭಿತೆಯಾದ ಮನ್ಮನೋನಾಯಕಿ ರಾಜರಾಜೇಶ್ವರಿಗೆ.**

ಇದು ಎರಡು ಉದಾಹರಣೆಗಳು ಮಾತ್ರ

ಮತ್ತೊಂದು ಪ್ರಶ್ನೋತ್ತರವನ್ನು ಗಮನಿಸಿ:

ಪ್ರಶ್ನೆ-ಅಚ್ಚು ಕಾರಖಾನೆಯವರಿಗೆ ಲಗ್ನಪತ್ರಿಕೆ ಮುಂತಾದುವು ಗಳಿಗೋಸ್ಕರ ಬರೆಯುವುದು ಹೇಗೆ?

ಉತ್ತರ- ಸ್ವಾಮಿ, ಇದರೊಂದಿಗಿರುವ ಲಗ್ನಪತ್ರಿಕೆಯ (ಪುಸ್ತಕವು) ಅಥವ ಪ್ರಕಟನೆಯು, ವೊಂದುಸಾವಿರ ಪ್ರತಿ ಅಚ್ಚಾಗಿ ವೊಂದು ವಾರದೊಳಗಾಗಿ ನನ್ನ ಕೈ ಸೇರಬೇಕಾಗಿದೆ.

ಲಗ್ನಪತ್ರಿಕೆಯ ಆಕಾರವು ನಾನು ಬರೆದಿರುವ ಕಾಗದದಂತಾದ್ದೇ ಆಗಿರಬೇಕು. ಕಾಗದ ಥಳಥಳಿಸುತ ದಪ್ಪನಾಗಿರಬೇಕು. ಭಂಗಾರ ಬಣ್ಣದ ಮಶಿಯಿರಬೇಕು. ಅಂಚು ಬಳ್ಳಿ ಹೊದರುಗಳಿಂದಲಂಕರಿಸಲ್ಪಡಬೇಕು. ಇನ್ನೂ ನಿಮಗೆ ಯುಕ್ತ ತೋರಿದಂತೆ ಅಂದವಾಗಿರುವ ಹಾಗೆ ಜಾಗ್ರತೆ ಕೆಲಸವು ಪೂರೈಸಿ ಆಗುವಷ್ಟು ಹಣಕ್ಕೆ ರೈಲ್ವೆ ಸ್ಟೇಷನಿಗೆ ಭಾಂಗಿಯನ್ನು ಕಳುಹಿಸಿ ಅದರ ರಶೀದಿಯನ್ನು ಅಂಚೆ ವಿ.ಪಿ. ಮೂಲಕವಾಗಿ ಕಳುಹಿಸಬೇಕಾಗಿ ಬೇಡುವ.

ತಮ್ಮ ವಿಧೇಯ

ತಾ॥ ೧೮-೮-೧೯೦೬ ಹೊಸಕೋಟೆ ರಂಗನಾಥ.

ಶಾಸನಕಾಂಡದಲ್ಲಿ ಸಿವಿಲ್ ಕೋರ್ಟಿನ ಸಂಬಂಧವಾದ ವಿಶೇಷ ವಿಷಯಗಳು, ಸಿವಿಲ್ ಕೋರ್ಟಿನ ಸಂಬಂಧವಾದ ಅರ್ಜಿ ಮುಂತಾದ ಮಾದರಿಗಳನ್ನು ನೀಡಲಾಗಿದೆ. ಈ ಕಾಂಡದಲ್ಲಿ ದಾವಾ ವಿಚಾರಣೆ, ದಿವಾಳಿ ಅರ್ಜಿ, ಡಿಕ್ರಿ ಅಮಲ್ಜಾರಿ, ಜೀವನಾಂಶ, ಕಂಟ್ರಾಕ್ಟು, ಪೋಸ್ಟಾಫಿಸು ರೂಲುಗಳು, ದೇವಸ್ಥಾನದ ಇನಾಮತಿ ವಿಚಾರಗಳು, ಛಾಪಾ ಪತ್ರ ವಿಚಾರಗಳು, ರೆವಿನ್ಯೂ ಇಲಾಖೆಯ ಮುಖ್ಯ ಸಂಗತಿಗಳು, ಮ್ಯಾಜಿಸ್ಟ್ರೇಟು ವಿಚಾರಗಳು,ದಾಂಪತ್ಯ ಕಲಹಸಂಬಂಧೀ ಕೋರ್ಟು ವ್ಯವಹಾರಗಳು, ರಿಜಿಸ್ಟ್ರೇಷನ್ನಿನ ವಿಷಯಗಳು- ಮುಂತಾದ ಆ ಕಾಲಕ್ಕೆ ಅತ್ಯಂತ ಅವಶ್ಯಕವಿದ್ದ ವಿಚಾರಗಳ ಬಗ್ಗೆ ಸಾಕಷ್ಟು ಸಮಗ್ರವಾಗಿ ವಿಚಾರಗಳನ್ನು ನಿರೂಪಿಸಿದ್ದಾರೆ.

ವ್ಯವಹಾರಕಾಂಡದಲ್ಲಿ ಮಾನವನ ನಿತ್ಯಕ್ರಮ, ಮಾನವಧರ್ಮ, ನೀತಿ, ಪತ್ನಿ, ಸಂತತಿ, ದ್ರವ್ಯಾರ್ಜನೆ, ಗೆಳೆಯರು, ಮಕ್ಕಳ ವಿದ್ಯಾಭ್ಯಾಸ- ಈ ಮುಂತಾದ ಕುಟುಂಬದಲ್ಲಿ ದಿನನಿತ್ಯ ವ್ಯವಹಾರಗಳನ್ನು ನಡೆಸಬೇಕಾದ ವಿಚಾರಗಳ ಪ್ರಸ್ತಾಪ ಬಂದಿದೆ.




ಕೊನೆಯ ಅಧ್ಯಾಯವಾದ ಜ್ಞಾನ ಕಾಂಡದಲ್ಲಿ-ಸಂಸಾರವೆಂದರೇನು?, ಸಂಸಾರ ಬೇಡವೇ?, ವಿರಕ್ತಿ, ಸುಖದುಃಖಗಳ ಅಸ್ಥಿರತೆ, ಪರೋಪಕಾರ, ಚಿತ್ತಸ್ಥೈರ್ಯ, ಶಾಂತತೆ-ಎಂಬ ಉಪಶೀರ್ಷಿಕೆಗಳಡಿಯಲ್ಲಿ

ಸಂಸಾರವನ್ನು ಕುರಿತು ಸಾಮಾನ್ಯರಿಗಿರ ಬೇಕಾದ ಪರಿಕಲ್ಪನೆಗಳನ್ನು ನಿರೂಪಿಸಿರುತ್ತಾರೆ. ವ್ಯಾವಹಾರಿಕ ಸಾಹಿತ್ಯದ ಚರಿತ್ರೆಯಲ್ಲಿ ಭಾರತಿ ಸಂಪಂಗಿ ರಾಮೈಯನವರ **ಪ್ರಶ್ನೋತ್ತರ** ಲೇಖ್ಯಬೋಧಿನಿ ಕೃತಿಗೆ ಮಹತ್ವದ ಸ್ಥಾನವಿದೆ.

# ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಯವರ "ತಾತ್ಪರ್ಯಟೀಕಾರೂಪಮಾದ ವಚನ ಭಾರತವು" (1887) ಒಂದು ಸಂಕೀರ್ಣ ವಿಶಿಷ್ಟ ಕೃತಿ

**(ಕುಮಾರವ್ಯಾಸ ಭಾರತದ ದಶಪರ್ವಗಳು, ಉಪ್ಪಾರಹಳ್ಳಿ ರಾಮಣ್ಣನವರ ಗೀತಾರ್ಥ ಪ್ರಕಾಶಿಕೆ, ಶ್ರೀನಿವಾಸ ಕವಿ ವಿರಚಿತ ಸ್ತ್ರೀ ಪರ್ವ ಮತ್ತು ತಿಮ್ಮಣ್ಣ ರಚಿಸಿದ ಕೊನೆಯ ಏಳು ಪರ್ವಗಳು-ಮೂಲದೊಂದಿಗೆ)**

ಮೂರು ಭಾಗಗಳಲ್ಲಿರುವ ಈ ಗ್ರಂಥವನ್ನು ಒಂದೇ ಪುಸ್ತಕ ಘಟಕವೆಂದು ಭಾವಿಸಬೇಕು. ಭಾಗ-1ರಲ್ಲಿ ಒಕ್ಕಣೆ ಇಂತಿದೆ : **ಶ್ರೀಮತ್ಕುಮಾರವ್ಯಾಸ ವಿರಚಿತಮಾದ ಕರ್ಣಾಟ ಭಾರತ ದಶಪರ್ವಗಳಲ್ಲಿ ಆದಿ ಪಂಚಕವು, ಬ್ರಹ್ಮಶ್ರೀ ಬೆಂಗಳೂರು ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳಿಂದ** ರಚಿಸಲ್ಪಟ್ಟ ತಾತ್ಪರ್ಯಟೀಕಾರೂಪಮಾದ ವಚನ ಭಾರತವು ಆಯಾ ಪರ್ವಸಂಧಿಗಳೊಡನಲ್ಲಲ್ಲಿ ಸೇರಿಸಲ್ಪಟ್ಟು, ಬೆಂಗಳೂರಿನಲ್ಲಿರುವ ಮೈಸೂರು ಬುಕ್ ಡಿಪೋ ಪ್ರೆಸ್ಸಿನಲ್ಲಿ ವೆಲನಾಡು ಬಿ.ಸುಬ್ಬಯ್ಯ ಅಂಡ್ ಸನ್ಸ್‌ರವರಿಂದ ಶುದ್ಧವಾಗಿ ಮುದ್ರಾಪಿಸಿ ಪ್ರಕಟಿಸಲ್ಪಟ್ಟಿದೆ. ಹಾಗೆಯೇ ಭಾಗ-2ರಲ್ಲಿ ಒಕ್ಕಣೆ ಇಂತಿದೆ : **ಕರ್ಣಾಟ ಭಾರತ ದಶಪರ್ವಗಳಲ್ಲಿ ಯುದ್ಧಪಂಚಕವು. ಶ್ರೀನಿವಾಸ ಕವಿ ರಚಿತ ಸ್ತ್ರೀಪರ್ವ ಸಹಿತವು.** . .. . .ಇತ್ಯಾದಿ. ಅಂತೆಯೇ ಭಾಗ-3ರಲ್ಲಿ ಸಕಲ ಶಾಸ್ತ್ರಸಾರಭೂತವಾದ ಶ್ರೀಮದ್ವೇದವ್ಯಾಸಪ್ರಣೀತ ಮಹಾಭಾರತಾಷ್ಟಾದಶಪರ್ವಗಳೊಳಗೆ ಸರಸರಚನಾಧುರೀಣ **ಶ್ರೀಮತ್ತಿಮ್ಮಣ್ಣ ಕವಿವರ ವಿರಚಿತಮಾದ ಕನ್ನದ ಭಾರತದಲ್ಲಿ ಉತ್ತರಾಷ್ಟ ಪರ್ವಗಳು.** . . .ಇತ್ಯಾದಿ ಎಂದಿದೆ. ಆದರೆ ವಾಸ್ತವವಾಗಿ ಭಾಗ-2ರಲ್ಲಿ ಇರುವ ಸ್ತ್ರೀಪರ್ವವು ಶಾಸ್ತ್ರಿಗಳೇ ಹೇಳಿರುವಂತೆ ಶ್ರೀನಿವಾಸ ಕವಿ ವಿರಚಿತ ಸ್ತ್ರೀಪರ್ವಾದಿಪರ್ವ. **ಹಾಗೆಯೇ** ಭಾಗ-3 ರ ಆರಂಭದಲ್ಲಿ ಬರುವ ಉಳಿಕೆ ಸ್ತ್ರೀಪರ್ವವು ಶ್ರೀನಿವಾಸ ಕವಿ ಬರೆದಿರುವುದೇ ಆಗಿದೆ. ಮತ್ತು ಭಾಗ-3 ರಲ್ಲಿ ಶಾಂತಿ ಪರ್ವದಿಂದ ಸ್ವರ್ಗಾರೋಹಣ ಪರ್ವದವರೆಗಿನ 7 ಪರ್ವಗಳು ಮಾತ್ರ ತಿಮ್ಮಣ್ಣ





ಕವಿ ರಚಿಸಿರುವುದು. ಪುಸ್ತಕದ ಮೇಲೆ ಮುದ್ರಿತವಾಗಿರುವಂತೆ 8 ಪರ್ವಗಳಲ್ಲ. ಇದರ ಜೊತೆಗೆ ಭಾಗ–2ರಲ್ಲಿ ಭೀಷ್ಮಪರ್ವದ 3 ಮತ್ತು 4ನೇ ಸಂಧಿಗಳ ನಡುವೆ 18 ಅಧ್ಯಾಯಗಳ 'ಗೀತಾರ್ಥ ಪ್ರಕಾಶಿಕೆ' ಎಂಬ ಭಗವದ್ಗೀತೆಯ ಕಾವ್ಯವಿದೆ. ಇದನ್ನು ಬರೆದವನು ಕುಮಾರವ್ಯಾಸ ಎಂದೇ ಈ ಕೃತಿಯಲ್ಲಿಯೂ ಹಾಗೂ 1928ರಲ್ಲಿ ಭಾರತಿ ಸಂಪಂಗಿರಾಮಯ್ಯನವರು ಪರಿಶೋಧಿಸಿ ಟಿ.ಎನ್. ಕೃಷ್ಣಯ್ಯ ಶೆಟ್ಟಿ ಅಂಡ್ ಸನ್ಸ್ ಇವರು ಪ್ರಕಟಿಸಿದ ಕನ್ನಡ ಮಹಾಭಾರತದಲ್ಲಿಯೂ ಭಾವಿಸಲಾಗಿದೆ.

ಆದರೆ ಇದಕ್ಕೆ ಸಂಬಂಧಿಸಿದಂತೆ ಮೇಷ್ಟ್ರು ಕಿ.ರಂ.ನಾಗರಾಜರ **"ಕುಮಾರವ್ಯಾಸ ಮತ್ತು ಕರ್ನಾಟಕ ಸಂಸ್ಕೃತಿ" ( ತೆರೆದ ಪಠ್ಯ, ಸಂ : ನಟರಾಜ ಹುಳಿಯಾರ್, 2012) ಎಂಬ ಲೇಖನದಲ್ಲಿನ ಅವರ ಮಾತುಗಳನ್ನು ಗಮನಿಸಿ– "ಎನ್. ಬಸವಾರಾಧ್ಯರು, 'ನಿನಗೆ ಬಹಳ ಒಳ್ಳೆ ಪ್ರಸಂಟೇಶನ್ ಕೊಡಬೇಕು ಅಂತ ಇದೀನಿ ಬಾರಯ್ಯ' ಅಂದರು. ಹೋದೆ. 'ನೋಡು ಇದು ಕುಮಾರವ್ಯಾಸ ಭಾರತದ ಡೆಮ್ಮಿ ಆಕಾರದಲ್ಲಿ ಬಂದಿರುವ ಮೊದಲನೇ ಎಡಿಶನ್. ನೀನು ಯೂಸ್ ಮಾಡೋದಾದ್ರೆ ಮಾಡು' ಅಂದರು. 'ಈಗಾಗಲೇ ಐದಾರು ಕುಮಾರವ್ಯಾಸ ಎಡಿಶನ್ ನನ್ನ ಹತ್ತಿರ ಇದೆ. ಇದೂ ಇರಲಿ ಕೊಡಿ ಸಾರ್' ಅಂತ ಇಸಕೊಂಡೆ. ಮನೆಗೆ ಬಂದು ಭಗವದ್ಗೀತೆಗೆ ಇಲ್ಲೇನಾಗಿದೆ ನೋಢೋಣ ಅಂತ ಪುಸ್ತಕ ತೆರೆದೆ. ಅಲ್ಲಿ ಇನ್ನೊಂದು ಹೊಸ ವಿಚಾರ ಸಿಕ್ಕಿಬಿಡ್ತು. ಅದರ ಮೇಲೆ ಉಪ್ಪಾರಹಳ್ಳಿ ರಾಮಣ್ಣನವರು ಮಾಡಿದ ಕನ್ನಡ ಭಗವದ್ಗೀತೆ ಅಂತ ಇತ್ತು. ಇದನ್ನ ಕೃಷ್ಣಯ್ಯಶೆಟ್ಟರ ಎಡಿಶನ್ನಿಗೆ ಹೋಲಿಸಿದಾಗ ಅಲ್ಲಿರುವ ಗೀತಾರ್ಥ ಪ್ರಕಾಶಿಕೆ ಉಪ್ಪಾರಹಳ್ಳಿ ರಾಮಣ್ಣನವರದು ಎನ್ನುವುದು ತಿಳಿಯಿತು.**

ಕಿ.ರಂ.ಅವರಿಗೆ ಎನ್. ಬಸವಾರಾಧ್ಯರು ನೀಡಿದ ಎಡಿಶನ್ ಯಾವುದೋ ತಿಳಿಯದು. ಆದರೆ ಈ ಎಲ್ಲ ಶೋಧಗಳಿಂದ ಪ್ರಸ್ತುತ ಕೃತಿಯ ಗೀತಾರ್ಥಪ್ರಕಾಶಿಕೆಯ ಕರ್ತೃ ಕೂಡ ಉಪ್ಪಾರಹಳ್ಳಿ ರಾಮಣ್ಣ ಎಂಬುದು ತಿಳಿಯುತ್ತದೆ. ಅಲ್ಲಿಗೆ ಈ ಮೂರೂ ಭಾಗಗಳ ಈ ಕೃತಿಯಲ್ಲಿ ಕುಮಾರವ್ಯಾಸ, ಉಪ್ಪಾರಹಳ್ಳಿ ರಾಮಣ್ಣ, ಶ್ರೀನಿವಾಸ ಕವಿ ಹಾಗೂ ತಿಮ್ಮಣ್ಣ ಕವಿ –ಹೀಗೆ ಒಟ್ಟು ನಾಲ್ಕು ಕವಿಗಳಿಂದ ಭಾಮಿನೀ ಷಟ್ಪದಿಯಲ್ಲಿ ಭಗವದ್ಗೀತೆಯನ್ನೊಳ ಗೊಂಡಂತೆ ಒಂದುಕಡೆ ಸಕಲ ವೇದಶಾಸ್ತ್ರಸಾರಭೂತಮಾದ ಶ್ರೀಮದ್ವೇದ ವ್ಯಾಸ ಪ್ರಣೀತ

ಮಹಾಭಾರತಾಷ್ಟಾದಶ ಪರ್ವಗಳೊಳಗೆ ರಚನೆಯಾಗಿರುವ ಅಷ್ಟಾದಶ ಪರ್ವಗಳನ್ನು ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು ಮೂಲ ಕಾವ್ಯದೊಂದಿಗೆ ತಾತ್ಪರ್ಯ ಟೀಕಾರೂಪವಾದ ವಚನದಲ್ಲಿ ನಿರೂಪಿಸಿರುತ್ತಾರೆ. ಆದ್ದರಿಂದಲೇ ಈ ಮೂರು ಸಂಪುಟಗಳನ್ನೊಳಗೊಂಡಿರುವ ಈ ಪುಸ್ತಕವನ್ನು "ಒಂದು ಸಂಕೀರ್ಣ ವಿಶಿಷ್ಟ ಕೃತಿ" ಎಂದು ನಿರ್ದೇಶಿಸಿರುವುದು.

ಮೂರೂ ಸಂಪುಟಗಳ ಒಟ್ಟು ಸ್ವರೂಪ ಇಂತಿದೆ :

**ಸಂಪುಟ-1 : ಆದಿಪಂಚಕ (803ಪುಟಗಳು) ಕುಮಾರವ್ಯಾಸ**

1) ಆದಿಪರ್ವ

2) ಸಭಾಪರ್ವ

3) ಅರಣ್ಯಪರ್ವ

4) ವಿರಾಟಪರ್ವ

5) ಉದ್ಯೋಗಪರ್ವ

**ಸಂಪುಟ-2 : ಯುದ್ಧಪಂಚಕ (738 ಪುಟಗಳು)**

6) ಭೀಷ್ಮಪರ್ವ-ಕುಮಾರವ್ಯಾಸ(3-4ನೆಯ ಸಂಧಿಯ ನಡುವೆ) ಗೀತಾರ್ಥ ಪ್ರಕಾಶಿಕೆ -ಉಪ್ಪಾರಹಳ್ಳಿ ರಾಮಣ್ಣ

7) ದ್ರೋಣ ಪರ್ವ }

8) ಕರ್ಣಪವ } ಕುಮಾರವ್ಯಾಸ

9) ಶಲ್ಯಪರ್ವ }

10)ಗದಾಪರ್ವ(ಗದಾಸೌಪ್ತಿಕ)}

9ನೆಯ ಸಂಧಿಯಿಂದ 13ನೆಯ ಸಂಧಿ ಸ್ತ್ರೀಪರ್ವಾದಿಪರ್ವಗಳ ಕಥೆ-- ಶ್ರೀನಿವಾಸ ಕವಿ

**ಸಂಪುಟ-3 : ಉತ್ತರಾಷ್ಟಪರ್ವ (777 ಪುಟಗಳು)**

11) ಸ್ತ್ರೀಪರ್ವ-ಶ್ರೀನಿವಾಸ ಕವಿ

12) ಶಾಂತಿಪರ್ವ }

13) ಅನುಶಾಸನಿಕಪರ್ವ }

14) ಅಶ್ವಮೇಧಪರ್ವ }

15) ಆಶ್ರಮವಾಸಪರ್ವ}ತಿಮ್ಮಣ್ಣ ಕವಿ

16) ಮೌಸಲಪರ್ವ }

17) ಮಹಾಪ್ರಸ್ಥಾನಿಕಪರ್ವ }

18) ಸ್ವರ್ಗಾರೋಹಣಪರ್ವ }

204 ಸಂಧಿಗಳ ಹರಹಿನಲ್ಲಿ 12960 ಭಾಮಿನೀ ಷಟ್ಪದಿಗಳನ್ನೊಳಗೊಂಡಿರುವ ಒಟ್ಟು 2318 ಪುಟಗಳ ಈ ಬೃಹತ್ ಸಂಪುಟಗಳು 1887ರಲ್ಲಿ ಪ್ರಕಟವಾಗಿದೆ.

ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು 1820ರಿಂದ 1900ರವರೆಗೆ ಜೀವಿಸಿದ್ದರು. ಮತ್ತೊಬ್ಬ ಕನ್ನಡದ ವಿದ್ವಾಂಸರಾದ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳ ಪುತ್ರರು. ತಂದೆ ಮತ್ತು ಮಗ ಇಬ್ಬರೂ ಬೇರೆ ಬೇರೆ ಕಾಲಾವಧಿಯಲ್ಲಿ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಮಹಾ ಮಹೋಪಾಧ್ಯಾಯರಾಗಿದ್ದರು. ಸುಬ್ರಹ್ಮಣ್ಯ ಶಾಸ್ತ್ರಿಗಳು ಸಾಹಿತ್ಯ, ತತ್ತ್ವಜ್ಞಾನ, ಧಾರ್ಮಿಕ, ಜ್ಯೋತಿಷ್ಯ ಮುಂತಾದುವುಗಳನ್ನು ಕುರಿತು ಸುಮಾರು 25 ಕೃತಿಗಳನ್ನು ರಚಿಸಿರುತ್ತಾರೆ. ಇವರು ಮಗ ಶಿವಶಂಕರ ಶಾಸ್ತ್ರಿಗಳೊಂದಿಗೆ 1883ರಲ್ಲಿ ಅತ್ಯಂತ ಪ್ರಗತಿಪರ ಧೋರಣೆಯನ್ನುಳ್ಳ " **ಸ್ತ್ರೀ ಪುನರ್ವಿವಾಹವನ್ನು ಕುರಿತು** " ಎಂಬ ಶಾಸ್ತ್ರಗಳ ಆಧಾರದಿಂದ ಸ್ತ್ರೀ ಪುನರ್ವಿವಾಹ ದೂಷ್ಯವಲ್ಲ ಎಂಬ ವಿಚಾರ ಸರಣಿಯನ್ನು ಪ್ರತಿಪಾದಿಸುವ ಗ್ರಂಥವನ್ನು ರಚಿಸಿರುವುದು ವಿಶೇಷ. ಪ್ರಸ್ತುತ ಕೃತಿಯಲ್ಲಿ ಸುಬ್ರಹ್ಮಣ್ಯ ಶಾಸ್ತ್ರಿಗಳು ಮೊದಲು ಯಾವುದೇ ಕವಿಯ ಒಂದು ಸಂಧಿಯನ್ನು ಪೂರ್ತಿ ಕೊಡುತ್ತಾರೆ. ನಂತರ ಇಡೀ ಸಂಧಿಯ ತಾತ್ಪರ್ಯವನ್ನು ಟೀಕೆಗಳೊಂದಿಗೆ ನೀಡಿರುತ್ತಾರೆ. ಸಾಮಾನ್ಯವಾಗಿ ಆ ಕಾಲದ ಕೃತಿಗಳಲ್ಲಿರುತ್ತಿದ್ದ ಅನ್ವಯಾನುಸಾರ ಬಿಡಿಸಿ ಪ್ರತಿ ಪದಾರ್ಥ, ವ್ಯಾಕರಣ ಅಲಂಕಾರಾದಿ ವಿಶೇಷವನ್ನು ನಿಡುತ್ತಿದ್ದ ಕ್ರಮವನ್ನು ವರ್ಜಿಸಿರುತ್ತಾರೆ. ಇದಕ್ಕೆ ಬಹುಶಃ ಗ್ರಂಥದ ಗಾತ್ರ ಹಿರಿದಾಗಬಹುದು ಎಂಬ ಕಾರಣವಿರಬಹುದು. ಜೊತೆಗೆ ಇಡೀ ಮಹಾಭಾರತ ಕನ್ನಡದಲ್ಲಿ ಒಂದುಕಡೆ ಒಂದು ಕೃತಿಯಲ್ಲಿ ಪದ್ಯ ಹಾಗೂ ತಾತ್ಪರ್ಯಗಳೊಂದಿಗೆ ಓದುಗರಿಗೆ ಸಿಕ್ಕಬೇಕು ಎಂಬುದು ಶಾಸ್ತ್ರಿಗಳ ಉದ್ದೇಶವಾಗಿತ್ತು. ಒಟ್ಟಿನಲ್ಲಿ ಇಂತಹ ಅಪೂರ್ವ ಬೃಹತ್ ಹಾಗೂ ವಿದ್ವತ್ ಗ್ರಂಥದ ಪ್ರಕಟಣೆ ಆ ಕಾಲಕ್ಕೆ ಒಂದು ವಿಸ್ಮಯವೆಂದೇ ಹೇಳಬೇಕು.



## ಟೀಕಾತಾತ್ಪರ್ಯಸಹಿತ ಜೈಮಿನಿಭಾರತವು(1932)

'ದೇವಪುರದ ಲಕ್ಷ್ಮೀಶ ಮಹಾಕವಿ ವಿರಚಿತ ಜೈಮಿನಿ ಭಾರತವು' 1932 ರಲ್ಲಿ ಬೆಂಗಳೂರು ಸಿಟಿಯ ಒಕ್ಕಲಿಗರ ಸಂಘದ ಪ್ರೆಸ್ಸಿನಲ್ಲಿ ಪ್ರಥಮವಾಗಿ ಮುದ್ರಿಸಲ್ಪಟ್ಟಿತು. ಇದರ ಅಂದಿನ ಬೆಲೆ 5-00 ರುಪಾಯಿಗಳು. ಪ್ರಥಮ ಮುದ್ರಣದಲ್ಲಿ 2500 ಪ್ರತಿಗಳನ್ನು ಅಚ್ಚು ಮಾಡಿಸಲಾಗಿದೆ. ಶೀರ್ಷಿಕೆ ಪುಟದಲ್ಲಿ "ಶ್ರೀ ರಾಮ । ॥ ಶ್ರೀಕೃಷ್ಣಪರಮಾತ್ಮನೇನಮಃ ॥ ಪದ್ಯಕಾವ್ಯಗಳಲ್ಲಿ ನವರಸಾಲಂಕಾರಭರಿತವಾಗಿರುವ ದೇವಪುರದ ಲಕ್ಷ್ಮೀಶ ಮಹಾಕವಿ ವಿರಚಿತ ಕರ್ಣಾಟಕ ಜೈಮಿನಿ ಭಾರತವು ॥ ವೇ ॥ ಮೂರ್ತಿ, ಪಂಡಿತ ಕೆ. ನಂಜುಂಡ ಶಾಸ್ತ್ರಿಗಳಿಂದಲು ಬ್ರ ॥ ಶ್ರೀ ॥ ಹೆಡ್ಮಾಸ್ಟರ್ ಹೆಚ್. ನಾಗಪ್ಪನವರಿಂದಲೂ ಪ್ರತಿಪದಾರ್ಥ, ತಾತ್ಪರ್ಯ, ವ್ಯಾಕರಣ ವಿಶೇಷಗಳು, ವಿಶೇಷಾರ್ಥಗಳು ಇವುಗಳೊಡನೆ ಬರೆಯಲ್ಪಟ್ಟು, ಇದರ ಸರ್ವಾಧಿಕಾರವನ್ನು ಬೆಂಗಳೂರು ಸಿಟಿಯ ಚಿಕ್ಕಪೇಟೆ ಶ್ರೀ ಸರಸ್ವತಿ ರತ್ನಾಕರ ಬುಕ್ಕು ಡಿಪೋ ಸರ್ವಾಧಿಕಾರಿ ಟಿ. ಎನ್. ಶ್ರೀನಿವಾಸ ಶೆಟ್ಟರವರಿಗೆ ಕೊಡಲಾಗಿದೆ." -ಹೀಗೆಂದು ಒಕ್ಕಣೆ ಇದೆ.



ಪದ್ಯಕಾವ್ಯಗಳಲ್ಲಿ ನವರಸಾಲಂಕಾರ ಭರಿತವಾಗಿರುವ

ಜೈಮಿನಿ ಭಾರತವು

ಬೆಂಗಳೂರು ಸಿಟಿ ಚಿಕ್ಕಪೇಟೆ

ಟಿ. ಎನ್. ಶ್ರೀನಿವಾಸ ಶೆಟ್ಟರವರಿಗೆ

1932

ಚತುಷ್ಕ ಡೆಮಿ ಆಕಾರದ ಈ ಕೃತಿಯಲ್ಲಿ ಒಟ್ಟು 12+940 ಪುಟಗಳಿವೆ. 5-9-32ನೇ ದಿನಾಂಕದಂದು ಲೇಖಕರಲ್ಲೊಬ್ಬರಾದ- ಇತಿ ಸಜ್ಜನ ವಿಧೇಯ, ಹೆಚ್. ನಾಗಪ್ಪನವರು, ಹೆಡ್ಮಾಸ್ಟರ್,

ಪ್ರೈಮರಿ ಬಾಯ್ಸ್ ಸ್ಕೂಲ್, ವಿಶ್ವೇಶ್ವರಪುರ, ಬೆಂಗಳೂರು ಸಿಟಿ–ಇವರು 8 ಪುಟಗಳ ಉಪಯುಕ್ತ ಉಪೋದ್ಘಾತ ಹಾಗೂ ಸೂಚನೆ, 'ಬಹು ಮುಖ್ಯವಾದ ಅಂಶ' ಮತ್ತು ಸಂಕೇತ ಪದಗಳ ವಿವರಣೆಗಳನ್ನು ನೀಡಿದ್ದಾರೆ. ಒಳ ರಕ್ಷಾಪುಟಗಳಲ್ಲಿ ಆ ಕಾಲಕ್ಕೆ ಶ್ರೀ ಸರಸ್ವತೀ ರತ್ನಾಕರ ಬುಕ್ಕು ಡಿಪೋ ಪ್ರಕಟಿಸಿದ್ದ ಭಾರತಿ ಸಂಪಂಗಿ ರಾಮ ವಿರಚಿತ ಶ್ರೀಮದ್ವಾಲ್ಮೀಕಿ ರಾಮಾಯಣ ಕಥಾ ಸಂಗ್ರಹಂ, ಸಚಿತ್ರ ಶುಕಸಪ್ತತಿ 70 ಕಥೆಗಳು, ಭಟ್ಟಿ ವಿಕ್ರಮಾದಿತ್ಯರಾಯನ ಕಥೆಗಳು, ಶ್ರೀಮದ್ಭಗವದ್ಗೀತಾ ಹಾಗೂ ಸಚಿತ್ರ ಮಹಾಭಕ್ತಿ ವಿಜಯವು–ಈ ಐದು ಪುಸ್ತಕಗಳನ್ನು ಕುರಿತ ಜಾಹಿರಾತುಗಳನ್ನು ನೀಡಲಾಗಿದೆ. ಜೊತೆಗೆ ಅವರು ಪ್ರಕಟಿಸಿದ್ದ 65 ಪುಸ್ತಕಗಳ ದರಪಟ್ಟಿಯನ್ನು ನೀಡ ಲಾಗಿದೆ. ಆ ಪುಸ್ತಕಗಳಲ್ಲಿ ಕೆಲವೆಂದರೆ ಭೂಮಿ ಅಳತೆ ಮೋಜಣಿ ಕಲಿಯುವ ಪುಸ್ತಕ, ಪ್ರಶ್ನೋತ್ತರ ಲೇಖ್ಯ ಬೋಧಿನಿ (ಹಳತು–ಹೊನ್ನು, ಸಾ.ಪು, ಪ್ರಜಾವಾಣಿ,24 ಅಕ್ಟೋಬರ್ 2010), ಹುಚ್ಚು ಮುಂಡೇರ ಕಥೆ, ಯಮಶಾಸನ ಸಚಿತ್ರ, ಗಣಿತ ದರ್ಪಣ, ಅರೇಬಿಯನ್ ನೈಟ್ಸ್–ಈ ಮುಂತಾದವು.




ಲಕ್ಷ್ಮೀಶನ ಜೈಮಿನಿ ಭಾರತವು ಕನ್ನಡದಲ್ಲಿ ಕುಮಾರವ್ಯಾಸ ಭಾರತದ ನಂತರದ ಅತ್ಯಂತ ಜನಪ್ರಿಯ ಕಾವ್ಯವಾಗಿದೆ. ಈ ನಿಟ್ಟಿನಲ್ಲಿ ಮತ್ತೊಂದು ಕಾವ್ಯವೆಂದರೆ ರಾಘವಾಂಕನ ಹರಿಶ್ಚಂದ್ರ ಕಾವ್ಯ.

ಟೀಕೆ ತಾತ್ಪರ್ಯಗಳೊಂದಿಗಿನ ಜೈಮಿನಿ ಭಾರತದ ಪ್ರಕಟಣೆಗೆ ಕನ್ನಡದಲ್ಲಿ ನಾಂದಿ ಹಾಡಿದವನು ಜರ್ಮನಿಯ ಹರ್ಮನ್ ಮೋಗ್ಲಿಂಗ್. 1848ರಲ್ಲಿ ಮೊದಲಬಾರಿಗೆ ಮಂಗಳೂರಿನಲ್ಲಿ ವ್ಯಾಖ್ಯಾನದೊಂದಿಗೆ ಮೋಗ್ಲಿಂಗ್ ಜೈಮಿನಿ ಭಾರತದ ಕೆಲವು ಸಂಧಿಗಳನ್ನು ಕಲ್ಲಚ್ಚು ಮುದ್ರಣದಲ್ಲಿ ಪ್ರಕಟಿಸಿದನು. ನಂತರ

1852 ರಲ್ಲಿ ಡೇನಿಯಲ್ ಸ್ಯಾಂಡರ್‌ಸನ್, 1873 ರಲ್ಲಿ ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು, 1875ರಲ್ಲಿ ಹೊಳಕಲ್ಲು ಶ್ರೀನಿವಾಸ ಪಂಡಿತರು (ಅರಮನೆ ಮುದ್ರಣ), 1875ರಲ್ಲಿ ಕಲ್ಲಚ್ಚಿನಲ್ಲಿಯೇ ವೆಂಕಟ ರಂಗೋ ಕಟ್ಟಿ, 1887ರಲ್ಲಿ ಮಿಸರ ಗೌರೀಶಂಕರ ರಾಮಪ್ರಸಾದ, 1888ರಲ್ಲಿ ಮೂರು ಭಾಗಗಳಲ್ಲಿ ದಕ್ಷಿಣಾಮೂರ್ತಿ ಶಾಸ್ತ್ರಿಗಳು, 1889ರಲ್ಲಿ ಎಂ.ಆರ್.ಅಣ್ಣಾಜಿ ರಾವ್, 1893ರಲ್ಲಿ ಕೃಷ್ಣರಾವ್ ಬಾಳಾಜಿ ರಾವ ಬೆಂಡಗೇರಿ, 1897ರಲ್ಲಿ ಬಿ.ಎಂ.ಸಿದ್ಧಲಿಂಗಶಾಸ್ತ್ರಿ–ಈ ಮುಂತಾದವರು ಜೈಮಿನಿ ಭಾರತವನ್ನು ಬಿಡಿಯಾಗಿ, ಇಡಿಯಾಗಿ ಟೀಕೆ, ಅರ್ಥಗಳೊಂದಿಗೆ ಪ್ರಕಟಿಸಿದ್ದಾರೆ. ಇತ್ತೀಚೆಗೆ 2010ರಲ್ಲಿ ಜೈಮಿನಿ ಭಾರತವನ್ನು ಕುರಿತು ಮೂಲ–ತಾತ್ಪರ್ಯಗಳನ್ನು ಗಂಜೀಫಾ ಕಲೆಯೊಂದಿಗೆ ಸಚಿತ್ರವಾಗಿ ಅ.ರಾ.ಸೇತೂರಾಮ ರಾವ್ ಅವರ ಬೃಹತ್ ಕೃತಿಯನ್ನು ಬೆಂಗಳೂರಿನ ಕಾಮಧೇನು ಪುಸ್ತಕ ಭವನದವರು ಪ್ರಕಟಿಸಿರುತ್ತಾರೆ. ಇವಿಷ್ಟೇ ಅಲ್ಲದೆ ಟೀಕೆ ತಾತ್ಪರ್ಯಗಳಿಲ್ಲದೆ ಕೇವಲ ಲಕ್ಷ್ಮೀಶನ ಷಟ್ಪದೀಪದ್ಯರೂಪದ ಜೈಮಿನೀ ಭಾರತವನ್ನೇ ಸಾಕಷ್ಟು ಜನ ವಿದ್ವಾಂಸರು ಸಂಪಾದಿಸಿದ್ದಾರೆ. ಇವೆಲ್ಲಾ ಲಕ್ಷ್ಮೀಶನ ಪ್ರಸ್ತುತತೆಗೂ ಜನಪ್ರಿಯತೆಗೂ ಆಯಾ ವಿದ್ವಾಂಸರ ವಿದ್ವತ್ತಿಗೂ ನಿದರ್ಶನ.

ಪ್ರಸ್ತುತ ಪುಸ್ತಕದಲ್ಲಿ 34 ಸಂಧಿಗಳಲ್ಲಿ 1906 ವಾರ್ಧಕ ಷಟ್ಪದಿಗಳಿಗೆ 940 ಪುಟಗಳಲ್ಲಿ ಪ್ರತಿಯೊಂದು ಪದ್ಯಕ್ಕೂ ಪ್ರತಿಪದಾರ್ಥ, ತಾತ್ಪರ್ಯ, ವ್ಯಾಕರಣ, ಅಲಂಕಾರಾದಿ ವಿಶೇಷಗಳು ಹಾಗೂ ವಿಶೇಷಾರ್ಥಗಳನ್ನು ನೀಡಲಾಗಿದೆ. ಕೃತಿಯ ಕೊನೆಯೊಳಗೆ ಒಂದು ಕಂದಪದ್ಯವಿದೆ :

**ಕನ್ನಡಜೈಮಿನಿಭಾರತ**
**ಕುನ್ನತತಾತ್ಪರ್ಯಟೀಕೆಸಕಲಾರ್ಥಗಳಿಂ**
**ಚೆನ್ನೆನೆಮೆರೆದುದುಗುಣಸಂ**
**ಪನ್ನತೆಯಿಂದಾಂಗೀರಸದಶುಭವತ್ಸರದೊಳು**

ಈ ಕೃತಿಯ ಮೊದಲ 18 ಸಂಧಿಗಳಿಗೆ ವೇದಮೂರ್ತಿ ಕಡಬದ ನಂಜುಂಡ ಶಾಸ್ತ್ರಿಗಳೂ ನಂತರದ 16 ಸಂಧಿಗಳಿಗೆ ಹೆಡ್ಮಾಸ್ಟರ್ ಹೆಚ್.ನಾಗಪ್ಪ ಅವರೂ ಟೀಕಾತಾತ್ಪರ್ಯಗಳನ್ನು ಬರೆದಿರುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಎಚ್.ನಾಗಪ್ಪನವರ ಉಪೋದ್ಘಾತದಲ್ಲಿ : "ಮ॥ರಾ॥ಶ್ರೀ॥ ಟಿ. ಯನ್. ಶ್ರೀನಿವಾಸಶೆಟ್ಟರವರು ....... ಕಡಬದ ನಂಜಂಡಶಾಸ್ತ್ರಿಗಳಿಂದಲೆ ಟೀಕಾ ತಾತ್ಪರ್ಯ

ವಿಶೇಷ ವಿಷಯಗಳೊಡನೆ ಅಲಂಕಾರ ವಿವರಣೆ ಸಹಿತವಾಗಿ ಟೀಕೆಯನ್ನು ಬರೆಸಿ ಮುದ್ರಿಸುತ್ತಾ ಬಂದರು. ಈ ಕಾರ್ಯವು ಅರ್ಧ ಭಾಗ ಕೈಗೂಡಿ ಹದಿನೆಂಟನೆಯ ಸಂಧಿಗೆ ಟೀಕೆ ಬರೆಯುತ್ತಿದ್ದಾಗ ದುರ್ದೈವಹತರಾಗಿ ನಂಜುಂಡಶಾಸ್ತ್ರಿಗಳು ಅಕಾಲ ಮರಣಕ್ಕೆ ಗುರಿಯಾಗಿ ಇದ್ದಕ್ಕಿದ್ದ ಹಾಗೆ ಸತ್ತು ಹೋದರು. ........ ಹೀಗಾದ ಮೇಲೆ ಕಾಕತಾಳನ್ಯಾಯದಂತೆ ಕನ್ನಡಿಗರ ಸೇವೆ ಸತ್ಕಾರಗಳನ್ನು ಪರೋಕ್ಷದಲ್ಲಿ ಮಾಡುತ್ತಿದ್ದ ನನ್ನನ್ನು.......... ಹುರಿದುಂಬಿಸಿ ಮುಂದಿನ ಟೀಕೆಯನ್ನು ಬರೆಯುವ ಭಾರವನ್ನು ನನ್ನ ಮೇಲೆ ಹೊರಿಸಿ....... ಭಗವದಾಜ್ಞೆಯಂತೆ ಅಪ್ರಾರ್ಥಿತವಾಗಿ ಬಂದ ಈ ಸುಸಂಧಿಯನ್ನು ಬಿಡಬಾರದೆಂದು ನಾನು ಕಾರ್ಯವನ್ನು ಪ್ರಾರಂಭಿಸಿದೆನು.........." ಹೀಗೆ ಹೇಳಿ ಕೆ. ನಂಜುಂಡಶಾಸ್ತ್ರಿಗಳು ಮತ್ತು ತಾವು ಇಬ್ಬರು ಇದಕ್ಕೆ ಟೀಕೆ ತಾತ್ಪರ್ಯಗಳನ್ನು ಏಕೆ ಬರೆದೆವೆಂಬ ಸಂದರ್ಭವನ್ನು ವಿವರಿಸಿದ್ದಾರೆ. ಪಂಪ ಭಾರತವನ್ನು ಶಾಸ್ತ್ರೀಯವಾಗಿ ಗ್ರಂಥಸಂಪಾದನೆ ಮಾಡಲು 1931 ರಷ್ಟು ಹಿಂದೆಯೇ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೆ ಪ್ರಸ್ತುತ ಕೃತಿಯ ವ್ಯಾಖ್ಯಾನಕಾರರಾದ ಕಡಬದ ನಂಜುಂಡಶಾಸ್ತ್ರಿಗಳು ನೆರವು ನೀಡಿದ್ದರು.

ಮೊದಲು ಪದ್ಯ, ಆ ಮೇಲೆ ಪ್ರತಿಪದಾರ್ಥ, ನಂತರ ಭಾವಾರ್ಥ, ಅನಂತರ ವಿಶೇಷಾಂಶ–ಈ ಕ್ರಮದಲ್ಲಿ ಪ್ರತಿಯೊಂದು ಪದ್ಯಕ್ಕೂ ಟೀಕೆ ತಾತ್ಪರ್ಯಗಳಿವೆ. ಇದರಿಂದ ಕಾವ್ಯದ ವಾಚ್ಯ ಹಾಗೂ ಗೂಡಾರ್ಥಗಳನ್ನು ಸವಿಯಲು ಸಹಾಯಕವಾಗುತ್ತದೆ. ಪ್ರತಿಪದಾರ್ಥ ನೀಡುವಾಗ ಪದ್ಯದಲ್ಲಿ ಇರುವ ಒಟ್ಟು ಅರ್ಥಘಟಕಗಳನ್ನು ಸಂಖ್ಯೆಯನ್ನು ಸೂಚಿಸುವ ಮೂಲಕ ನಿರ್ದೇಶಿಸಿರುತ್ತಾರೆ. ಇವೆಲ್ಲದರ ನಿದರ್ಶನಕ್ಕಾಗಿ ಕಾವ್ಯಾರಂಭದ ಪ್ರಸಿದ್ಧ ಪದ್ಯವನ್ನೇ ಗಮನಿಸಬಹುದು :

ಪದ್ಯ) ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ।
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ।
ತೀ ವಲಯದಮಲ ಸೌಭಾಗ್ಯ ರತ್ನಾಕರಂ ಪೆರ್ಚಿನಿಂ ಮೇರೆವರಿಯೆ ॥
ಆವಗಂ ಸರಸ ಕರುಣಾಮೃತದ ಕಲೆಗಳಿಂ।
ತೀವಿದೆಳೆನಗೆಯ ಬೆಳ್ದಿಂಗಳಂ ಪಸರಿಸುವ।
ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಾನಂದವೆಮಗೀಯಲಿ ॥1॥

(1 ಪ್ರತಿಪದಾರ್ಥ) (1) ಶ್ರೀವಧುವಿನ–ಲಕ್ಷ್ಮೀದೇವಿಯ, ಅಂಬಕ–

ಕಣ್ಣೆಂಬ, ಚಕೋರಕಂ-ಚಕೋರ ಪಕ್ಷಿಯು, ಪೊರೆಯೆ-ಆನಂದವನ್ನು ಪಡೆಯಲು, ಭಕ್ತಾವಳಿಯ-ಭಕ್ತ ಸಮೂಹದ, ಹೃತ್-ಮನಸ್ಸೆಂಬ, ಕುಮುದ-ಬಿಳಿಯ ನೆಯ್ದಿಲೆಯ, ಕೋರಕಂ-ಮೊಗ್ಗು, ಬಿರಿಯೆ-ಅರಳಲು (ವಿಕಾಸಗೊಳ್ಳಲು), (2) ಜಗತೀ ವಲಯದ-ಭೂಮಂಡಲದ, ಅಮಲ-ನಿರ್ಮಲವಾದ, (3), ಸೌಭಾಗ್ಯ-ಐಶ್ವರ್ಯವೆಂಬ, (4) ರತ್ನಾಕರಂ-ಸಮುದ್ರವು, ಪೆರ್ಚಿನಿಂ-ವೃದ್ಧಿಯಿಂದ, (5) ಮೇರೆವರಿಯೆ-ದಡವನ್ನು ಮೀರಿ ಉಕ್ಕಲು, ಆವಗಂ-ಯಾವಾಗಲೂ, ಸರಸ-ರಸವತ್ತಾದ, ಕರುಣಾ-ದಯೆಯೆಂಬ, (6)ಅಮೃತದ, (7) ಕಲೆಗಳಿಂ-(ಅಂಶ) ಕಳೆಗಳಿಂದ, ತೀವಿದ-ತುಂಬಿದ, ಎಳನಗೆಯ-ಕಿರುನಗೆಯೆಂಬ, ಬೆಳ್ದಿಂಗಳಂ, ಪಸರಿಸುವ-ಹರಡುವ, ದೇವಪುರ-ದೇವನೂರಿನಲ್ಲಿ, ನಿಲಯ-ನೆಲೆಗೊಂಡಿರುವ, ಲಕ್ಷ್ಮೀರಮಣನ-ಲಕ್ಷ್ಮೀಕಾಂತಸ್ವಾಮಿಯ, (8) ಆಸ್ಯಚಂದ್ರ-ಮುಖವೆಂಬ ಚಂದ್ರನು, ಎಮಗೆ-ನಮಗೆ, ಆನಂದವ-ಹರ್ಷವನ್ನು, ಈಯಲಿ-ಕೊಟ್ಟು (ರಕ್ಷಿಸಲಿ).

(2 **ಭಾವಾರ್ಥ**)-ಲಕ್ಷ್ಮೀದೇವಿಯ ನೇತ್ರಗಳೆಂಬ ಚಕೋರ ಪಕ್ಷಿಗಳಿಗೆ ಹರ್ಷವನ್ನುಂಟುಮಾಡುತ್ತಲೂ, ಭಗವದ್ಭಕ್ತರ ಮನಸ್ಸೆಂಬ ನೈದಿಲೆಗಳನ್ನು ಅರಳಿಸಿ ವಿಸ್ತಾರಪಡಿಸುತ್ತಲೂ, ವಿಸ್ತಾರವಾದ ಈ ಭೂಮಂಡಲದ ಐಶ್ವರ್ಯವೆಂಬ ಸಮುದ್ರವು ಉಬ್ಬಿ ಮೇರೆದಪ್ಪಿ ಉಕ್ಕುವಂತೆ ಮಾಡುತ್ತಲೂ, ಸರ್ವದಾ ರಸಯುಕ್ತವಾದ ಕರುಣೆಯೆಂಬ ಅಮೃತ ಕಳೆಗಳಿಂದ ತುಂಬಿಮುಗುಳ್ನಗೆಯೆಂಬ ಬೆಳ್ದಿಂಗಳನ್ನು ಎಲ್ಲೆಡೆಗಳಲ್ಲಿಯೂ ಹರಡಿ ಬೆಳಗುತ್ತಲೂ ಇರುವ, ದೇವನೂರಿನಲ್ಲಿ ನೆಲೆಸಿರುವ ಲಕ್ಷ್ಮೀರಮಣಸ್ವಾಮಿಯ ಮುಖವೆಂಬ ಚಂದ್ರನು ನಮಗೆ ಸಂತೋಷವನ್ನುಂಟು ಮಾಡಲಿ. ಚಂದ್ರನು ಹೇಗೆ ಅಮೃತಮಯವಾದ ತನ್ನ ಹದಿನಾರು ಕಳೆಗಳನ್ನೂ ಬೆಳ್ದಿಂಗಳ ರೂಪದಲ್ಲಿ ಲೋಕದಲ್ಲೆಲ್ಲಾ ಹರಡಿ ಚಕೋರ ಪಕ್ಷಿಗೆ ನೇತ್ರಾನಂದ ವನ್ನುಂಟುಮಾಡುತ್ತಲೂ, ಬಿಳಿಯ ನೆಯ್ದಿಲೆಗಳನ್ನು ಅರಳುವಂತೆ ಮಾಡು ತ್ತಲೂ, ಸಮುದ್ರವು ಸಂತೋಷದಿಂದ ಮೇರೆದಪ್ಪಿ ಉಕ್ಕುವಂತೆ ಮಾಡುತ್ತಲೂ ಇರುವನೋ ಹಾಗೆ, ಲಕ್ಷ್ಮೀದೇವಿಯ ಕಣ್ಣುಗಳಿಗೆ ಹರ್ಷವನ್ನುಂಟು ಮಾಡುತ್ತಲೂ, ಭಕ್ತರ ಮನಸ್ಸು ಆನಂದದಿಂದ ವಿಸ್ತಾರಗೊಳ್ಳುವಂತೆ ಮಾಡುತ್ತಲೂ, ಪ್ರಪಂಚದ ಐಶ್ವರ್ಯವು ಅಭಿವೃದ್ಧಿಹೊಂದುವಂತೆ ಮಾಡು ತ್ತಲೂ, ಮುಗುಳ್ನಗೆಯಿಂದ ಶೋಭಿಸುತ್ತಿರುವ ತನ್ನ ಕೃಪಾಕಟಾಕ್ಷವನ್ನು ಯಾವಾಗಲೂ ಪ್ರಸರಿಸುತ್ತಿರುವ ಶ್ರೀ ಲಕ್ಷ್ಮೀರಮಣ ಸ್ವಾಮಿಯ ದಿವ್ಯಮುಖವು,

ನಮ್ಮೆಲ್ಲರಿಗೂ ಹರ್ಷವನ್ನುಂಟು ಮಾಡಲಿ.

(3 ವಿಶೇಷ) (1) ಶ್ರೀ–ತ್ಸ, ಸಿರಿ–ದ್ಭ; ಶ್ರೀ–ಲಕ್ಷ್ಮಿ, ಕಾಂತಿ, ಐಶ್ವರ್ಯ, ವಿಷ: (ನಾನಾ), (2) ವಲಯ–ತ್ಸ, ಬಳೆ–ದ್ಭ; (3) ಸೌಭಾಗ್ಯ–ತ್ಸ, ಸೊಬಗು–ದ್ಭ; ಸೌಭಾಗ್ಯ–ಐಶ್ವರ್ಯ,ಚಂದ್ರದ ಪುಡಿ, ಒಂದು ವ್ರತ; (ನಾನಾ), (4) ರತ್ನ–ನವರತ್ನಗಳಿಗೆ, ಆಕರ–ನೆಲೆಯಾಗಿರುವುದು (ಸಮುದ್ರ), ರತ್ನ–ತ್ಸ, ರತುನ–ದ್ಭ; ಆಕರ–ತ್ಸ, ಆಗರ–ದ್ಭ; (5)ಮೇರೆಯಿಂ+ಪರಿಯೆ(ಕ್ರಿ.ಸ.), ಮೇರೆ+ಪರಿ (ಕ.ವ್ಯಂ.ಸಂ), ಪಕಾರಕ್ಕೆ ವಕಾರವು ಆದೇಶವಾಗಿ ಬಂದಿದೆ, (6) ಅಮೃತ–ತ್ಸ, ಅಮರ್ದು–ದ್ಭ; ಅಮೃತ–ಹಾಲು, ನೀರು, ಅಮೃತ (ನಾನಾ); (7) ಚಂದ್ರನಿಗೆ 16 ಅಮೃತದ ಕಳೆಗಳುಂಟು. (8) ಚಂದ್ರ–ತ್ಸ, ಚಂದಿರ–ದ್ಭ; ಈ ಪದ್ಯದಲ್ಲಿ ಲಕ್ಷ್ಮೀದೇವಿಯ ಕಣ್ಣೇ ಚಕೋರ .ಪಕ್ಷಿ, ಎಂಬುದು ಮೊದಲ್ಗೊಂಡು ಲಕ್ಷ್ಮೀರಮಣಸ್ವಾಮಿಯ ಮುಖವೇ ಚಂದ್ರನು, ಎಂಬುದರವರೆಗೂ ಆಯಾ ವಸ್ತುಗಳನ್ನು ಅಭೇದದಿಂದ ತೋರಿಸಿ ರೂಪಣ ಮಾಡಿರುವುದರಿಂದ ರೂಪಕಾಲಂಕಾರವು.

ಹೀಗೆ ಪ್ರತಿಯೊಂದು ಪದ್ಯದ ಅರ್ಥವನ್ನು ಸುಲಭವಾಗಿ ಗ್ರಹಿಸುವುದಕ್ಕೆ ಅನುಕೂಲವಾಗುವಂತಹ ವ್ಯುತ್ಪತ್ತಿಗಳನ್ನು ವ್ಯಾಖ್ಯಾನಕಾರರು ಸಮಗ್ರವಾಗಿ ನೀಡಿರುವುದರಿಂದ ಕಾವ್ಯಾನುಭವದ ಸ್ವೋಪಜ್ಞತೆಯ ಸೌಂದರ್ಯ ದರ್ಶನವನ್ನು ಹೃದ್ಗತ ಮಾಡಿಕೊಳ್ಳಲು ಈ ಕ್ರಮವು ಅನುವು ನೀಡುತ್ತದೆ. ಉನ್ನತ ಶಿಕ್ಷಣದ ಮಟ್ಟದಲ್ಲಿ ಪ್ರಾಚೀನ ಕಾವ್ಯಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನಾದರಣೆ ಔದಾಸೀನ್ಯಗಳು ತಲೆಯೆತ್ತಿರುವ ಇಂದಿನ ಸಾಹಿತ್ಯದ ಸಂದರ್ಭದಲ್ಲಿ ಈ ರೀತಿಯ ಕೃತಿಗಳ ಇಂತಹ ರೀತಿಯ ಅಧ್ಯಯನ ಕ್ರಮಗಳು ನಮ್ಮ ಯುವಜನತೆಯಲ್ಲಿ ಕಾವ್ಯಾಭಿರುಚಿಯನ್ನು ಮೂಡಿಸಲು ಸಹಾಯ ಮಾಡುತ್ತವೆ. ಈ ಮಾದರಿಯ ಪುಸ್ತಕಗಳ ಪುನರ್ಮುದ್ರಣಗಳಿಂದ ಕನ್ನಡ ವಾಚಕ ಜಗತ್ತಿಗೆ ಮಹದೋಪಕಾರವಾಗುತ್ತದೆ. ಹಳೆಯ ಕಾವ್ಯಗಳ ವ್ಯಾಖ್ಯಾನಗ್ರಂಥಗಳ ಇತಿಹಾಸದಲ್ಲಿ ಈ ಕೃತಿ ಸದಭಿರುಚಿ ನಿರ್ಮಾಣ ವುಂಟುಮಾಡುವ ಒಂದು ಕೃತಿಯಾಗಿದೆ.

## ಸ್ಟಾಲ್ಜ್ ಮತ್ತು ಪ್ಲೆಬ್‌ಸ್ಟ್ ಅವರ " ಸಹಸ್ರಾರ್ಧ ವೃಕ್ಷಾದಿಗಳ ವರ್ಣನೆ " (1874)

ಸಹಸ್ರಾರ್ಧ ವೃಕ್ಷಾದಿಗಳ ವರ್ಣನೆ –**FIVE HUNDRED INDIAN PLANTS** ( Their use in Medicine and the Arts in **CANARESE** ) – ಎಂಬ ಈ ಪುಸ್ತಕದ ಕರ್ತೃಗಳು ಸಿ. **ಸ್ಟಾಲ್ಜ್** ಮತ್ತು ಜಿ. **ಪ್ಲೆಬ್‌ಸ್ಟ್(C. STOLZ & G. PLEBST )** ಎನ್ನುವವರು. ಈ ಪುಸ್ತಕವು ಮಂಗಳೂರಿನ ಬಾಸೆಲ್ ಮಿಷನ್ ಬುಕ್ ಮತ್ತು ಟ್ರ್ಯಾಕ್ಟ್ ಡೆಪಾಸಿಟರಿಯಿಂದ 1908 ರಲ್ಲಿ 2ನೆಯ ಮುದ್ರಣವಾಗಿ ಪ್ರಕಟಗೊಂಡಿದೆ. ಇದೇ ಪ್ರೆಸ್ಸಿನಿಂದ ಇದರ ಮೊದಲ ಮುದ್ರಣವು 1881ರಲ್ಲಿ ಆಗಿತ್ತು. ಅದಕ್ಕೂ ಮುನ್ನ ಮಂಗಳೂರಿನ ಕೆನರೀಸ್ ಮಿಷನ್ ಪ್ರೆಸ್ಸಿನಿಂದ 1874ರಲ್ಲಿ ಮೊದಲು ಪ್ರಕಟಿಸಲ್ಪಟ್ಟು ಅದೇ ಪ್ರೆಸ್ಸಿನಿಂದ ಮತ್ತೆ 1922ರಲ್ಲಿ ಮೂರನೆಯ ಆವೃತ್ತಿಯಾಗಿ ಹೊರ ಬಂದಿದೆ. ಪ್ರಸ್ತುತ ಈ ಪುಸ್ತಕದ ಪ್ರತಿಯು 1908ರಲ್ಲಿ ಬಾಸೆಲ್ ಮಿಷನ್ ಪ್ರೆಸ್ಸಿನಿಂದ ಅಚ್ಚಾಗಿರುವ ಪ್ರತಿಯಾಗಿದೆ. ಹೀಗೆ ಈ ಕೃತಿಯು 1922ರ ಹೊತ್ತಿಗೆ ಐದು ಬಾರಿ ಪುನರ್ಮುದ್ರಣಗಳಾಗಿರುವುದನ್ನು ನೋಡಿದರೆ ಇದರ ಜನಪ್ರಿಯತೆ ಹಾಗೂ ಉಪಯುಕ್ತತೆಗಳು ಅರಿವಿಗೆ ಬರುತ್ತದೆ.

ಸಸ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿನ ಮುದ್ರಿತ ಗ್ರಂಥಗಳಲ್ಲಿ ಮೊಟ್ಟಮೊದಲನೆಯ ಕೃತಿ ಇದು. ಡೆಮಿ ಅಷ್ಟಾಕಾರದ vii + 273 ಪುಟಗಳ ಈ ಕೃತಿಯಲ್ಲಿ 523 ವೃಕ್ಷ ಹಾಗೂ ಸಸ್ಯಗಳ ವಿವರಣೆ ಇದೆ. ಈ ಪುಸ್ತಕಕ್ಕೆ 1919ರಲ್ಲಿ ಬಾಸೆಲ್ ಮಿಷನ್ ಪ್ರೆಸ್ಸಿನಿಂದ ಪ್ರಕಟಗೊಂಡ **ಹಿಂದೂ ದೇಶದ ಸಸ್ಯಶಾಸ್ತ್ರವು (ಪೂರ್ವಾರ್ಧ) –ಸಸ್ಯಗಳ ಮತ್ತು ಸಸ್ಯ ಕುಟುಂಬಗಳ ವಿವರಣೆ–ಸಚಿತ್ರ** ಎಂಬ ಪುಸ್ತಕದ ಕರ್ತೃ ಮತ್ತು ಆ ಕಾಲಘಟ್ಟದ ಪ್ರಸಿದ್ಧ ಸಸ್ಯಶಾಸ್ತ್ರಜ್ಞ ಐ. **ಫ್ಲೀಡೆರರ್** ಎಂಬಾತನು ಇಂಗ್ಲಿಷ್ ಭಾಷೆಯಲ್ಲಿ ಪ್ರಸ್ತಾವನೆಯನ್ನು ಬರೆದಿರುತ್ತಾನೆ. As there was and still is a demand for the book, the publishers


FIVE HUNDRED
INDIAN PLANTS
THEIR USE IN MEDICINE AND THE ARTS
IN CANARESE
SECOND EDITION
ಸಹಸ್ರಾರ್ಧ
ವೃಕ್ಷಾದಿಗಳ ವರ್ಣನೆ
MANGALORE
BASEL MISSION BOOK AND TRACT DEPOSITORY
1908



have found it expedient to issue a second edition which they hope will also be favourably received by the public-ಎಂಬ ಅವನ ಪ್ರಸ್ತಾವನೆಯಲ್ಲಿನ ಮಾತುಗಳು ಕೂಡ ಈ ಕೃತಿಯ ಜನಪ್ರಿಯತೆಗೆ ನಿದರ್ಶನವಾಗಿದೆ. ಕೃತಿಯ ಆರಂಭಕ್ಕೂ ಮೊದಲು ನಾಲ್ಕು ಪುಟಗಳಲ್ಲಿ ಕನ್ನಡ, ತಮಿಳು, ತೆಲುಗು, ಮಲಯಾಳಂ, ಹಿಂದೂಸ್ತಾನಿ, ಕೊಂಕಣಿ ಹಾಗೂ ತುಳು ಭಾಷೆಗಳಲ್ಲಿ ಹಲವಾರು ಸಸ್ಯಗಳಿಗೆ ಇರುವ ನಾಮನಿರ್ದೇಶನಗಳಿಗೆ ಸಂವಾದಿಯಾದ ಸಸ್ಯಶಾಸ್ತ್ರೀಯ ಹೆಸರು (Botanical Names) ಗಳ ಒಂದು ಅಚ್ಚುಕಟ್ಟಾದ ಕೋಷ್ಟಕವನ್ನು ನೀಡಲಾಗಿದೆ. ಇದು ಶಾಸ್ತ್ರೀಯ ಅಧ್ಯಯನಕಾರರಿಗೆ ತುಂಬಾ ಉಪಯುಕ್ತವಾಗಿದೆ. ಇಲ್ಲಿ ಕೃತಿಕಾರರು ಅನುಸರಿಸಿರುವ ವಿಧಾನ ಇಂತಿದೆ– ಮೊದಲಿಗೆ ವೃಕ್ಷ ಅಥವಾ ಸಸ್ಯಗಳ ನಾಮಸೂಚನೆ ಹಾಗೂ ಅದಕ್ಕೆ ಸ್ಥಳೀಯ ವಿಭಿನ್ನ ಹೆಸರುಗಳು, ಇದು ಕ್ರಮಸಂಖ್ಯೆಯೊಂದಿಗೆ ಶಿರ್ಷಿಕೆಯಲ್ಲಿ ಸೂಚಿಸಲ್ಪಟ್ಟಿರುತ್ತದೆ. ನಂತರ ಆ ಸಸ್ಯ ಅಥವಾ ವೃಕ್ಷಗಳಿಗೆ ಕ್ರಮವಾಗಿ ತಮಿಳು, ತೆಲುಗು, ತುಳು, ಕೊಂಕಣಿ, ಮಲಯಾಳಂ, ಸಂಸ್ಕೃತ, ಹಿಂದೂಸ್ಥಾನಿ, ಅರಬ ಈ ಭಾಷೆಗಳಲ್ಲಿ ಇರುವ ಸ್ಥಳೀಯ ಹೆಸರುಗಳನ್ನು ಕನ್ನಡ ಮತ್ತು ಇಂಗ್ಲಿಷು ಭಾಷೆಗಳಲ್ಲಿ ಮತ್ತು ಲಿಪಿಯಲ್ಲಿ ನೀಡಿರುತ್ತಾರೆ. ನಂತರ ಅದು ಹುಟ್ಟುವ ಪ್ರದೇಶ, ಹೂ ಬಿಡುವ ಕಾಲಮಾನ, ಆ ನಂತರ ಆ ವೃಕ್ಷ ಅಥವಾ ಸಸ್ಯಗಳ ಸಾಮಾನ್ಯ ಉಪಯೋಗ, ವೈದ್ಯಕೀಯ ಉಪಯೋಗ ಹಾಗು ಅದಕ್ಕೆ ಸಂವಾದಿಯಾದ ಸಸ್ಯಶಾಸ್ತ್ರೀಯ ಹೆಸರುಗಳನ್ನು ನೀಡಿರುತ್ತಾರೆ. ನಿದರ್ಶನಕ್ಕಾಗಿ ಒಂದು ಸಸ್ಯ/ವೃಕ್ಷವನ್ನು ಕ್ರಮಸಂಖ್ಯೆ 351. ಬಿದಿರು ಕುರಿತು ನೋಡಬಹುದು :

**351. ಬಿದಿರು, ಬಿದುರು, ಗಳ (Common Prickly Bamboo)**

**ತ** (ತಮಿಳು) ಮೂಂಗಲ್, ಅಂಬಲ್ **ತೆ** (ತೆಲುಗು) ವೆದುರು **ತು** (ತುಳು) ಬೆದ್ರ್ **ಮ** (ಮಲಯಾಳಂ) ಮೂಂಗಿಲ್ **ಕೊಂ** (ಕೊಂಕಣಿ) ವಾಸೊ **ಹಿಂ** ( ಹಿಂದೂಸ್ಥಾನಿ) ಭಾಸಾ **ಸಂ**(**ಸಂಸ್ಕೃತ**) ತೇಜನ, ನವಾಗ್ರ ಗಂಧಾ, ಬಹುಪಲ್ಲವ

**ಹುಟ್ಟು** : ಘಟ್ಟಗಳು **ಪುಷ್ಪ** : ಪುಷ್ಪ ಬಂದರೆ ಸಾಯುತ್ತದೆ.

**ಉಪಯೋಗ : ಔಷಧೀಯ**– ಚೆಕ್ಕೆ ನಂಜಿಗೂ, ಎಲೆಗಳು ಮಕ್ಕಳ ಕ್ರಿಮಿರೋಗಕ್ಕೂ ಸ್ತ್ರೀಯರ ಮುಟ್ಟುದೋಷಕ್ಕೂ ಆಗುತ್ತದೆ. ಹೆಣ್ಣು ಬಿದಿರಿನಿಂದ ಮಾಡುವ ತವಕ್ಷೀರವೆಂಬ ಹುಡಿ ಪಕ್ಷವಾತದೋಷ, ಉದರವಾಯು, ವಿಷ, ಇವುಗಳಲ್ಲಿ ಉಪಯೋಗ. **ಸಾಧಾರಣ**–ಬಿದಿರು ವಿಧವಿಧವಾದ ಪ್ರಯೋಗಕ್ಕೆ ಬರುತ್ತದೆ. ಬಿದಿರಿನ ತಿರುಳು (**ಕ**–ಅಣಿಲೆ, **ಕೊಂ**–ಕೀರ್ಲು, **ತು**–ಕಣಿಲೆ) ಎಳತಾದರೆ, ಪಲ್ಯ ಮತ್ತು ಉಪ್ಪಿನಕಾಯಿ ಮಾಡುತ್ತಾರೆ. ಅಜೀರ್ಣ ರೋಗಿಗಳಿಗೆ ಅದರ ಪಲ್ಯ ಒಳ್ಳೇದಾಗಿದೆ. ಬೀಜ ಅಟ್ಟು ಕಡಬು ಮಾಡಿ ಇಲ್ಲವೇ ಬೇಯಿಸಿ ಕೆಲವರು ತಿನ್ನುವರು.

**Bambusa Arundinaces,** [ ಇದು ಬಿದಿರಿನ ಸಸ್ಯಶಾಸ್ತ್ರೀಯ ನಾಮ ]

**Tam.** Mungal, Ambal. **Tel.** Veduru. **Can**. Bidiru, Biduru, Gala. **Tu**. Bedr. **Mal**. Mungil. **Kon.** Vaso. **San**. Tejana, Navagragandha, Bahupallava.

ಇದು ಬಿದಿರನ್ನು ಕುರಿತು ಗ್ರಂಥಕರ್ತರು ನೀಡಿರುವ ವರ್ಣನೆ. ಕೆಲವೆಡೆ ಗ್ರಂಥಕರ್ತರು ಅಧಿಕ ಮಾಹಿತಿಗಳನ್ನು ಅಡಿಟಿಪ್ಪಣಿಗಳಲ್ಲಿ ನೀಡಿರುತ್ತಾರೆ. ಗ್ರಂಥದ ಕೊನೆಯಲ್ಲಿ ಹಲವಾರು ರೀತಿಯ ಉಪಯುಕ್ತ ಕೋಷ್ಟಕಗಳಿವೆ. 1. ಪಿಷ್ಟವುಳ್ಳ ವನಸ್ಪತಿಗಳು ( Farinaceous Plants) 2. ಹಣ್ಣುಹಂಪಲುಗಳು (Fruits) 3. ಬೇಯಿಸಿ ಉಪಯೋಗಿಸುವ ಪದಾರ್ಥಗಳು (Table Vegetables) 4. ಸಂಬಾರ ಜಿನಸು, ಉಪ್ಪಿನಕಾಯಿ, ಹುಳಿ Spices, Pickles etc ) 5. ಪಾನಕಗಳು, ಸಾರುಗಳು 6. ದನಗಳ ಆಹಾರ ( Fodder Crops ) 7. ಖಂಡಿ ಮರಗಳು (Timber trees) 8. ನಾರುಗಳು (Fibres) 9. ತೈಲ ಜೀನಸುಗಳು (Oil Seeds) 10. ಮೇಣಗಳು (Gum and Resins) 11. ಪರಿಮಳದ ವೃಕ್ಷಾದಿಗಳು (Volatile Oils) 12. ವರ್ಣಕ್ಕೆ ಉಪಯೋಗಿಸುವ ವೃಕ್ಷಾದಿಗಳು (Dyes) 13. ಚರ್ಮ ಹದ ಮಾಡಲಿಕ್ಕೆ ಉಪಯೋಗಿಸುವ ಗಿಡಗಳು (Tanning) 14. ಅಲಂಕಾರದ ವೃಕ್ಷಾದಿಗಳು (Ornamental Plants) 15. ರೋಗಗಳಿಗೆ ಔಷಧಗಳು, ಪಥ್ಯವಸ್ತುಗಳು ( Dietetics) –ಈ ರೀತಿಯಲ್ಲಿ ವರ್ಗೀಕರಣ ರೂಪದಲ್ಲಿ ಅಕಾರಾದಿಯಾಗಿ ಶಬ್ದಸೂಚಿಯನ್ನು(**Index)** ಅಚ್ಚುಕಟ್ಟಾಗಿ ನೀಡಿರುವುದು ಪುಸ್ತಕದ ಬಳಕೆದಾರರಿಗೆ ಬಹು ಉಪಯುಕ್ತವಾಗಿದೆ. ಇತ್ತೀಚೆಗೆ ಬರುತ್ತಿರುವ ಶಾಸ್ತ್ರೀಯ ಹಾಗೂ ಸಂಶೋಧನ ಗ್ರಂಥಗಳಲ್ಲಿ ವಿದ್ವಾಂಸರು ಶಬ್ದಸೂಚಿಗಳನ್ನು ನೀಡದೆ

ಎಷ್ಟೋ ಪುಸ್ತಕಗಳನ್ನು ಪರಾಮರ್ಶನೆ ಮಾಡುವುದು ಕಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಲೇಖಕರು ಒಂದು ಉಪಯುಕ್ತ ಶಬ್ದಸೂಚಿ ಹೇಗಿರಬೇಕು ಎಂಬುದಕ್ಕೆ ಈ ಕೃತಿಯ ಶಬ್ದಸೂಚಿಯ ಮಾದರಿಯನ್ನು ಧೈರ್ಯವಾಗಿ ಅನುಸರಿಸಬಹುದೆಂದು ತೋರುತ್ತದೆ. ಆ ಶಬ್ದಸೂಚಿಯಲ್ಲೂ ಕೂಡ ಒಳವಿಭಾಗಗಳನ್ನು ಮಾಡಿ ಕೃತಿಕಾರರು ಓದುಗರಿಗೆ ಇನ್ನಷ್ಟು ಉಪಕಾರ ಮಾಡಿರುತ್ತಾರೆ. ಉದಾಹರಣೆಗೆ 11ನೆಯ ಪರಿಮಳಾದಿ ವೃಕ್ಷಾದಿಗಳಲ್ಲಿ 1. **ಹೂವುಗಳು** 2. **ಗಡ್ಡೆ ಬೇರುಗಳು** 3. **ಚೆಕ್ಕೆ ಮರಗಳು** 4. **ಎಲೆ ಕಾಯಿಗಳು** ಎಂಬ ಒಳವಿಭಾಗ ಮಾಡಿಕೊಂಡು ಆದಕ್ಕೆ ಸಂಬಂಧಿಸಿದ ವೃಕ್ಷ ಹಾಗು ಸಸ್ಯಾದಿಗಳು ಪುಸ್ತಕದ ಯಾವ ಪುಟಗಳಲ್ಲಿ ಬರುತ್ತದೆಂಬ ಶಬ್ದಸೂಚಿ ತಯಾರಿಸಿಕೊಟ್ಟಿರುವುದು ಕೃತಿಕಾರರ ಪರಿಶ್ರಮಕ್ಕೆ ನಿದರ್ಶನ. ಪತ್ಯಾಂತ್ಯದಲ್ಲಿ ಇಂಗ್ಲಿಷ್ ಲಿಪಿಯಲ್ಲಿ ಅಕಾರಾದಿಯಲ್ಲಿ ಕನ್ನಡ, ತಮಿಳು, ತೆಲುಗು, ಮಲಯಾಳಂ, ಸಂಸ್ಕೃತ, ತುಳು, ಕೊಂಕಣಿ, ಹಿಂದೂಸ್ಥಾನಿ, ಆರಬ ಭಾಷೆಯ ವೃಕ್ಷ, ಸಸ್ಯಾದಿಗಳ ನಾಮನಿರ್ದೇಶನದ ಶಬ್ದಸೂಚಿಯನ್ನೂ ನೀಡಿರುತ್ತಾರೆ. ಕನ್ನಡ ಭಾಷೆಯಲ್ಲೇ ಕನ್ನಡ ಲಿಪಿಯಲ್ಲಿ ಸಸ್ಯವೃಕ್ಷಾದಿಗಳ ಹೆಸರನ್ನು ಅಕಾರಾದಿಯಾಗಿ ಪ್ರತ್ಯೇಕವಾಗಿ ನೀಡಿರುವುದು ಗ್ರಂಥಕರ್ತೃಗಳಾದ ಸ್ಟಾಲ್ಷ್ ಮತ್ತು ಫ್ಲೆಬ್ಸ್ಟ್ ಅವರ ಕನ್ನಡ ಪ್ರೀತಿಗೆ ಸಾಕ್ಷಿಯಾಗಿದೆ. ಬಹುಶಃ ಈ ಕೃತಿಯ ಕೊರತೆ ಎಂದರೆ ಯಾವುದೇ ವೃಕ್ಷ, ಪೊದೆ, ಗಿಡ, ಬಳ್ಳಿ, ಗುಲ್ಮ, ಹುವು, ಹಣ್ಣು, ಬೀಜ, ಕಾಯಿ-ಇವಾವುದರ ಒಂದಾದರೂ ಚಿತ್ರಗಳನ್ನು ನಿದರ್ಶನಗಳಿಗೆ ಕೊಡದಿರುವುದು ಎಂದು ಹೇಳಬಹುದು.

22 ನೆಯ ಜುಲೈ 1893ರಲ್ಲಿ ಹೊರತಂದ ತನ್ನ ಕನ್ನಡ- ಇಂಗ್ಲಿಷ್ ನಿಘಂಟಿನಲ್ಲಿ ರೆ. ಎಫ್. ಕಿಟ್ಟೆಲ್, ಈ ಸ್ಟಾಲ್ಷ್ ಮತ್ತು ಫ್ಲೆಬ್ಸ್ಟ್ ಅವರ ಈ ಕೃತಿಯಿಂದ ಅನೇಕ ವೃಕ್ಷ ಹಾಗೂ ಸಸ್ಯಾದಿಗಳನ್ನು ಸೇರ್ಪಡೆ ಶಬ್ದಗಳಾಗಿ ಸೇರಿಸಿ ಈ ಇಬ್ಬರು ಮಹನೀಯರುಗಳನ್ನು ಸ್ಮರಿಸಿಕೊಂಡಿರುವುದು ಈ ಪುಸ್ತಕದ ಬಹೂಪಯೋಗಿತ್ವಕ್ಕೆ ನಿದರ್ಶನವಾಗಿದೆ. ಸಸ್ಯಶಾಸ್ತ್ರಕ್ಕೆ ಸಂಬಂಧಿಸಿದ ಕನ್ನಡದ ಮೊತ್ತಮೊದಲ ಮುದ್ರಿತ ಪುಸ್ತಕವಾದ ಈ ಕೃತಿಯು ಗುಣಾತ್ಮಕವಾಗಿಯೂ ಇದ್ದು ಐತಿಹಾಸಿಕ ಹಾಗೂ ಉಪಯುಕ್ತತೆಯ ಮಹತ್ವವನ್ನು ಹೊಂದಿರುವ ಒಂದು ಅಪೂರ್ವ ವಿರಳ ಕೃತಿಯಾಗಿದೆ.

# ಗಣಿತಾರ್ಣವ-ಒಂದು ಅಪೂರ್ವ ಹಳೆಯ ಪುಸ್ತಕ (1878)

"ಕರ್ನಾಟಕ ದೇಶೀಯರಿಗೆ ಅತ್ಯಂತೋಪಯುಕ್ತವಾದಂಥಾ **ಗಣಿತಾರ್ಣವವೆಂಬ ಈ ಗಣಿತ ಶಾಸ್ತ್ರ ಪುಸ್ತಕವು** ಮೈಸೂರು ಶೀಮೆಯ ವಿದ್ಯಾಭ್ಯಾಸದ ಡೈರೆಕ್ಟರ್ ಹಜರತ್ ಬಿ.ಎಲ್.ರೈಸ್ ಸಾಹೇಬರವರಿಂದ ಅತ್ಯಂತ ಪ್ರೌಢ ಗಣಿತವೆಂಬ ಬಿರುದನ್ನು ಹೊಂದಿದಂಥದ್ದಾಗಿಯೂ, ಈಗ ಮಳವಳ್ಳಿಯಲ್ಲಿರುವ ತಾಲೂಕು ಗೌರ್ನಮೆಂಟ್ ಸ್ಕೂಲ್ , ಹೆಡ್ ಮಾಸ್ಟರ್, ಲಕ್ಷ್ಮೀಪತಯ್ಯನವರಿಂದ ವಿರಚಿಸಲ್ಪಟ್ಟದ್ದಾಗಿಯೂ ಇರುತ್ತದೆ."–ಇದು ೧೮೭೮ ರಲ್ಲಿ ಬೆಂಗಳೂರಿನ ಲಷ್ಕರಿನಲ್ಲಿರುವ ಕ್ಯಾಕ್ಸಟನ್ ಪ್ರೆಸ್ಸಿನಲ್ಲಿ ಛಾಪಿಸಲ್ಪಟ್ಟ ಗಣಿತಾರ್ಣವ ಪುಸ್ತಕದ ಮೊದಲ ಪುಟದ ಒಕ್ಕಣೆ.

೩೧ನೇ ಮಾರ್ಚ್ ೧೮೭೮ ರಲ್ಲಿ ಲೇಖಕರು ಬರೆದಿರುವ ಸೂಚನೆ (preface) ಯಲ್ಲಿನ ಮೊದಲನೆಯ ವಾಕ್ಯವನ್ನು ಗಮನಿಸಿ: "ಇದುವರಿಗೆ ಈ ದೇಶದಲ್ಲಿ ಕ್ರಮವಾದ ಕರ್ನಾಟಕ ಗ್ರಂಥ ರೂಪವಾದ ಗಣಿತ ಶಾಸ್ತ್ರ ಪುಸ್ತಕಗಳು ಇಲ್ಲದೇ ಇಂಗ್ಲಿಷ್‌ನಿಂದ ಟೀಕಿಸಲ್ಪಟ್ಟ ಕೋಲೆನ್ ಸೋ ಮೊದಲಾದ ಚಿಕ್ಕ ಚಿಕ್ಕ ಪುಸ್ತಕಗಳು ಇರುತ್ತಿದ್ದಾಗ್ಯೂ ಅವುಗಳು ಈ ದೇಶೀಯರಿಗೆ ಅನುಪಯೋಗವಾಗಿ ಬಳಕೆಯಾಗದೆಯೂ, ಸಂಪೂರ್ಣಗಳಲ್ಲದೆಯೂ ಇರುವ ಪ್ರಯುಕ್ತ ಲೀಲಾವತೀ ಮತ್ತು ಇಂಗ್ಲಿಷ್, ಮಹಾರಾಷ್ಟ್ರ, ತೆಲುಗು, ಅರವ ಮೊದಲಾದ ಭಾಷೆಗಳಲ್ಲಿ ಇರತಕ್ಕ ಗಣಿತಾಂಶ ಅತಿಶಯಗಳ್ಯಾವತ್ತೂ ತೆಗೆದು ಕೊಂಡು ಅವುಗಳನ್ನು ಗಣಿತ ಪ್ರಭೇದ ರೂಪವಾದ ೧೮೨ ಪ್ರಕರಣಗಳಾಗಿ ವಿಂಗಡಿಸಿ, ಪ್ರತಿ ಪ್ರಕರಣಗಳಿಗೂ ಕನ್ನಡ ಕಂದಪದ್ಯ ರೂಪವಾದ ವಿಧಿಗಳನ್ನೂ ಅವುಗಳ ಅರ್ಥ


GANITARNAVA.



ವಿವರಣೆಗಳನ್ನೂ ಉದಾಹರಣೆಗಳನ್ನೂ ನ್ಯಾಸಗಳನ್ನೂ ಅಭ್ಯ ಉದಾಹರಣೆ ಮತ್ತು ಉತ್ತರ ಮೊದಲಾದವುಗಳನ್ನೂ ಕ್ರಮವಾಗಿಯೂ, ಶುದ್ಧವಾಗಿಯೂ, ಸುಬೋಧವಾಗಿಯೂ, ಸಾಂಗವಾಗಿಯೂ, ಸಂಪೂರ್ಣವಾಗಿಯೂ ಈ ಕೆಳಗೆ ರುಜು ಮಾಡಲ್ಪಟ್ಟಿರತಕ್ಕವರಿಂದ ವಿರಚಿಸಲ್ಪಟ್ಟು, ಇದು ಗಣಿತಾರ್ಣವವೆಂಬ ಹೆಸರನ್ನು ಹೊಂದಲ್ಪಟ್ಟಿತು.".

–ಹತ್ತೊಂಬತ್ತನೆಯ ಶತಮಾನದ ಕನ್ನಡದ ಒಂದು ಗದ್ಯದ ಮಾದರಿ ಇದು.

೩೪೦ ಪುಟಗಳು, ೧೮೨ ಪ್ರಕರಣಗಳೂ ಇರುವ ಈ ಗಣಿತಾರ್ಣವ ಗಣಿತಶಾಸ್ತ್ರದ ಅಂಕಗಣಿತ (ಅರಿತಮಿಟಿಕ್) ಮತ್ತು ಕ್ಷೇತ್ರಗಣಿತ (ಜ್ಯಾಮಿಟ್ರಿ) ಶಿಸ್ತಿನ ಪ್ರಾಥಮಿಕ ಹಾಗೂ ಪ್ರೌಢ ಲೆಕ್ಕಗಳನ್ನು ವಿವರಿಸುವ ಹಾಗೂ ಸಮಸ್ಯೆಗಳನ್ನು ಬಿಡಿಸುವ ಒಂದು ಉಪಯುಕ್ತ ಪುಸ್ತಕವಾಗಿದೆ. ಈ ಪುಸ್ತಕದ ಉಪಯುಕ್ತತೆಯನ್ನು ಇತಿಹಾಸದ ದೃಷ್ಟಿಯಿಂದ ಗಮನಿಸಬೇಕು.

ವರಮುನಿ ಕಶ್ಯಪರನ್ವಯ
ಸುರವರದನ ಭಕ್ತನಾದ ಶಾಮಂಣಾಖ್ಯನ
ವರವುದರೋದ್ಭವನಾಗಿಹ
ವರಲಕ್ಷ್ಮೀಪತಿಯ ನಾಮಕೋರ್ವನುದರದಿಂ

ಇರುತಿಹನೀಗಲು ಯಡತೊರೆ
ಸರಕಾರದ ಪಾಠಶಾಲಾಧ್ಯಕ್ಷತೆಯೊಳಗೆ
ಅರಿಯ ಗಣಿತಾರ್ಣವನೀ
ಪರಿಲಕ್ಷಣ ಕಂದಪದ್ಯರೂಪದೊಳೊರೆವೆಂ

ಈ ೨ ಪದ್ಯಗಳಲ್ಲಿ ಕವಿ ತಾನು ಕಾಶ್ಯಪಗೋತ್ರದ, ವಿಷ್ಣುಭಕ್ತನಾದ ಶಾಮಂಣನ ಪುತ್ರನಾದ ಲಕ್ಷ್ಮೀಪತಿಯೆಂದೂ, ಯಡತೊರೆಯ ಸರ್ಕಾರಿ

ಪಾಠಶಾಲೆಯಲ್ಲಿ ಹೆಡ್ ಮಾಸ್ಟರ್ ಆಗಿದ್ದೆನೆಂದೂ ಹೇಳಿಕೊಂಡಿದ್ದಾನೆ. ಈ ಗಣಿತಾರ್ಣವವನ್ನು ಯಾವುದೇ ಚಾತುರ್ವರ್ಣದವರು ಪರಿಶೀಲಿಸಿದರೂ ಅವರಿಗೆ ಸರಸ್ವತಿಯು ಒಲಿಯುವಳೆಂಬುದು ಈ ಗಣಿತ ಶಾಸ್ತ್ರಜ್ಞನ ಅಭಿಪ್ರಾಯ. ವಿದ್ಯಾಭ್ಯಾಸವು ಸಾರ್ವಜನಿಕರಿಗೆ ತೆರೆದುಕೊಳ್ಳುತ್ತಿದ್ದ ಆ ಕಾಲದಲ್ಲಿ ಬಂದಿರುವ ಈ ಮೇಲಿನ ಮಾತುಗಳು ಗಮನೀಯ.

೧. ಗಣಿತ ಪ್ರಭೇದ ರೂಪವಾದ ೧೮೨ ಪ್ರಕರಣಗಳು ೨. ಕನ್ನಡ ಕಂದಪದ್ಯ ರೂಪವಾದ ವಿಧಿಗಳು ೩. ಅರ್ಥವಿವರಣೆಗಳು ೪. ಉದಾಹರಣೆಗಳು ೫. ನ್ಯಾಸಗಳು ೬. ಅಭ್ಯ(ಅಭ್ಯಾಸ) ಉದಾಹರಣೆಗಳು ೭.. ಪ್ರಶ್ನೆ ಸಮುದಾಯವು ೮. ಉತ್ತರಗಳು–ಈ ರೀತಿಯ ಅತ್ಯಂತ ಔಚಿತ್ಯ ಪೂರ್ಣವಾದ ಉಪಕ್ರಮದಲ್ಲಿ ಲೇಖಕನು ಈ ಗಣಿತ ಶಾಸ್ತ್ರವನ್ನು ನಿರೂಪಿಸಿರುತ್ತಾನೆ.

ಗಣಿತ ನಿಘಂಟುಗಳು ಅಥವಾ ಭೂತ ಸಾಂಜ್ಞೆಯು ಎಂಬ ವಿವಿಧ ಕೋಷ್ಟಕಗಳನ್ನು ವಿವರಿಸಿರುವ ಒಂದು ಪ್ರಕರಣದಲ್ಲಿ ೧ ರಿಂದ ೧೨ ನೇ ಸಂಖ್ಯೆಗಳಿಗೆ ಇರುವ ಹೆಸರುಗಳನ್ನು ಸೂಚಿಸಿರುವುದು ಕುತೂಹಲಕಾರಿಯಾಗಿದೆ.

ಉದಾಹರಣೆಗೆ :
೧= ವಸುಧೆ, ಸೋಮ, ಇಂದು, ಚಂದ್ರ,
೨= ಚರಣ, ಬಾಹು, ನೇತ್ರ, ದ್ವಂದ್ವ ಇತ್ಯಾದಿ
೧೦= ಅವತಾರ, ದಶಕ
೧೨= ರವಿ, ದ್ವಾದಶ, ರಾಶಿ, ಮಾಸ

ಹಾಗೆಯೇ 'ಹಿಂದೂ ದೇಶದಲ್ಲಿ ಪೂರ್ವ ಕರ್ನಾಟಕ ದೇಶದ ನಾಣ್ಯ' ಗಳನ್ನು ಗಮನಿಸಿ :

೧ ವರಹಕ್ಕೆ ೨ ಹೊನ್ನು,
೧ ಹೊನ್ನಿಗೆ ೫ ಹಣ,
೧.ಹಣಕ್ಕೆ ೨.ಅಡ್ಡಗಳು,
೧ ಅಡ್ಡಕ್ಕೆ ೨ ಹಾಗಗಳು,
೧ ಹಾಗಕ್ಕೆ ೨ ಬೇಳೆಗಳು,
೧ ಬೇಳೆಗೆ ೨ ವೀಸಗಳು,
೧ ವೀಸಕ್ಕೆ ೨ ಅರವೀಸಗಳು,
೧ ಅರವೀಸಕ್ಕೆ ೨ ಕಾಣಿಗಳು.

"ಇಂಗ್ಲಿಷ್ ತಿಂಗಳುಗಳಲ್ಲಿ ಉಂಟಾಗಿರುವ ದಿವಸಗಳ ನಿರ್ಣಯವು"

ಎಂಬಲ್ಲಿನ ಈ ಮೂರು ಪದ್ಯಗಳನ್ನು ನೋಡಿ:

**೩೦ ದಿವಸಗಳ ಮಾಸಗಳೂ**

ದಿನಗಳು ಮುವ್ವತ್ತಿರುವುವು
ಜೂನೇಪ್ರಿಲ್ಮಾಸ ಮತ್ತು ಸೆಪ್ಟೆಂಬರಿಗುಂ
ಗಣನನವಂಬರಿಗೀಪರಿ
ಯೆಣಿಸುವ ಇಂಗ್ಲಾಂಡ್ ದೇಶದೊಳಗೀಗಿಲ್ಯುಂ

**೨೮ ಅಥವಾ ೨೯ ದಿವಸ ಬರುವ ಮಾಸ ನಿರ್ಣಯವು**

ದಿನಗಳನಿಪ್ಪತ್ತೆಂಟನು
ಗಣಿಸುವರಾ ಫಿಬ್ರವರಿಗೆಯಧಿವತ್ಸರದೊಳ್
ದಿನಗಳನಿಪ್ಪತ್ತೊಂಬ
ತ್ತೆಣಿಸುವರೆಂದರಿಯಬೇಕು ಇಂಗ್ಲಿಷಿನೊಳೂ

**೩೧ ದಿವಸಗಳ ಮಾಸ ನಿರ್ಣಯವು**

ದಿನ ಮುವ್ವತ್ತೊಂದಿರುವುವು
ಜನವರಿಮೇಮಾರ್ಚಿಜೂಲೈ ಯಾಗಷ್ಟಿಗೆಯುಂ
ನೆನೆ ಯಕ್ಟೋಬರ್ಮಾಸಕು
ಸನುಮಕಡೀಸೆಂಬರೆಂಬ ತಿಂಗಳುಗಳಿಗುಂ

ಇನ್ನು ಲೇಖಕರು ಕೊಡುವ ಒಂದು ಚಮತ್ಕಾರದ ಲೆಕ್ಕವನ್ನು ಗಮನಿಸಿ :

ಒಬ್ಬನಿಗೆ ೪೭೫೦ ರೂಪಾಯಿಗಳೂ ಮತ್ತೊಬ್ಬನಿಗೆ ೩೪೦೦ ರೂಪಾಯಿಗಳೂ ಇನ್ನೊಬ್ಬನಿಗೆ ೨೦೫೦ ರೂಪಾಯಿಗಳೂ ಬೇರೊಬ್ಬನಿಗೆ ೨೫೦ ರೂಪಾಯಿಗಳೂ ಸಾಲಗಳಿದ್ದವು. ಅವರುಗಳು ಒಬ್ಬ ಪ್ರಭುವಿನಲ್ಲಿ ಹೋಗಿ ಕೇಳಿಕೊಳ್ಳಲಾಗಿ ತಾರತಮ್ಯಾನುಸಾರವಾಗಿ ೧೫, ೧೨, ೯, ೫ ರತ್ನಗಳನ್ನು ಕೊಟ್ಟನು. ಆಗ ಅವರು ಅವುಗಳನ್ನು ಮಾರಿ ಸರಿಯಾಗಿ ತಮ್ಮ ತಮ್ಮ ಸಾಲಗಳನ್ನು ಬಗೆಹರಿಸಿಕೊಂಡು ಎಲ್ಲರೂ ಸಮನಾದ ದ್ರವ್ಯಗಳನ್ನು ಉಳಿಸಿಕೊಂಡರು. ಆದರೆ ಒಂದೊಂದು ರತ್ನದ ಕ್ರಯವೆಷ್ಟು ಹೇಳು?

ಲೆಕ್ಕ ಮಾಡುವ ರೀತಿ:

| ರತ್ನಗಳು | ಸಾಲಗಳು |
|---|---|
| ೧೫, ೧೨, ೯, ೫ | ೪೭೫೦, ೩೪೦೦, ೨೦೫೦, ೨೫೦ |
| ಕಡೆಯ ೫ನ್ನು ಬಿಡಲು | ಕಡೆಯ ೨೫೦ನ್ನು ಬಿಡಲು |
| ೧೫+೧೨+೯=೩೬ | ೪೭೫೦+೩೪೦೦+೨೦೫೦=೧೦೨೦೦ |

ಮೊದಲ ೧೫ನ್ನು ಬಿಡಲು          ಮೊದಲ ೪೭೫೦ನ್ನು ಬಿಡಲು

೧೨+೯+೫=೨೬          ೩೪೦೦+೨೦೫೦+೨೫೦=೫೭೦೦

ಅವುಗಳ ಅಂತರ=೧೦          ಇವುಗಳ ಅಂತರ=೪೫೦೦

೪೫೦೦/೧೦=೪೫೦  ಇದೇ ರತ್ನದ ಕ್ರಯವು.

ಇದು ಒಂದು ಮಾದರಿ ಮಾತ್ರ. ಇಂತಹ ಸುಮಾರು ೫೦ ಚಮತ್ಕಾರದ ಲೆಕ್ಕಗಳು ಈ ಪುಸ್ತಕದಲ್ಲಿದೆ. ಆ ಕಾಲಕ್ಕೆ ಅಗತ್ಯವಾದ ಗಣಿತಶಾಸ್ತ್ರದ ಎಲ್ಲ ರೀತಿಯ ಅಂಶಗಳನ್ನು ಈ ಕೃತಿಯಲ್ಲಿ ಗಮನಿಸಬಹುದಾಗಿದೆ.

ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ನೈಜ ಪರಿಚಯವುಳ್ಳ ಉತ್ತಮ ಗಣಿತ ಶಾಸ್ತ್ರಜ್ಞರು ಇದರ ಸ್ವರೂಪ ಹಾಗೂ ಉಪಯುಕ್ತತೆ ಮತ್ತು ಪ್ರಸ್ತುತತೆಯನ್ನು ಸ್ಪಷ್ಟೀಕರಿಸುವ ಅಗತ್ಯವಿದೆ.

೧೯ನೆಯ ಶತಮಾನದ ಉತ್ತರಾರ್ಧದ ಕನ್ನಡ ಸಮಾಜದ ಪಳೆಯುಳಿಕೆಗಳನ್ನು ಬಿಂಬಿಸುವ ಈ 'ಗಣಿತಾರ್ಣವ'ಕೃತಿಯು ಒಂದು ವಿರಳವಾದ ಪುಸ್ತಕ.

## ಬಂಧವಿಮೋಚನ–ಒಂದು ಅಪೂರ್ವ ಮನೋವಿಜ್ಞಾನದ ಕೃತಿ [1919]

ಸುರಸಗ್ರಂಥ ಮಾಲಾ ಪುಸ್ತಕಮಾಲೆಯ 39ನೆಯ ಗ್ರಂಥವಾದ **ಬಂಧವಿಮೋಚನ** ಎಂಬುದು ಮನೋವಿಜ್ಞಾನವನ್ನು ಕುರಿತ ಒಂದು ಅಪರೂಪ ಕೃತಿ. 5000 ಪ್ರತಿಗಳು ಒಂದನೆಯ ಆವೃತ್ತಿಯಲ್ಲಿ ಅಚ್ಚಾಗಿರುವ, ಈ ಪುಸ್ತಿಕೆಯ ಲೇಖಕರು ಹಾವೇರಿಯ **ಶ್ರೀ ಶೇಷಾಚಲ ಸಂಸ್ಕೃತ ಪಾಠಶಾಲಾದಲ್ಲಿ** ಮುಖ್ಯಾಧ್ಯಾಪಕರಾಗಿದ್ದ **ವೇ. ಶಾ. ಸ. ಮಹಾದೇವಶಾಸ್ತ್ರೀ ಜಂತಲಿ** ಅವರು. ಇದು 1919ರಲ್ಲಿ ಪ್ರಕಟವಾಗಿರುವ ಒಂದು ಮನೋವಿಜ್ಞಾನದ ಕೃತಿ. ಅಷ್ಟಕಿರೀಟಾಕಾರದ 30 ಪುಟಗಳ ಈ ಪುಸ್ತಿಕೆಯ ಬೆಲೆ 4 ಆಣೆ. ಈ ಪುಸ್ತಿಕೆಯನ್ನು ಮಿ. **ಯಶವಂತರಾವ ಭಾಸ್ಕರರಾವ ಜಠಾರ**, ಬಿ.ಎ., ಎಲ್.ಎಲ್.ಬಿ., ಅವರು ಧಾರವಾಡದಲ್ಲಿ ತಮ್ಮ ಕರ್ನಾಟಕ ಪ್ರಿಂಟಿಂಗ ವರ್ಕ್ಸ ಮುದ್ರಣಾಲಯದಲ್ಲಿ ಮುದ್ರಿಸಿದರು. ಮತ್ತು ಮಿ. **ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ** ಇವರು ಹಾವೇರಿಯ ತಮ್ಮ ಸುರಸಗ್ರರಥಮಾಲಾ ಆಫೀಸಿನಲ್ಲಿ ಪ್ರಸಿದ್ಧಿಪಡಿಸಿದರು.ಪ್ರಕಾಶಕರಾದ ಕನ್ನಡಿಗರ ಸೇವಕ, **ವೇ. ತಿ. ಕುಲಕರಣಿ (ಗಳಗನಾಥ)** ಅವರು ಪ್ರಸ್ತಾವನೆಯಲ್ಲಿ ಈ ಕೃತಿಯನ್ನು ಕುರಿತು " **ಬಂಧವಿಮೋಚನಕ್ಕೆ** ಅತ್ಯಂತ ಅವಶ್ಯವಾಗಿರುವ ಮನಶ್ಶುದ್ಧಿಯನ್ನು ಹ್ಯಾಗೆ ಮಾಡಿಕೊಳ್ಳಬೇಕೆಂಬುದನ್ನೂ, ಮನಸ್ಸಿನ ಧರ್ಮಗಳಾವವೆಂಬದನ್ನೂ, ಅದರ ಸಂಯಮನದ ಕ್ರಮವನ್ನೂ ತಿಳಿಸುವುದಕ್ಕಾಗಿ ಈ ಚಿಕ್ಕ ಪ್ರಬಂಧವನ್ನು ಉಪನಿಷದಾದಿಗಳ ಆಧಾರದಿಂದ ನಮ್ಮ **ಶಾಸ್ತ್ರಿಗಳು** ಬಹು ಶ್ರಮಪಟ್ಟು ಬರೆದಿರುತ್ತಾರೆ. ಇಂದ್ರಿಯಗಳ ಬಲಶಾಲಿತ್ವವೂ, ವಿಷಯಗಳ ಪ್ರಭಾವವೂ ಇದರಲ್ಲಿ ಚನ್ನಾಗಿ ವರ್ಣಿಸಲ್ಪ ಟ್ಟಿರುವವು. ಒಟ್ಟಿಗೆ ಈ ಪುಸ್ತಕವನ್ನು ಓದುವದರಿಂದ ವಾಚಕರಿಗೆ ಹಲವು ಹೊಸ ವಿಷಯಗಳ ಜ್ಞಾನವು ಆಗಿ, ಅವರ ಆತ್ಮಹಿತದ ಯತ್ನಕ್ಕೆ ಬಹುಮಟ್ಟಿಗೆ ಸಹಾಯವಾಗುವದೆಂದು ನಾವು ನಂಬುತ್ತೇವೆ." ಎಂದು ಇದರೊಳಗೆ ಬರುವ ವಿಷಯಗಳ ಬಗ್ಗೆ ಸೂಚನೆ ನೀಡುತ್ತಾರೆ. ಇಲ್ಲಿ ವಾಚಕರಿಗೆ ಹಲವು ಹೊಸ ವಿಷಯಗಳ


ಬಂಧವಿಮೋಚನ.
ವೇ. ಶಾ. ಸ. ಮಹಾದೇವಶಾಸ್ತ್ರೀ ಜಂತಲಿ



ಜ್ಞಾನವು ಆಗ ಬೇಕಾದ್ದರ ಅಗತ್ಯವನ್ನು ಅಂದಿನ ಕಾಲದ ಮೇಧಾವಿಗಳು ಆಲೋಚಿಸಿದ್ದುದು ಗಮನಾರ್ಹ. ಇದರ ಜೊತೆಗೆ **ಗಳಗನಾಥರು** ಈ ಕೃತಿಯ ಪ್ರಕಟಣೆಯಲ್ಲಿ ಬೇರೆ ಬೇರೆ ರೀತಿಯಲ್ಲಿ ಪರಿಶ್ರಮಪಟ್ಟು ನೆರವು ನೀಡಿದ ಪ್ರಿಯ ವಿದ್ಯಾರ್ಥಿಗಳಾದ **ಶಂಕರಜೋಷಿ ತಿಳವಳ್ಳಿ** ಹಾಗೂ **ರಾಮಭಟ್ಟ ಮುಳಗುಂದ** ಎಂಬ ಇಬ್ಬರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತಾರೆ.

ಈ ಪುಸ್ತಿಕೆಯಲ್ಲಿ ಒಟ್ಟು ಐದು ಪ್ರಕರಣಗಳಿವೆ. 1.ಮನಸ್ಸು 2.ಇಂದ್ರಿಯಗಳು 3. **ವಿಷಯಗಳು** 4. **ಮನಸ್ಸಿನ ಶುದ್ಧೀಕರಣ** 5. **ಬಂಧವಿಮೋಚನ** ಎಂಬವೇ ಆ ಐದು ಪ್ರಕರಣಗಳು. ಒಂದೊಂದು ಪ್ರಕರಣವೂ ಸಂಸ್ಕೃತದ ಶಾಸ್ತ್ರ ಗ್ರಂಥವೊಂದರಲ್ಲಿನ ಒಂದು ಶ್ಲೋಕದ ಕೊಟೇಷನ್‌ನಿಂದ ಆರಂಭವಾಗುತ್ತದೆ. ಮನಸ್ಸು ಎಂಬ ಒಂದನೆಯ ಪ್ರಕರಣವು– **'ಮನ ಏವ ಮನುಷ್ಯಾಣಾಂ ಕಾರಣ ಬಂಧ ಮೋಕ್ಷಯೋಃ । ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಾಸ್ಮೃತಂ ॥** – ಮನಸ್ಸೇ ಮನುಷ್ಯನ ಬಂಧನ ಮತ್ತು ಮೋಕ್ಷ ಎರಡಕ್ಕೂ ಕಾರಣ. ವಿಷಯಾಸಕ್ತ ಮನಸ್ಸು ಮನುಷ್ಯನನ್ನು ಇಹಲೋಕಕ್ಕೆ ಬಂಧಿಸುತ್ತದೆ. ಮುಕ್ತಿಗೆ ನಿರ್ವಿಷಯ ಮನಸ್ಸು ಕಾರಣವಾಗುತ್ತದೆ– ಎಂಬ ಅರ್ಥದ ಶ್ಲೋಕದಿಂದ ಪ್ರಾರಂಭವಾಗಿದೆ. ಲೇಖಕರು ಈ ಪ್ರಕರಣದಲ್ಲಿ " ನಮ್ಮ ಲೇಖದಲ್ಲಿ ನಾವು ಜ್ಞಾನಿಗಳ ಮತವನ್ನು ಉಲ್ಲೇಖಿಸುವೆವಲ್ಲದೆ, ಪ್ರಸಂಗವಿಶೇಷದಲ್ಲಿ ಮನಸ್ಸಿನ ಮಂಗಚೇಷ್ಟೆಗಳನ್ನಾದರೂ ಅನುಭವದಿಂದ ಹೇಳುವೆವು " ಎಂದು ಹೇಳಿ ಸ್ವಾನುಭವಕ್ಕೆ ಒತ್ತು ಕೊಟ್ಟಿರುತ್ತಾರೆ. ಈ ಸಂದರ್ಭದಲ್ಲಿ 'ಮನವೆಂಬ ಮರ್ಕಟ' ಎಂಬ ವಚನಕಾರರ ಉಕ್ತಿಯು ನೆನಪಿಗೆ ಬರುವುದು. ಈ ಪ್ರಕರಣದ ಒಂದು ನಿರೂಪಣೆಯು ಹೀಗಿದೆ : **" ದೇಹವೆಂಬದೊಂದು ರಾಜಧಾನಿಯು; ಜೀವಾತ್ಮನೆಂಬವನೇ ಅಲ್ಲಿಯ ಅರಸನು; ಮನಸ್ಸು ಆತನ ಮಂತ್ರಿಯು; ಪಂಚಪ್ರಾಣಗಳು ದ್ವಾರಪಾಲಕರು; ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೇ ಆತನ ಪರಿಚಾರಕರು; ಇವರೆಲ್ಲರೂ ಕೂಡಿ ಆ ದೇಹದೊಡೆಯನಾದ ಜೀವಾತ್ಮನಿಗೆ ವಿವಿಧ ಉಪಭೋಗ್ಯ ವಿಷಯಗಳನ್ನು ಸಂಪಾದಿಸಿಕೊಡುತ್ತಾರೆ. ಆ ವಿಷಯಗಳ ಉಪಭೋಗದಿಂದ ಜೀವಾತ್ಮನಿಗೆ ಸುಖದುಃಖಗಳಾಗುತ್ತವೆಂಬುದು ಅನುಭವಸಿದ್ಧ ಮಾತಾಗಿರುತ್ತದೆ. ಮೂಲತಃ ಜೀವಾತ್ಮನು ಸ್ವತಂತ್ರನು, ಆನಂದ ಸ್ವರೂಪನು; ಆದರೆ, '**

**ಜಾಲಿಯಬಿತ್ತಿ ಕಾಲಿಗೆ ಮೂಲ ಮಾಡಿಕೊಂಡಂ' ತೆ, ಆತನು ಮೇಲೆ ಹೇಳಿದ ತನ್ನ ಪರಿವಾರದ ಅಧೀನನಾಗಿ ಸ್ವಾತಂತ್ರ್ಯ ಸುಖವನ್ನು ಮರೆತು ಬಿಟ್ಟದ್ದರಿಂದ, ಪಾರತಂತ್ರ್ಯದ ಬಗೆಬಗೆಯ ಕಾಲ್ಪನಿಕ ಸುಖದುಃಖಗಳ ಜಗ್ಗಾಟಕ್ಕೆ ಗುರಿಯಾಗಿ ನರಳಬೇಕಾಗಿದೆ. "** ಈ ಇಡೀ ಪ್ರಕರಣದಲ್ಲಿ ಮನಸ್ಸಿನ ಸ್ವರೂಪವನ್ನು ವೇದೋಪನಿಷತ್ತುಗಳ ಹಿನ್ನೆಲೆಯಲ್ಲಿ ಮನೋವೈಜ್ಞಾನಿಕವಾಗಿ ಸಾದ್ಯಂತವಾಗಿ ವಿವೇಚಿಸಲಾಗಿದೆ. ಮನಸ್ಸಿನ ಚಂಚಲ ಸ್ವಭಾವ ಹಾಗೂ ನಿರ್ಲಿಪ್ತ ಸ್ವಭಾವಗಳೆರಡನ್ನೂ ನಿದರ್ಶನಗಳೊಂದಿಗೆ ವಿವರವಾಗಿ ಚಿತ್ರಿಸಿರುತ್ತಾರೆ. ಮನಸ್ಸಿನ ಶಕ್ತಿ ಅಪಾರವಾದದ್ದೆಂದು ಹೇಳುವಾಗ ಅದರ ವೇಗ ಶಕ್ತಿ ಹಾಗೂ ಅಧಿಕಾರ ಶಕ್ತಿಯ ಬಗ್ಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ.

ಎರಡನೆಯ ಪ್ರಕರಣ ಪೂರ್ತಿ ಇಂದ್ರಿಯಗಳ ವರ್ತನೆ ಮತ್ತು ಸ್ವರೂಪವನ್ನು ಕುರಿತದ್ದಾಗಿದೆ. ಈ ಪ್ರಕರಣ ಶ್ರೀಮದ್ಭಾಗವತದಲ್ಲಿನ " **ಬಲವಾನಿಂದ್ರಿಯಗ್ರಾನೋ ವಿದ್ವಾಂಸ ಮಪಿಕರ್ಷತಿ** "– ಎಂಬ ಶ್ಲೋಕದಿಂದ ಆರಂಭವಾಗಿದೆ. ಹಾಗೆಂದರೆ– ಇಂದ್ರಿಯಗಳ ಸಮೂಹವು ಎಷ್ಟು ಬಲವಾಗಿರುತ್ತವೆ ಎಂದರೆ ವಿಷಯಗಳ ಸೆಳೆತದಿಂದ ಮನುಷ್ಯರು ವಿಷಯ ಸಂಗಮದ ಸುಖಗಳನ್ನು ತ್ಯಜಿಸುವುದು ಸೂಕ್ತ– ಎಂದರ್ಥ. ಪ್ರಬಲವಾಗಿ ಪ್ರವರ್ತಿಸುವ ಇಂದ್ರಿಯಗಳ ವರ್ತನೆಗಳನ್ನು ನಿಯಂತ್ರಿಸಲು ಖಚಿತವಾದ ಮನಸ್ಸಿನಿಂದ ಮಾತ್ರ ಸಾಧ್ಯ ಎಂಬಂಶವನ್ನು ಈ ಪ್ರಕರಣದಲ್ಲಿ **ಮಹದೇವಶಾಸ್ತ್ರಿ ಜಂತಲಿ** ಅವರು ನಿರೂಪಿಸಿದ್ದಾರೆ. ಜ್ಞಾನೇಂದ್ರಿಯಗಳೇ ಆಗಲಿ, ಕರ್ಮೇಂದ್ರಿಯಗಳೇ ಆಗಲಿ ಪ್ರತಿಯೊಂದು ಇಂದ್ರಿಯಗಳು ತಮ್ಮ ತಮ್ಮ ಕೆಲಸಗಳನ್ನು ಮಾಡುವದಕ್ಕೆ ಸಮರ್ಥಗಳಾಗಿದ್ದರೂ ಅವುಗಳ ಕಡೆಗೆ ಮನಸ್ಸಿನ ಒಲವು ಇರಬೇಕಾಗುತ್ತದೆ ಎಂಬುದು ಲೇಖಕರ ನಿಲವು.

ಮೂರನೆಯ ಪ್ರಕರಣ ' ವಿಷಯಗಳು'. ವಿಷಯ ಎಂದರೆ ಕಾಮ (sex)ಎಂಬರ್ಥವಿದೆ. ಈ ಪ್ರಕರಣ 'ವಿಷಯ'ದ ವಿಶ್ವರೂಪ ದರ್ಶನ ಮಾಡಿಸುತ್ತದೆ. ಈ ಪ್ರಕರಣವು **ಮಾಧವ** ಗ್ರಂಥದ **"ತ್ಯಾಜ್ಯಂ ಸುಖಂ ವಿಷಯಸಂಗಮ ಜನ್ಮ ಪುಂಸಾಮ್ । ವಿಸಿತ್ವಂತಿ ಭಧ್ರಂತಿ ಪ್ರಾಣಿನಹತಿ ವಿಷಯಾಃ ॥ "** ಎಂದರೆ– ವಿಷಯಗಳು ಪ್ರಾಣಿಗಳನ್ನು ಬಂಧಿಸುವ ವಸ್ತುಗಳು. ಈ ವಿಷಯಗಳು ಮನಸ್ಸಿನಿಂದೊಡಗೂಡಿದ ಇಂದ್ರಿಯಗಳಿಗೆ ಗೋಚರವಾದರೆ ಸಾಕು, ಪ್ರಾಣಿಗಳನ್ನು ಎಳೆದೇ ಬಿಡುತ್ತದೆ– ಎಂಬರ್ಥದ ಶ್ಲೋಕದಿಂದಾರಂಭವಾಗಿದೆ. ವಿಷಯಗಳ ಅತಿ ಬಳಕೆಯಿಂದ ದೇಹ ಮತ್ತು ಜೀವ ಹೇಗೆ ಹಾಳಾಗುತ್ತವೆ ಎಂಬುದನ್ನು ತೋರಿಸಿಕೊಡುವುದೇ ಈ ಪ್ರಕರಣದ ಉದ್ದೇಶ. ಅದು ಇಲ್ಲಿ ಸಾರ್ಥಕವಾಗಿದೆ. ಈ ಪ್ರಕರಣದಲ್ಲಿ ಲೇಖಕರು ಮೂರು ವರ್ಗಗಳಾದ ಸಾತ್ವಿಕ, ರಾಜಸ ಮತ್ತು ತಾಮಸಗಳನ್ನು ಕುರಿತು ಭಾರತೀಯ ಪೂರ್ವ ಮೀಮಾಂಸಕರು ಹೇಳಿದ ತತ್ವಗಳನ್ನು ವಿಶ್ಲೇಷಿಸಿರುತ್ತಾರೆ. ಈ ಸಂದರ್ಭದಲ್ಲಿ ವಿಷಯಗಳಿಗೆ ಸಾಮಗ್ರಿಯಾಗಿರುವ ಅನ್ನ ನೀರು ಆಹಾರ

ಮಲಮೂತ್ರಾದಿಗಳ ಪ್ರಸ್ತಾಪವೂ ಬರುತ್ತದೆ.

ನಾಲ್ಕನೆಯ ಪ್ರಕರಣ ' **ಮನಸ್ಸಿನ ಶುದ್ಧೀಕರಣ** '. ಇದು ಬಹು ಕಷ್ಟಸಾಧ್ಯವಾದ ಸಂಗತಿ. ಈ ಪ್ರಕ್ರಿಯೆಯನ್ನು ಹೇಗೆ ಆಗುಮಾಡಬೇಕೆಂಬುದೇ ಈ ಪ್ರಕರಣದ ವಸ್ತು. ಮನಸ್ಸು ಅನ್ನಜನ್ಯವೆಂಬುದು ಹಿಂದಿನವರ ತಿಳಿವಳಿಕೆ. ಅದರ ಶುದ್ಧಿಯೂ ಅನ್ನದಿಂದಲೇ ಆಗಬೇಕಾದ್ದು ಎಂಬುದು ಸಿದ್ಧವೇ ಸರಿ. ಇದನ್ನು ಕುರಿತು ಪ್ರಸ್ತುತ ಪ್ರಕರಣದಲ್ಲಿ ವಿವೇಚಿಸಲಾಗಿದೆ. ಸಾಮಾನ್ಯವಾಗಿ ಸಮಕಾಲೀನರು ಒಪ್ಪದಿರಬಹುದಾದ– ಆಹಾರ ಪದ್ಧತಿಗಳು ಮನಸ್ಸಿನ ವರ್ತನೆಯನ್ನು ನಿರ್ಧರಿಸುತ್ತದೆ–ಎಂಬ ಸಾಂಪ್ರದಾಯಿಕ ಪರಿಕಲ್ಪನೆಯನ್ನೇ ಇಲ್ಲಿ ಲೇಖಕರಾದ **ಮಹದೇವಶಾಸ್ತ್ರೀ ಜಂತಲಿಯವರು** ಪ್ರತಿಪಾದಿಸುತ್ತಾರೆ. ಮನಸ್ಸಿಗೂ– ಇಂದ್ರಿಯಗಳಿಗೂ, ಇಂದ್ರಿಯಗಳಿಗೂ–ವಿಷಯಗಳಿಗೂ ಪರಸ್ಪರ ಅಪರಿತ್ಯಾಜ್ಯ ಸಂಬಂಧವಿರುವದರಿಂದ ಇವುಗಳ ವ್ಯವಹಾರಗಳನ್ನು ನಾವು ವಿಚಾರಪೂರ್ವಕವಾಗಿ ವರ್ತಿಸಬೇಕೆಂಬುದು ಲೇಖಕರ ಖಚಿತವಾದ ಅಭಿಪ್ರಾಯ.

ಐದನೆಯ 'ಬಂಧವಿಮೋಚನ 'ಪ್ರಕರಣವು 'ಯಾರಿಗೆ ದೇವರಲ್ಲಿ ಪರಮ ಭಕ್ತಿ ಇರುವದೋ ದೇವರಷ್ಟೇ ಭಕ್ತಿಯನ್ನು ಗುರುವಿನಲ್ಲಿ ಹೊಂದಿರುವನೋ ಅಂತಹ ವ್ಯಕ್ತಿಯ ಮನಸ್ಸಿನಲ್ಲಿ ದೇವರು ಮತ್ತು ಗುರುಗಳಿಬ್ಬರೂ ನೆಲೆಸಿರುತ್ತಾರೆ.' ಎಂಬ ಅರ್ಥವುಳ್ಳ " **ಯಸ್ಯ ದೇವೇ ಪರಾಭಕ್ತಿರ್ಯಥಾದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥** " ಎಂಬ ಶ್ಲೋಕದಿಂದ ಆರಂಭವಾಗುತ್ತದೆ. ಈ ಪ್ರಕರಣದಲ್ಲಿ ಶಾಸ್ತ್ರಿಗಳು ಮನಸ್ಸಿನ ಚಾಂಚಲ್ಯವನ್ನು ನಿವಾರಿಸುವ ವಿಷಯಗಳನ್ನು ಕುರಿತು ಚಿಂತಿಸಿದ್ದಾರೆ. ಆವರು ಇದನ್ನು ಕುರಿತು " **ಈ ಮನಸ್ಸಿನ ಚಾಂಚಲ್ಯವನ್ನು ತೆಗೆದು ಹಾಕುವ ಉಪಾಯಗಳೆಂದರೆ 1. ಸಂಕಲ್ಪವು 2. ಯೋಗವು. ಇವೆರಡೂ ಕೂಡಿ ಮನಸ್ಸಿನ ಚಾಂಚಲ್ಯವನ್ನು ಪರಿಹರಿಸುತ್ತದೆ.** " ಚಾಂಚಲ್ಯ ಎಂದರೆ ಮನಸ್ಸು ಒಂದು ಕೆಲಸವನ್ನು ಮಾಡಲು ಉಪಕ್ರಮಿಸಿ ಅದನ್ನು ಬಿಡುತ್ತದೆ, ಮತ್ತೊಂದು ಕೆಲಸ ಮಾಡಲು ಉಪಕ್ರಮಿಸಿ ಅದನ್ನೂ ಬಿಡುತ್ತದೆ, ಹೀಗೆ ಮಾಡುವುದು ಮನಸ್ಸಿನ ಚಾಂಚಲ್ಯ. ಈ ಚಾಂಚಲ್ಯವನ್ನು ಸಂಕಲ್ಪದಿಂದ ನಿವಾರಿಸುವದು ಸುಲಭ. ಉದಾಹರಣೆಗೆ ಏಕಾದಶಿಯ ದಿವಸ ಉಪವಾಸ ಮಾಡುವ ಸಂಕಲ್ಪದಿಂದ ಆ ಇಡೀ ದಿನ ಅನ್ನಾಹಾರಗಳನ್ನು ವರ್ಜಿಸುವುದಿಲ್ಲವೆ ? ಇದು ಲೇಖಕರು ಸಂಕಲ್ಪವನ್ನು ಅರ್ಥೈಸಿರುವ ವಿಧಾನ. ಇದನ್ನು ಇನ್ನೂ ಸ್ಪಷ್ಟವಾಗಿ ಹೇಳುವದಕ್ಕೆ ಶಾಸ್ತ್ರಿಗಳು ಭಗವದ್ಗೀತೆಯಲ್ಲಿನ ನಿದರ್ಶನಗಳನ್ನು ಬಳಸಿಕೊಳ್ಳುತ್ತಾರೆ. ಮನೋವಿಜ್ಞಾನದ ಶಿಸ್ತು ಒಂದು ಶತಮಾನದ ಹಿಂದೆ ಯಾವ ಸ್ವರೂಪದಲ್ಲಿದ್ದಿತು ಎಂಬುದಕ್ಕೆ ಈ ಪುಸ್ತಿಕೆ ಒಂದು ಕೈದೀವಿಗೆಯಾಗಿದೆ. ಕನ್ನಡದಲ್ಲಿ ಮನೋವಿಜ್ಞಾನ ಪುಸ್ತಕಗಳ ಇತಿಹಾಸದಲ್ಲಿ ಈ ಗ್ರಂಥವು ತನ್ನದೇ ಆದ ಚಾಪನ್ನು ಮೂಡಿಸಿದೆ.

# ಕೆ. ರಂಗಾಚಾರಿ ಅವರ 'ಬಾಲಕರ ವನಸ್ಪತಿಶಾಸ್ತ್ರ' (1927)

1927ರಲ್ಲಿ ಕೊಯಮುತ್ತೂರು ವ್ಯವಸಾಯ ಕಾಲೇಜಿನಲ್ಲಿದ್ದ ದಿವಾನ್ ಬಹದ್ದೂರ್ ಕೆ.ರಂಗಾಚಾರಿ ಅವರಿಂದ ವಿರಚಿತವಾದ ಪುಸ್ತಕ **'ಬಾಲಕರ ವನಸ್ಪತಿ ಶಾಸ್ತ್ರ'**. ಈ ಪುಸ್ತಕವನ್ನು ಇಂಗ್ಲಿಷ್ ಭಾಷೆಯಲ್ಲಿ

Rangachariar's Primer of Botany, Kanarese ಎಂದು ಕೊನೆಯ ರಕ್ಷಾಪುಟದಲ್ಲಿ ಕರೆಯಲಾಗಿದೆ. ಆ ಕಾಲಕ್ಕೆ ಸಸ್ಯವಿಜ್ಞಾನವನ್ನು ವನಸ್ಪತಿಶಾಸ್ತ್ರವೆಂದು ಕರೆಯಲಾಗುತ್ತಿತ್ತು. **ಮ್ಯಾಕ್‌ಮಿಲನ್ ಅಂಡ್ ಕಂಪನಿ ಲಿಮಿಟೆಡ್**–ಈ ಪುಸ್ತಕದ ಪ್ರಕಾಶಕರು. ಅಷ್ಟ ಕಿರೀಟಾ ಕಾರದ 150 ಪುಟಗಳ ಈ ಕೃತಿಯ ಅಂದಿನ ಕ್ರಯಬೆಲೆ 8 ಆಣೆ. ಮದ್ರಾಸಿನ **ಮೆಥಾಡಿಸ್ಟ್ ಪುಬ್ಲಿಷಿಂಗ್ ಹೌಸಿನಿಂದ** ಈ ಕೃತಿ ಮುದ್ರಣಗೊಂಡಿದೆ. ಒಟ್ಟು 14 ಅಧ್ಯಾಯಗಳಿರುವ ಈ ಪುಸ್ತಕ ದಲ್ಲಿ ನಿದರ್ಶನ ಹಾಗೂ ಸ್ಪಷ್ಟೀಕರಣ ಗಳಿಗಾಗಿ 109 ಚಿತ್ರಗ ಳನ್ನು ನೀಡಿರುವುದು ವಿದ್ಯಾರ್ಥಿ ಗಳಿಗೆ ತುಂಬಾ ಉಪಯುಕ್ತ ವಾಗಿದೆ. ಕೃತಿಯ ಕೊನೆಯ ರಕ್ಷಾಪುಟದಲ್ಲಿ ಆ ಕಾಲದ ಹೊತ್ತಿಗೆ ಮ್ಯಾಕ್‌ಮಿಲನ್ ಕಂಪನಿಯು ಪ್ರಕಟಿಸಿದ ಇತರ ಇಪ್ಪತ್ತು ಕನ್ನಡ ಪುಸ್ತಕಗಳ ವಿವರಗಳಿವೆ.



ಬಾಲಕರ ವನಸ್ಪತಿಶಾಸ್ತ್ರ

ಇದು

ಕೊಯಮುತ್ತೂರು ವ್ಯವಸಾಯದ ಕಾಲೇಜಿನಲ್ಲಿದ್ದ

ದಿವಾನ್ ಬಹದ್ದೂರ್ ಕೆ ರಂಗಾಚಾರ್ಯರಿಂದ

ವಿರಚಿತವಾದುದು

ಮ್ಯಾಕಮಿಲನ್ ಅಂಡು ಕಂಪೆನಿ, ಲಿಮಿಟೆಡ್.

ಮದರಾಸ್, ಬೊಂಬಾಯಿ, ಕಲಕತ್ತಾ, ಲಂಡನ್.

1927

[ಕ್ರಯ - ಆಣೆ

ಉಪೋದ್ಘಾತದಲ್ಲಿ ಈ

ಪುಸ್ತಕದ ಉದ್ದೇಶವನ್ನು ಕುರಿತು ಕೆ.ರಂಗಾಚಾರಿ ಅವರು ಹೀಗೆ ಅಭಿಪ್ರಾಯ ಪಡುತ್ತಾರೆ : "ಈ ಸಣ್ಣ ಪುಸ್ತಕವು ಪ್ರೈಮರೀ ಪಾಠಶಾಲೆಯ ಉಪಾಧ್ಯಾಯರ ಮತ್ತು ಕನ್ನಡವನ್ನು ಓದಬಲ್ಲ ಬಾಲಕರ ಉಪಯೋಗಕ್ಕಾಗಿ ಬರೆದಿದೆ.

ಬಾಲಕರು ತಮ್ಮ ಸುತ್ತಮುತ್ತಲೂ ಇರುವ ಗಿಡಮರಗಳು, ಹೂವುಗಳು, ಕಾಯಿಗಳು, ಪಕ್ಷಿಗಳು, ಮುಂತಾದುವನ್ನು ಹುಡುಕಿಕೊಂಡು ಬಹಳ ಆನಂದದಿಂದ ತಿರುಗುವುದನ್ನು ನಾವು ಪ್ರತಿದಿನವೂ ನೋಡುತ್ತೇವೆ. ಬಾಲಕರಿಗೆ ಸ್ವಾಭಾವಿಕವಾಗಿರುವ ಈ ಮನೋಭಾವವನ್ನು ಯಾವ ವಿಧದಿಂದಲಾದರೂ ಹೆಚ್ಚಿಸಲು ಯತ್ನ ಪಡುವುದನ್ನು ತಮ್ಮ ಕರ್ತವ್ಯಗಳಲ್ಲಿ ಒಂದಾಗಿ ಉಪಾಧ್ಯಾಯರೂ ತಂದೆತಾಯಿಗಳೂ ಭಾವಿಸಬೇಕು. ಇದರಿಂದ ಬಾಲಕರ ತಿಳಿವಳಿಕೆಯು ಅಭಿವೃದ್ಧಿ ಹೊಂದುವುದರಲ್ಲಿ ಸಂದೇಹವಿಲ್ಲ. ನಮ್ಮ ಸುತ್ತಲೂ ಬೆಳೆದು ಜೀವಿಸುತ್ತಿರುವ ಗಿಡಗಳನ್ನು ಕುರಿತು ವಿಷಯಗಳನ್ನು ತಿಳಿಯುವುದರಿಂದ ನಮಗೆ ಹಲವು ವಿಧಾನದಲ್ಲಿಯೂ ಒಳ್ಳೆಯದೇ ಆಗುವುದೆಂಬುದು ನಿಶ್ಚಯವೇ ಸರಿ. ಇದೂ ಅಲ್ಲದೆ ನಮ್ಮ ದೇಶದಲ್ಲಿ ಅನೇಕರು ವ್ಯವಸಾಯವನ್ನೇ ತಮ್ಮ ಜೀವನೋಪಾಯದ ಮಾರ್ಗವೆಂದು ಕೈಗೊಂಡಿರುವುದರಿಂದ ಗಿಡಗಳ ಬಾಳ್ವಿಕೆ, ಬೆಳೆವಳಿಕೆ, ಮುಂತಾದ ವಿಷಯ ಗಳನ್ನು ಬಾಲಕರಾಗಿರುವಾಗ ತಿಳಿಯಬೇಕಾದುದು ಅವಶ್ಯಕ". ಇಲ್ಲಿ ಸುತ್ತಲ ಪರಿಸರದ ಬಗ್ಗೆ ವಿದ್ಯಾರ್ಥಿಗಳು ತಿಳಿದುಕೊಳ್ಳಬೇಕಾದ್ದರ ಆವಶ್ಯಕತೆ ಇದೆ ಎಂಬ ಲೇಖಕರ ಕಾಳಜಿ ಮೆಚ್ಚಬೇಕಾದ್ದು. ತತ್ತ್ವಸಿದ್ಧಾಂತಗಳಿಗಿಂತ


ಬಾಲಕರ ವನಸ್ಪತಿಶಾಸ್ತ್ರ.

ಪ್ರಾಯೋಗಿಕ ತಿಳಿವಳಿಕೆ, ಪ್ರತ್ಯಕ್ಷಜ್ಞಾನ ಅಮೂಲ್ಯ ವಾದದ್ದು ಎಂಬ ಎಚ್ಚರವನ್ನು ಓದುಗರಿಗೆ ಮುಂದಿನ ವಾಕ್ಯವೃಂದದಲ್ಲಿ ಸೂಚಿಸಿದ್ದಾರೆ : "ಈ ಪುಸ್ತಕವನ್ನು ಸಾಧಾರಣ ಪಾಠ ಪುಸ್ತಕವನ್ನು ಓದುವಂತೆ ಓದಿ ವಿಷಯಗಳನ್ನು ಬಾಯಿಪಾಠ ಮಾಡ ಕೂಡದು. ಹಾಗೆ ಮಾಡು ವುದರಿಂದ ಹೆಚ್ಚು ಪ್ರಯೋಜನ ವಾಗಲಾರದು. ಇದರಲ್ಲಿ ವಿವರಿಸಿರುವ ವಿಷಯಗಳನ್ನು, ಗಿಡಗಳನ್ನು ಶೇಖರಿಸಿ ಪ್ರತ್ಯಕ್ಷವಾಗಿ ಪ್ರತಿಯೊಬ್ಬರೂ ಪರಿಶೋಧಿಸಿ ತಿಳಿಯಬೇಕು. ಎಲ್ಲಾ ಕಡೆಗಳಲ್ಲಿಯೂ ಸಾಧಾರಣವಾಗಿ ಸಿಕ್ಕುವ ಗಿಡಗಳನ್ನೇ ಪ್ರಾಯಿಕವಾಗಿ ಈ ಪುಸ್ತಕದಲ್ಲಿ ನಿದರ್ಶನಕ್ಕಾಗಿ ತೆಗೆದುಕೊಂಡಿರುವುದರಿಂದ ಅವುಗಳನ್ನು ಶೇಖರಿಸುವುದರಲ್ಲಿ ಕಷ್ಟವಿರಲಾರದು"

ಈ ಕೃತಿಯ ವಿಷಯಾನುಕ್ರಮಣಿಕೆಯಲ್ಲಿರುವ 14 ಅಧ್ಯಾಯಗಳು ಇಂತಿವೆ : **1. ಸಸ್ಯಗಳೂ ಜೀವವುಳ್ಳವು 2. ಗಿಡಗಳೂ, ಅವುಗಳ ಅವಯವಗಳೂ 3. ಬೀಜ, ಮೊಳೆಯುವಿಕೆ ಮತ್ತು ಮೊಳೆಗಳು 4. ಬೇರು 5. ಪ್ರಕಾಂಡವೂ ಕೊಂಬೆಗಳೂ 6. ಎಲೆ 7. ಪುಷ್ಪಮಂಜರಿ 8. ಹೂವೂ, ಅದರ ಭಾಗಗಳೂ 9. ಪುಷ್ಪರೇಣುಸ್ಪರ್ಷಣವೂ, ಗರ್ಭಧಾರಣವೂ 10. ಕಾಯಿಯೂ, ಬೀಜವೂ 11. ನೀರು ಒಳಹೊಗುವುದೂ, ಅದರ ಚಲನೆಯೂ 12. ಗಿಡಗಳ ಪೋಷಣೆ 13. ಗಿಡಗಳ ಬೆಳೆವಳಿಕೆ, ಉಸಿರಾಡುವುದು, ಮತ್ತು ಅವುಗಳ ಭಾಗಗಳ ಚಲನೆ 14. ಗಿಡಗಳ ಜಾತಿಗಳು.**

ಈ ಪುಸ್ತಕದಲ್ಲಿ ಒಂದು ಬೀಜವನ್ನು ಬಿತ್ತಿ ಅದು ಫಲ ನೀಡುವವರೆಗಿನ ವಿವಿಧ ಹಂತದ ಬೆಳೆವಣಿಗೆಗಳ ಎಲ್ಲ ರೀತಿಯ ಸ್ವರೂಪವನ್ನು ಸಮಗ್ರವಾಗಿ ಪ್ರತ್ಯಕ್ಷ ಪ್ರಮಾಣ, ಪ್ರಯೋಗಗಳ ಮೂಲಕ ಮೂಲತತ್ತ್ವ ಸಿದ್ಧಾಂತಗಳೊಂದಿಗೆ ತುಂಬಾ ಒಳ್ಳೆಯ ಸುಸೂತ್ರವಾದ ಕನ್ನಡದಲ್ಲಿ ನಿರೂಪಿಸಲಾಗಿದೆ. ವಿಜ್ಞಾನವಿಷಯಗಳನ್ನು ಕನ್ನಡದಲ್ಲಿ ಹೇಳುವುದಕ್ಕೆ ಸಾಧ್ಯವೇ ಇಲ್ಲ ಎಂಬುವವರಿಗೆ ಈ ವನಸ್ಪತಿಶಾಸ್ತ್ರ ಕೃತಿಯ ಜೊತೆಗೆ ಗಣಿತಾರ್ಣವ, ಅಣುಭೌತವಿಜ್ಞಾನ, ಜ್ಯೋತಿರ್ವಿನೋದಿನಿ ಮುಂತಾದ 20ನೆಯ ಶತಮಾನದ ಪೂರ್ವಾರ್ಧ ಮತ್ತು 19ನೆಯ ಶತಮಾನಾವಧಿಯ ಹತ್ತಾರು ವಿಜ್ಞಾನ ಪುಸ್ತಕಗಳು ತಕ್ಕ ಉತ್ತರದೋಪಾದಿಯಲ್ಲಿವೆ

ರಂಗಾಚಾರ್ಯರ ನಿರೂಪಣೆ ಸರಳವಾಗಿ ಮನದಟ್ಟುವಂತಿದೆ ಎಂಬುದಕ್ಕೆ 5ನೆಯ ಅಧ್ಯಾಯದ **ಪ್ರಕಾಂಡವೂ ಕೊಂಬೆಗಳೂ** ಎಂಬ ಅಧ್ಯಾಯದ ಆರಂಭ ಭಾಗವನ್ನು ಗಮನಿಸಬಹುದು : "ಒಂದು ಗಿಡದಲ್ಲಿ ಭೂಮಿಯ ಮೇಲೆದ್ದು

ಗಾಳಿಯೂ ಬೆಳಕೂ ತಗಲುವಂತೆ ಬೆಳೆಯುವ ಭಾಗವು ಪ್ರಕಾಂಡವೆನಿಸುವುದು. ಪ್ರಕಾಂಡದ ಭಾಗಗಳೂ ತಳಭಾಗದ ಮರವೂ ಅದರಿಂದ ಎಡೆಬಿಡದೆ ಎಲ್ಲಾ ಕಡೆಗಳಲ್ಲಿಯೂ ಹರಡಿಕೊಂಡು ಬೆಳೆಯುವ ಕೊಂಬೆಗಳಾಗಿರುವುವು. ಒಂದು ಮರದ ಪ್ರಕಾಂಡವನ್ನು ದೂರದಿಂದ ನೋಡಿದಾಗ ಅದರಲ್ಲಿರುವ ಎಲೆಗಳು ಎಡಬಿಡದೆ ಒತ್ತಾಗಿ ಹಸುರಾಗಿ ಕಂಡುಬರುವುವು. ಅಲ್ಲದೆ ಎಲೆಗಳನ್ನು ವಹಿಸಿರುವ ಕಾಂಡಗಳಾಗಲಿ, ಕೊಂಬೆಗಳಾಗಲಿ ಕಾಣಿಸುವುದಿಲ್ಲ. ಹತ್ತಿರಕ್ಕೆ ಹೋದ ಮೇಲೆ ಇವು ಚೆನ್ನಾಗಿ ಕಾಣಿಸುವುವು. ಮರಗಳ ಕೊಂಬೆಗಳು, ಎಲೆಗಳು ಇವುಗಳ ಭಾರವನ್ನೆಲ್ಲಾ ಅಡಿಯ ಮರವು ಹೊರಬೇಕಾಗಿರುವುದರಿಂದ ಅದು ಸಾಧಾರಣವಾಗಿ ದಪ್ಪವಾಗಿಯೂ ಎತ್ತರವಾಗಿಯೂ ಇರುವುದು ಸ್ವಭಾವವಾಗಿದೆ. ದೊಡ್ಡ ಕೊಂಬೆಗಳೂ ಭಾರವನ್ನು ಹೊರಬೇಕಾಗಿರುವುದರಿಂದ ಅವು ಕೂಡಾ ದಪ್ಪವಾಗಿ ಗಟ್ಟಿಯಾಗಿಯೇ ಇರಬೇಕಾಗಿರುವುವು. ದೊಡ್ಡ ಕೊಂಬೆಗಳಲ್ಲಿಯೂ ಅಡಿಯ ಮರದಲ್ಲಿಯೂ ಗಟ್ಟಿಯಾಗಿರುವ ಮರಭಾಗವು ಹೆಚ್ಚಾಗಿರುವುದರಿಂದ ಇವು ಬಲವುಳ್ಳವುಗಳಾಗಿರುವುವು". ಗಹನವಾದ ವಿಷಯ ನಿರೂಪಣೆಯಲ್ಲಿಯೂ ಕೂಡ ಲೇಖಕರು ಸಾಮಾನ್ಯಜನರಿಗೂ ಅರ್ಥವಾಗುವ ದಿನನಿತ್ಯದ ಬಳಸು ಕನ್ನಡದಲ್ಲಿ ಖಚಿತವಾಗಿ ಓದುಗರಿಗೆ ನಿಖರವಾದ ಜ್ಞಾನದ ತಿಳುವಳಿಕೆ ತಲುಪುವಂತೆ ಬರೆದಿರುವುದು ಸಾಧಾರಣ ಸಂಗತಿಯೇನಲ್ಲ.

1895ರಲ್ಲಿ **ಲಕ್ಕೂರ ಸುಬ್ಬರಾಯ** ಅವರು ಬತ್ತ, ರಾಗಿ, ಗೋಧಿ, ಕಾಫಿ, ಟೀ, ಇತ್ಯಾದಿ 49 ಬಗೆಯ ಸಸ್ಯಗಳನ್ನು ಬೆಳೆಯುವ ಕ್ರಮ, ಉಪಯೋಗಗಳ ವಿವರಣೆ ಕುರಿತು ಬರೆದ **"ಸಚಿತ್ರ ವನಸ್ಪತಿಶಾಸ್ತ್ರ"** ಪುಸ್ತಕದ ನಂತರದ ಸಸ್ಯವಿಜ್ಞಾನವನ್ನು ಕುರಿತ ಮಹತ್ವದ ಕೃತಿ ಇದು. ಇದೇ ಕೆ.ರಂಗಾಚಾರ್ಯರು 1909ರಲ್ಲಿ "ಓಷಧಿಶಾಸ್ತ್ರ" ಎಂಬ ಮತ್ತು 1927ರಲ್ಲಿ **"ಗ್ರಾಮ ಪಾಠಶಾಲೆಯ ವಾಚಕ ಪುಸ್ತಕ, ಪೈರುಗಿಡಗಳು(ಸಚಿತ್ರ)"** ಎಂಬ ಸಸ್ಯಶಾಸ್ತ್ರವನ್ನು ಕುರಿತ ಇನ್ನೆರಡು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಆ ಕಾಲಮಾನದಲ್ಲಿ ವಿವಿಧ ಜ್ಞಾನಶಾಖೆಗಳಲ್ಲಿ ಕನ್ನಡ ಭಾಷೆಯಲ್ಲಿ ಅನೇಕ ಶಿಸ್ತುಗಳನ್ನು ಕುರಿತ ಗುಣಮಟ್ಟದಿಂದ ಬರೆದ ಕೃತಿಗಳು ಒಳ್ಳೆಯ ರಚನೆಗಳಾಗುತ್ತಿದ್ದವು ಎಂಬುದಕ್ಕೆ ಒಂದು ಚಿಕ್ಕ ನಿದರ್ಶನವಾಗಿ ಈ **"ಬಾಲಕರ ವನಸ್ಪತಿಶಾಸ್ತ್ರ"** ಕೃತಿಯನ್ನು ಗಮನಿಸಬಹುದು. ಉಲ್ಲಾಸದಾಯಕವಾಗುವಂತೆ ಓದಿಸಿಕೊಂಡು ಹೋಗುವ ಗುಣವುಳ್ಳ ಇದು ಒಂದು ಅಪೂರ್ವ ಕೃತಿ.

## ಪಾಟೀಲ ತಿರುಮಲರಾಯರ
## ಆಕಾಶದೊಳಗಿನ ಅದ್ಭುತ ಚಮತ್ಕಾರಗಳು ಅಥವಾ ಜ್ಯೋತಿಶ್ಶಾಸ್ತ್ರ (1931)

**ಆಕಾಶದೊಳಗಿನ ಅದ್ಭುತ ಚಮತ್ಕಾರಗಳು** ಅಥವಾ **ಜ್ಯೋತಿಶ್ಶಾಸ್ತ್ರ** ಎನ್ನುವ ಈ ಕೃತಿಯನ್ನು ರಚಿಸಿರುವವರು **ಪ್ರೊಫೆಸರ್ ಪಾಟೀಲ ತಿರುಮಲರಾವ ಮಧ್ವರಾವ, ಎಂ.ಎ., ಕರ್ನಾಟಕ ಕಾಲೇಜು, ಧಾರವಾಡ,** ಅವರು. ಅಷ್ಟಮ ಡೆಮಿ ಆಕಾರದ 8+104 ಪುಟಗಳ 1 ರುಪಾಯಿ 2 ಆಣೆ ಕ್ರಯದ ಈ ಪುಸ್ತಕವು 1931ರಲ್ಲಿ ಪ್ರಕಟಗೊಂಡಿದೆ. ಬೆಂಗಳೂರು ಸಿಟಿಯ **ಬೆಂಗಳೂರು ಪ್ರೆಸ್**‌ನಲ್ಲಿ ಮುದ್ರಣಗೊಂಡ ಈ ಕೃತಿಯನ್ನು ಧಾರವಾಡದ **ನವಜೀವನ ಸಂಘ**ದ ಪರವಾಗಿ, **ನವಜೀವನ ಗ್ರಂಥಭಾಂಡಾರ**ದ–1ನೆಯ ಗ್ರಂಥವಾಗಿ ಆ ಸಂಸ್ಥೆಯ ಸಂಪಾದಕರು ಮತ್ತು ಪ್ರಕಾಶಕರು ಆದ ಕನ್ನಡದ ಕುಲಪುರೋಹಿತ **ಶ್ರೀ ಆಲೂರ ವೆಂಕಟರಾಯರು,** ಬಿ.ಎ.,ಎಲ್‌ಎಲ್.ಬಿ. ಅವರು ಪ್ರಕಟಿಸಿರುತ್ತಾರೆ. ಈ ಕೃತಿಯ ಎಲ್ಲ ಹಕ್ಕುಬಾಧ್ಯತೆಗಳು **ಶ್ರೀ ಆಲೂರ ವೆಂಕಟರಾಯರಿ**ಗೆ ಸೇರಿವೆ. ಪುಸ್ತಕದ ಮುಖ ಪುಟದಲ್ಲಿ **ಬೃಹತ್ ಸಂಹಿತೆ**ಯಿಂದ ಆಯ್ದ ಒಂದು ಸೂಕ್ತ ಶ್ಲೋಕವಿದೆ.



**ಖಗೋಳ ವಿಜ್ಞಾನ**ಕ್ಕೆ ಮೊದಲಿಗೆ **ಜ್ಯೋತಿಶ್ಶಾಸ್ತ್ರ** ವೆಂಬ ಹೆಸರಿತ್ತು. ಕನ್ನಡ ಭಾಷೆಯಲ್ಲಿ **ಖಗೋಲ ವಿಜ್ಞಾನ**ವನ್ನು ಕುರಿತು 1874ರಿಂದಲೇ ಪುಸ್ತಕಗಳು ಹೊರಬಂದಿವೆ. 1874ರಲ್ಲಿ **ಚಿಂತಾಮಣಿ ರಘುನಾಥಾಚಾರಿ** ಎನ್ನುವವರು **ಶುಕ್ರಗ್ರಸ್ತ ಸೂರ್ಯಗ್ರಹಣ(?)** ಎಂಬ ಹೆಸರಿನ ಒಂದು

ಕೃತಿಯನ್ನು ರಚಿಸಿದ್ದು ಅವರು ಇದರ ಇಂಗ್ಲಿಷ್ ಮತ್ತು ಉರ್ದು ಅವತರಣಿಕೆಗಳನ್ನೂ ಹೊರ ತಂದಿರುತ್ತಾರೆ. ಇದರ ಕನ್ನಡ ಮತ್ತು ಇಂಗ್ಲಿಷ್ ಅವತರಣಿಕೆಗಳನ್ನು ದೀರ್ಘ ವಿವರಣೆಗಳೊಂದಿಗೆ ಬೆಂಗಳೂರಿನ **ಜವಹರಲಾಲ್ ನೆಹರೂ ತಾರಾಲಯ** ದ ನಿರ್ದೇಶಕರಾದ **ಡಾ॥ ಬಿ. ಎಸ್. ಶೈಲಜ** ಅವರು **ಬೆಂಗಳೂರ್ ಅಸೋಸಿಯೇಷನ್ ಆಫ್ ಸೈನ್ಸ್ ಎಜುಕೇಷನ್** ವತಿಯಿಂದ 2012ರಲ್ಲಿ ಪ್ರಕಟಿಸಿರುತ್ತಾರೆ. 1884ರಲ್ಲಿ ಮಂಗಳೂರಿನ **ಬಾಸೆಲ್ ಮಿಷನ್ ಬುಕ್ ಅಂಡ್ ಟ್ರಾಕ್ಟ್ ಡಿಪಾಸಿಟರಿ**ಯಿಂದ **ಗ್ರಹಣಗಳಾಗುವುದು ಹ್ಯಾಗೆ?** ಮತ್ತು **ಗ್ರಹಗಳೆಂದರೇನು?** ಹಾಗೂ 1891ರಲ್ಲಿ **ಚುಕ್ಕಿಗಳೂ ಬಾಲಚುಕ್ಕಿಗಳೂ** ಎಂಬ 3 ಪುಸ್ತಕಗಳು, 1895ರಲ್ಲಿ **ವೆಸ್ಲಿಯನ್ ಮಿಷನ್ ಪ್ರೆಸ್**ನಿಂದ **ಗ್ರಹಣಗಳು ಸಚಿತ್ರ**, 1914ರಲ್ಲಿ **ಸಿ.ಚಿಕ್ಕಣ್ಣ** ಅವರ **ದೃಕ್ ಸಿದ್ಧಾಂತ ದರ್ಪಣಂ**, 1918ರಲ್ಲಿ **ನಂಗಪುರಂ ವೆಂಕಟೇಶ ಅಯ್ಯಂಗಾರ್** ಅವರ **ಸೂರ್ಯ ಸಚಿತ್ರ** 1921ರಲ್ಲಿ **ಎಂ. ರಾಮಬ್ರಹ್ಮ** ಅವರ **ಸೃಷ್ಟಿವ್ಯಾಪಾರಗಳ ನಿರೀಕ್ಷಣೆ** ಹೊರಬಂದಿದೆ. 1928ರಲ್ಲಿ **ಎಚ್. ಈ. ಲಿಂಗಣ್ಣ** ಅವರ **ಸಚಿತ್ರ ಖಗೋಳ ಬಾಲಬೋಧೆ**, 1930 ರಲ್ಲಿ **ಸಿ.ಚಿಕ್ಕಣ್ಣ** ಅವರ **ಖಗೋಳ ವಿನೋದಗಳು**, 1931ರಲ್ಲಿ **ನಂಗಪುರಂ ವೆಂಕಟೇಶ ಅಯ್ಯಂಗಾರ್**ರ **ಜೋತಿರ್ವಿನೋದಿನಿ**, ಮುಂತಾದ ಹಲವಾರು ಸಮೃದ್ಧ ಕೃತಿಗಳು **ಖಗೋಳ ವಿಜ್ಞಾನ**ವನ್ನು ಕುರಿತು ಪ್ರಕಟವಾಗಿವೆ.

ಪ್ರಕಾಶಕರ ಪ್ರಸ್ತಾವನೆಯಲ್ಲಿ **ಆಲೂರ ವೆಂಕಟರಾಯರು** "ಶ್ರೀ ಪರಮಾತ್ಮನ ಕೃಪೆಯಿಂದ **ನವಜೀವನ ಗ್ರಂಥಭಾಂಡಾರ**ದ ಮೊದಲನೆಯ ಗ್ರಂಥವಾದ **'ಆಕಾಶದೊಳಗಿನ ಅದ್ಭುತ ಚಮತ್ಕಾರಗಳು'** ಎಂಬೀ **ಜ್ಯೋತಿಶ್ಶಾಸ್ತ್ರ**ದ ಗ್ರಂಥವು ಈಗ ಹೊರಟಿದೆ. ಗಹನವಾದ ವಿಷಯಗಳನ್ನು ಅತ್ಯಂತ ಸುಲಭವಾಗಿಯೂ ಮನೋರಂಜಕವಾಗಿಯೂ ತಿಳಿಹಿಸುವುದೇ ಈ ಗ್ರಂಥಭಾಂಡಾರದ ಮುಖ್ಯ ಉದ್ದೇಶ. ದೊಡ್ಡ ಗ್ರಂಥಗಳನ್ನು ಬರೆಯುವುದಕ್ಕಿಂತಲೂ ಇಂತಹ ಸಣ್ಣ ಪುಸ್ತಕಗಳನ್ನು ಬರೆಯುವುದು ಬಹಳ ಬಿಗಿಯಾದ ಕೆಲಸವೆಂಬುದನ್ನು ಸುಶಿಕ್ಷಿತರಿಗೆ ಹೇಳಬೇಕಾದುದಿಲ್ಲ. ಅದರಲ್ಲಿಯೂ ಕರ್ನಾಟಕದಂಥ ಶಿಕ್ಷಣ ಪ್ರಸಾರವು ತೀರ ಕಡಿಮೆಯಿರುವ ಪ್ರಾಂತದಲ್ಲಿ ಸಾಮಾನ್ಯರಿಗೂ ಸುಬೋಧವಾಗುವಂತೆ ಬರೆಯುವುದು ಬಹಳ ಕಠಿನ ಕೆಲಸ. ನಾವೇನೋ ಅದನ್ನು ಆದಷ್ಟು ಮಟ್ಟಿಗೆ ತೃಪ್ತಿಕರವಾಗುವಂತೆ

ಮಾಡುವುದಕ್ಕೆ ಪ್ರಯತ್ನಿಸಿರುವೆವು." ಎಂದು ತಮ್ಮ ಸಂಸ್ಥೆ **ನವಜೀವನ ಸಂಘ**ದ ಉದ್ದೇಶವನ್ನು ಸ್ಪಷ್ಟೀಕರಿಸಿರುತ್ತಾರೆ.

ಮುನ್ನುಡಿಯಲ್ಲಿ **ತಿರುಮಲರಾಯರು** "ವಿಷಯವನ್ನು ಏನೂ ಅರಿಯದವರಿಗೆ ಕೂಡ ವಿಷಯಜ್ಞಾನವುಂಟಾಗಬೇಕೆಂದು ತಿಳಿದು ಈ ಗ್ರಂಥವು ಆದಷ್ಟು ಸುಲಭವಾಗಿ ಬರೆಯಲ್ಪಟ್ಟಿದೆ. **ಜ್ಯೋತಿಶ್ಶಾಸ್ತ್ರ**ದ ಜ್ಞಾನವನ್ನು ವಿಶೇಷವಾಗಿ ಮಾಡಿಕೊಡುವುದಕ್ಕಿಂತ ಜಿಜ್ಞಾಸೆಯನ್ನು ಹುಟ್ಟಿಸುವುದೇ ಮುಖ್ಯ ಧ್ಯೇಯವಾಗಿದೆ. '**ಆಕಾಶರಾಜ ಪಟ್ಟಣ ಅಥವಾ ಖಗೋಲ**' ಎಂಬೊಂದು ಪ್ರಕರಣದಲ್ಲಿ ಮಾತ್ರ ತತ್ವಗಳನ್ನು ತಿಳಿಸುವ ಪ್ರಯತ್ನ ಮಾಡಲ್ಪಟ್ಟಿದೆ. ಅದು ತುಸು ಬಿಗಿಯಾಗಿದ್ದರೂ ಅಪರಿಹಾರ್ಯವಾಗಿದೆ. ಮಿಕ್ಕವುಗಳು ಮನೋರಂಜಕವಾಗಿವೆ. ಜಿಜ್ಞಾಸೆಯು ಜ್ಞಾನದ ಮೂಲವು, ಜ್ಞಾನದಿಂದ ಪ್ರಗತಿಯು, ಪ್ರಗತಿಯಿಂದ ಸೌಖ್ಯವುಂಟಾಗುವುದು. ಈ ಗ್ರಂಥವು ಹೀಗೆ ಸೌಖ್ಯಸಾಧನದ ಒಂದು ಮಾರ್ಗವಾಗಲೆಂಬುದಿಷ್ಟೆ ನನ್ನ ಬೇಡಿಕೆ." ಎಂದು ತಮ್ಮ ಕೃತಿಯ ಧ್ಯೇಯೋದ್ದೇಶಗಳನ್ನು ಹೇಳಿರುತ್ತಾರೆ.

ಮುನ್ನುಡಿಯಲ್ಲಿ ಇನ್ನೊಂದೆಡೆ ಗ್ರಂಥಕರ್ತರು " ಈ ಪುಸ್ತಕದ 4ನೆಯ ಅಧ್ಯಾಯದಲ್ಲಿ ಜ್ಯೋತಿರ್ದೇವಿಯ ಮುಂದೆ ಆಕೆಯ ಭಕ್ತರು ಮಾಡಿದ ತಪಶ್ಚರ್ಯವು ವರ್ಣಿಸಲ್ಪಟ್ಟಿರುವುದು. **ಶ್ರೀ ಆಲೂರ ವೆಂಕಟರಾಯರು** ಕರ್ನಾಟಕ ಶಾರದೆಯನ್ನು ಕುರಿತು ಮಾಡಿದ ಕಡುತರ ತಪಶ್ಚರ್ಯದ್ದೇ ಈ ಪುಸ್ತಕವು ದೃಶ್ಯಫಲವಾಗಿದೆ." ಎಂದು ಹೃದಯಪೂರ್ವಕವಾಗಿ **ಆಲೂರ ವೆಂಕಟರಾಯರ** ಪ್ರೇರೇಪಣೆಯನ್ನು ಸ್ಮರಿಸಿಕೊಳ್ಳುತ್ತಾರೆ.

ಈ ಪುಸ್ತಕದ ಅನುಕ್ರಮಣಿಕೆಯಲ್ಲಿನ 16 ಪ್ರಕರಣಗಳು ಹೀಗಿವೆ : **ಅದ್ಭುತವಾದ ಆನಂದ**, ಹಳೆಯ ಜ್ಞಾನಸಂಪತ್ತು, **ಇಂದಿನ ಸ್ಥಿತಿ**, ತಪಶ್ಚರ್ಯ, **ಆಕಾಶರಾಜ ಪಟ್ಟಣ ಅಥವಾ ಖಗೋಲ**, ಆಕಾಶರಾಜ ಅಥವಾ ಸೂರ್ಯ, **ಚಂದ್ರ**, ನಮ್ಮ ಮನೆ, **ಸೂರ್ಯನ ಸಂಸಾರ ಅಥವಾ ಗ್ರಹಗಳು**, ಗ್ರಹಣಗಳು, ನಕ್ಷತ್ರಗಳು, **ವಿಶ್ವದ ಉತ್ಪತ್ತಿ**, ಆಧುನಿಕ ವೇಧಯಂತ್ರಗಳು, **ಪ್ರಾಚೀನ ಇತಿಹಾಸ**, ಭವಿಷ್ಯ ಪುರಾಣ, **ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ** ಹಾಗೂ ಪರಿಶೀಷ್ಟ-1 ರಾಶಿಗಳು, ನಕ್ಷತ್ರಗಳು. 6ನೆಯ **ಆಕಾಶರಾಜ ಅಥವಾ ಸೂರ್ಯ** ಎಂಬ ಪ್ರಕರಣದಲ್ಲಿ ಮಾತ್ರ ಎರಡು ಪೂರಕ ಚಿತ್ರಗಳನ್ನು ನೀಡಲಾಗಿದೆ. **ಅದ್ಭುತವಾದ ಆನಂದ** ಎನ್ನುವ ಪ್ರಕರಣದ ಒಂದು ವಾಕ್ಯವೃಂದ ಇಂತಿದೆ : " **ಜ್ಯೋತಿಶ್ಶಾಸ್ತ್ರ**ವೆಂದರೆ ಈ ನಭೋಮಂಡಲದ ಗೂಢವನ್ನು ಅರಿತುಕೊಳ್ಳುವ ಶಾಸ್ತ್ರವು.

ಇದು ನಮ್ಮ ವಿಶ್ವದ ಕಲ್ಪನೆಯನ್ನು ವಿಶಾಲವಾಗಿ ಮಾಡಿದೆ. ಪೃಥ್ವಿಯೆಂದರೆ ದೊಡ್ಡದೊಂದು ಲೋಕ: ಅದರ ಸುತ್ತಲೂ ತಿರುಗುವ ಸೂರ್ಯಚಂದ್ರರೆಂದರೆ ತೇಜಃಪುಂಜವಾದ ಎರಡು ಚಿಕ್ಕ ಗೋಲಗಳು: ತಾರಕೆಗಳೆಂದರೆ ಆಕಾಶದಲ್ಲಿ ಹೊನ್ನೆಯ ಹುಳುಗಳಂತೆ ಮಿಣಿಮಿಣಿ ಮಿನುಗುವ ಚಿಕ್ಕ ಜ್ಯೋತಿಗಳು–ಎಂಬ ಕಲ್ಪನೆಯು ಈಗ ಹೋಗಿದೆ, **ಜ್ಯೋತಿಶ್ಶಾಸ್ತ್ರ**ದ ಶೋಧಗಳಿಂದ ಈ ವಿಶ್ವವೆಂಬುದು ಅನಂತವಾದುದೂ ಅಪಾರವಾದುದೂ ಆಗಿರುತ್ತದೆಂಬ ಮಾತು ನಮಗೆ ಗೊತ್ತಾಗಿದೆ. ಮೊದಲು ವಾಮನಮೂರ್ತಿಯಾಗಿದ್ದು ಈಗ ಅದು ಬೆಳೆದು ಪೃಥ್ವಿ, ಅಂತರಿಕ್ಷ ಮತ್ತು ಆಕಾಶಗಳನ್ನು ಅಳೆಯುವ ತ್ರಿವಿಕ್ರಮಮೂರ್ತಿಯಾಗಿದೆ. ಹಿರಿಯರು ಮಕ್ಕಳಿಗೆ ದೊಡ್ಡವರಾಗಿರೆಂದೂ ಆಯುಷ್ಮಂತರಾಗಿರೆಂದೂ ಆಶೀರ್ವದಿಸುವುದಿಲ್ಲವೇ ? ಹಾಗೆ ನಮ್ಮ **ಜ್ಯೋತಿಶ್ಶಾಸ್ತ್ರ**ವು ನಮ್ಮ ವಿಶ್ವವನ್ನು ದೊಡ್ಡದಾಗಿರಲೆಂದು ಹರಸಿರುವುದು. **ಭೂಗರ್ಭಶಾಸ್ತ್ರ**ವು ಅದಕ್ಕೆ ಆಯುಷ್ಮಂತವಾಗೆಂದು ಹರಸುವುದು. ಎಂದರೆ **ಜ್ಯೋತಿಶ್ಶಾಸ್ತ್ರ**ದ ಶೋಧಗಳಿಂದ ನಮ್ಮ ವಿಶ್ವದ ಕಲ್ಪನೆಯು ಈಗ ಮಿತಿಮೀರಿ ಬೆಳೆದಿದೆ. ಭೂಮಿಯ ಹೊಟ್ಟೆಯೊಳಗಿರುವ ಪದಾರ್ಥಗಳ ಶೋಧಗಳಿಂದ ಪೃಥ್ವಿಯ ಆಯುಷ್ಯವು ಬೆಳೆದು, ಅದು ಹುಟ್ಟಿ ಲಕ್ಷಾವಧಿ ವರುಷಗಳಾಗಿರಬೇಕೆಂದು ಸಿದ್ಧವಾಗಿದೆ. ಈ ಪ್ರಕಾರವಾಗಿ ನಮ್ಮ ವಿಶ್ವದ ಆಕಾರವನ್ನು ಅಸಂಖ್ಯವಾಗಿ ಬೆಳೆಸಿದ ಈ **ಜ್ಯೋತಿಶ್ಶಾಸ್ತ್ರ**ವನ್ನು ತಿಳಿದುಕೊಳ್ಳುವ ಇಚ್ಛೆಯು ಯಾರಿಗೆ ಉಂಟಾಗಲಿಕ್ಕಿಲ್ಲ ? ". ಇಲ್ಲಿನ ಕನ್ನಡದ ಬರೆವಣಿಗೆಯ ಶೈಲಿಯು ಒಳ್ಳೆಯ ಸೃಜನಶೀಲ ನಿರೂಪಣೆಯ ರೀತಿಯಲ್ಲಿದ್ದು ವಿಷಯ ಮನನ ಮಾಡಿಕೊಳ್ಳುವವರಿಗೆ ಸುಲಭವಾಗಿ ಗ್ರಹಿಕೆಗೆ ದಕ್ಕುತ್ತದೆ.

ವಿಜ್ಞಾನದ ಭಾಷೆಯು ಖಚಿತವಾಗಿಯೂ ಕರಾರುವಾಕ್ಕಾಗಿಯೂ ವಸ್ತುನಿಷ್ಠವಾಗಿಯೂ ಇರಬೇಕು. ಇವೆಲ್ಲದರ ಜೊತೆಗೆ ಭಾಷೆಯು ಉಲ್ಲಾಸದಾಯಕವಾಗಿರುವಂತೆ ನಿರೂಪಿಸಿರುವುದು **ಪಾಟೀಲ ತಿರುಮಲ ರಾಯರ** ವೈಶಿಷ್ಟ್ಯ.

ಮೇಲಿನ ಮಾತಿಗೆ ಪೋಷಕವಾಗಿ ಪುಸ್ತಕದ ಕೊನೆಯಲ್ಲಿ ಬರುವ ಕೊನೆಯ **ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ** ಎನ್ನುವ ಅಧ್ಯಾಯದಲ್ಲಿ "ಆಕಾಶದೊಳಗಿನ ಚಮತ್ಕಾರಗಳನ್ನು ಕುರಿತು ಮನುಷ್ಯನ ವಿಚಾರ ಮಾಡಿದ ಹಾಗೆಲ್ಲ ಜಗದೀಶ್ವರನ ಈ ಲೀಲೆಗಳ ವಿಷಯವಾಗಿ ಹೆಚ್ಚು ಹೆಚ್ಚು ಅದ್ಭುತವೂ

ಆನಂದವೂ ಉಂಟಾಗುವುವು. ಮನುಷ್ಯನು ಅವುಗಳನ್ನು ಹಿಡಿಯ ಹೋದಂತೆ ಅವನಿಂದ ಅವು ಮತ್ತಿಷ್ಟು ದೂರವೆ ಓಡುವಂತೆ ತೋರುತ್ತವೆ. ಮೊದಲು, ನಮ್ಮ ಪೃಥ್ವಿಯ ಲೀಲೆಯೆ ಅದ್ಭುತವಾಗಿದೆ. ಅದಕ್ಕಿಂತ ಚಂದ್ರನ ಲೀಲೆಯು ಅದ್ಭುತ. ಬುಧ ಶುಕ್ರ ಗುರುಗಳ ಲೀಲೆಯು ಅದಕ್ಕೂ ಅದ್ಭುತವು. ಸೂರ್ಯನ ಲೀಲೆಯು ಅಗಾಧವಾದ ಅದ್ಭುತವು. ನಕ್ಷತ್ರಗಳ ಲೀಲೆಯನ್ನಂತೂ ಬಣ್ಣಿಸಲಳವಲ್ಲ. ನಕ್ಷತ್ರಗಳ ತಂದೆಯಾದ ತೇಜೋರಾಶಿಗಳ ಅದ್ಭುತವಾದ ಲೀಲೆಯು ಅತರ್ಕ್ಯವಾಗಿದೆ. ಈ ಅದ್ಭುತ ಪರಂಪರೆಯನ್ನು ಕುರಿತು ಯೋಚಿಸುತ್ತ ಹೋದಂತೆ ಮನುಷ್ಯನ ಮನಸ್ಸು ಕೌತುಕ ಸಾಗರದಲ್ಲಿ ನಿಮಗ್ನವಾಗಿ ಹೋಗುವುದೇನಾಶ್ಚರ್ಯ?" ಎನ್ನುವ ಈ ಸಾಲುಗಳನ್ನು ಗಮನಿಸಬಹುದು.

ಪರಿಶಿಷ್ಟದಲ್ಲಿ **ಮೇಷ ವೃಷಭ** ಮುಂತಾದ 12 ರಾಶಿಗಳಿಗೂ, **ಅಶ್ವಿನಿ ಭರಣಿ** ಮುಂತಾದ 27 ನಕ್ಷತ್ರಗಳಿಗೆ ಇಂಗ್ಲಿಷ್ ಪರ್ಯಾಯಗಳನ್ನೂ ನೀಡಿರುವುದಲ್ಲದೆ ತಾವು ಅಧ್ಯಯನ ಮಾಡಿದ ಹಲವಾರು ಇಂಗ್ಲಿಷ್ ಕೃತಿಗಳ ಪಟ್ಟಿಯನ್ನು ನೀಡಿರುತ್ತಾರೆ. ಹೆಚ್ಚಿನ ಅಧ್ಯಯನ ಮಾಡುವ ಓದುಗರಿಗೆ ಇದರಿಂದ ತುಂಬ ಪ್ರಯೋಜನವಿದೆ. ಸೂರ್ಯ ಚಂದ್ರರಿಗೆ ಇರುವ ಅಗಾಧ ವ್ಯತ್ಯಾಸವನ್ನು "ಸೂರ್ಯಚಂದ್ರರಿಬ್ಬರು ಕಣ್ಣಿಗೆ ಸಮಸಮಾನ ಆಕೃತಿಯುಳ್ಳವರಾಗಿ ಕಂಡರೂ ನಿಜವಾಗಿ ಅವರಿಬ್ಬರಲ್ಲಿ ಬಹಳ ಬೇಧವಿದೆ. ಸೂರ್ಯನು ಭೂಮಿಯದಷ್ಟೆ ಅಲ್ಲ ಇಡೀ ಗ್ರಹಮಾಲೆಯ ಅಧಿಪತಿ. ಆದರೆ ಚಂದ್ರನು ಭೂಮಿಯ ಅಂಕಿತನು." ಎಂದು ಅತ್ಯಂತ ಸೂಕ್ತವಾದ ರೀತಿಯಲ್ಲಿ ನಿರೂಪಣೆ ಮಾಡಿರುತ್ತಾರೆ.

20ನೆಯ ಶತಮಾನದ ಆರಂಭದ ಕಾಲಘಟ್ಟದಲ್ಲಿ ಕನ್ನಡದಲ್ಲಿ ಬಂದ ವಿವಿಧ ವಿಜ್ಞಾನಗ್ರಂಥಗಳ ಸಾಲಿನಲ್ಲಿ ಖಗೋಲ ವಿಜ್ಞಾನವನ್ನು ಸಾಮಾನ್ಯ ಓದುಗರಿಗೆ ಸರಳವಾಗಿ ನಿರೂಪಿಸಿರುವ ಈ ಕೃತಿಯು ಕನ್ನಡ ವಾಙ್ಮಯಕ್ಕೆ ಒಂದು ಮೌಲಿಕ ಸೇರ್ಪಡೆಯಾಗಿದೆ.

## ಡಿ.ವಿ.ಜಿ. ಅವರ 'ವಸಂತ ಕುಸುಮಾಂಜಲಿ' (1922)

**ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ** ವತಿಯಿಂದ 1922 ರಲ್ಲಿ **ಡಿ.ವಿ.ಜಿ** ಯವರ ಈ **'ವಸಂತ ಕುಸುಮಾಂಜಲಿ'** ಕವನ ಸಂಕಲನವು ಪ್ರಕಟವಾಗಿದೆ. ಸಂಘದ ಅಧ್ಯಕ್ಷ **ಬೆಳ್ಳಾವೆ ವೆಂಕಟನಾರಾಯಣಪ್ಪನವರು** ಈ ಕೃತಿಯನ್ನು ಪ್ರಕಟಪಡಿಸಿರುವುದರ ಜೊತೆಗೆ ಈ ಕೃತಿಗೆ ಮುನ್ನುಡಿಯನ್ನೂ ಬರೆದಿದ್ದಾರೆ. 52 ಪುಟಗಳ ಅಷ್ಟಕಿರೀಟಾಕಾರದ ಈ ಪುಟ್ಟ ಕವನ ಸಂಕಲನ ಇದೇ ಲೇಖಕರ 'ನಿವೇದನ' ಕೃತಿಗಿಂತ ಎರಡು ವರ್ಷ ಮೊದಲು ಮುದ್ರಣಗೊಂಡಿದೆ. ಈ ಕೃತಿಯ ಮೊದಲ ಐದು ಪದ್ಯಗಳು 1911ರ ಹೊತ್ತಿಗೇ ಮುದ್ರಿತವಾಗಿದ್ದವು.

ಈ ಕೃತಿಯ ಪ್ರಕಟಣೆಯ ಬಗ್ಗೆ ಅಳುಕಿನಿಂದ ಡಿ.ವಿ.ಜಿ.ಯವರು ಗ್ರಂಥಾರಂಭದ **'ವಿಜ್ಞಾಪನೆ'** ಯಲ್ಲಿ "ಈ ಬಗೆಯ ಸಂಶಯವು ಬಲವಾಗಿದ್ದರೂ ಕನ್ನಡಿಗರಿಗೆ ಪರಮ ಗೌರವಾರ್ಹರಾದ ಮ॥ **ಬೆಳ್ಳಾವೆಯ ವೆಂಕಟ ನಾರಾಯಣಪ್ಪನವರೂ** ಮ॥ **ತಳುಕಿನ ವೆಂಕಣ್ಣಯ್ಯನವರೂ,** ಹಾಗೆಯೇ ಈ ಪದ್ಯಗಳನ್ನು ಆಗಾಗ ಓದಿದ್ದ ಅಥವಾ ಕೇಳಿದ್ದ ಕಾವ್ಯಜ್ಞರಾದ ಇತರ ಕೆಲ ಮಂದಿ ಮಿತ್ರರೂ ಈ ಪದ್ಯ ಸಮುಚ್ಚಯವು ಪ್ರಕಟನೆಗೆ ಅರ್ಹವಾಗಿದೆಯೆಂದು ಲೇಖಕ ನಿಗೆ ಭರವಸೆ ಹೇಳಿ, ಇದು ಪ್ರಕಟ ವಾಗಲೇಬೇಕೆಂದು ನಿಶ್ಚಯಿಸಿದರು



ತೋಟದಲ್ಲಿ ಎತ್ತರವಾದ ಮರ ಗಳೂ ಬಹುದೂರ ಹಬ್ಬಿರುವ ಬಳ್ಳಿಗಳೂ ಇದ್ದರೂ ನೆಲವನ್ನೇ ಅವಲಂಬಿಸಿ



ಕೊಂಡಿರುವ ಬಡ ಹುಲ್ಲೂ ಇರುವಂತೆ ಸಾಹಿತ್ಯ ವನದಲ್ಲಿ ಮಹಾಕಾವ್ಯಗಳೂ ಉದ್ದಾಮ ಗ್ರಂಥಗಳೂ ಇದ್ದರೂ ಇಂತಹ ಅಲ್ಪಕೃತಿಗಳೂ ಇರಬಹುದಲ್ಲವೆ?" ಎಂಬುದಾಗಿ ಅಬಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಇದಕ್ಕೂ ಮೊದಲು ಆರಂಭದಲ್ಲಿ "ಅಲ್ಲಿಂದೀಚೆಗೆ ತನ್ನ ವಯಸ್ಸು ಹೆಚ್ಚಿದಂತೆ ಲೇಖಕನಿಗೆ ಅವುಗಳ ಗುಣ ವಿಷಯದಲ್ಲಿ ಸಂದೇಹವೂ ಹೆಚ್ಚುತ್ತ ಬಂತು" ಎಂದಿದ್ದಾರೆ. ತಮ್ಮ ಭಾಷಾ ರಚನೆಯ ವಿನ್ಯಾಸಗಳು ಕವಿತೆಗಳಲ್ಲವೇನೋ ಎಂಬ ಸಂಶಯ ಡಿ.ವಿ.ಜಿ.ಯವರಿಗೆ ಯಾವಾಗಲೂ ಇದ್ದೇ ಇತ್ತು. ಒಂದು ಪತ್ರದಲ್ಲಿ ಅವರು "ಕನ್ನಡ ಸಾಹಿತ್ಯದಲ್ಲಿ ನಾನು ಮಾಡಿರುವುದು ತೇಪೆ ಹಾಕುವ ಕೆಲಸ" ಎಂದು ಬರೆದಿದ್ದಾರೆ. ಇದರ ಜೊತೆಗೆ "ಉತ್ತಮ ಕವಿತ್ವಕ್ಕಿರಬೇಕಾದ ಲಕ್ಷಣಗಳು ಅವುಗಳಲ್ಲಿಲ್ಲದೆ ಇರಬಹುದು; ಅವಿದ್ವತ್ಕವಿತೆಯ ದೋಷಗಳು ಹೇರಳವಾಗಿರಬಹುದು" ಎಂಬ ಸಂದೇಹವನ್ನೂ ಪಟ್ಟಿದ್ದಾರೆ. ಇದು ಅವರ ವಿನಮ್ರತೆಗೆ ದ್ಯೋತಕ.

ಈ ಸಂದರ್ಭದಲ್ಲಿ **ಕುವೆಂಪು** ಅವರು ತಮ್ಮ **'ಆಧುನಿಕ ಕನ್ನಡ ವಾಙ್ಮಯ'** ಎಂಬ ಲೇಖನದಲ್ಲಿ ಡಿ.ವಿ.ಜಿ.ಅವರ ಕಾವ್ಯವನ್ನು ಕುರಿತು "ಕನ್ನಡ ಕಬ್ಬವೆಣ್ಣು ಸನಾತನ ಮತ್ತು ನೂತನಗಳ ಮಧ್ಯೆ ಹೊಸ್ತಿಲ ಮೇಲೆ ನಿಂತಂತಿದೆ. ಅನೇಕ ಪದ್ಯಗಳು ವೃತ್ತಕಂದ ರೂಪವಾಗಿವೆ. ಆತ್ಮವು ನೂತನವಾದರೂ ವೇಷವು ಪುರಾತನವಾದುದು" ಎಂದು ಹೇಳುವ ಮಾತುಗಳನ್ನು ಗಮನಿಸಬಹುದು.

ಮುನ್ನುಡಿಯಲ್ಲಿ **ಬೆಳ್ಳಾವೆ ವೆಂಕಟನಾರಾಯಣಪ್ಪನವರು** ಈ ಪುಸ್ತಕದ ಸ್ವರೂಪವನ್ನು ಕುರಿತು

"ಈ ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಜೀವನ ತತ್ವಾಲೋಚನೆಯೂ ಎರಡನೆಯದರಲ್ಲಿ ಆಧುನಿಕ ಭಾರತೀಯ ಮಹಾಪುರುಷ ವಿಷಯಕವಾದ ಕವಿತೆಗಳೂ ಇವೆ. ಈ ಪುಸ್ತಕಕ್ಕೆ ವಸಂತ

ಕುಸುಮಾಂಜಲಿ ಎಂಬ ಹೆಸರನ್ನಿಟ್ಟು ಪ್ರಕಟಿಸಿದ್ದೇವೆ. ಮೊದಲನೆಯ ಭಾಗವು ಉತ್ತಮವಾದ ಜೀವನಕ್ರಮುದ ಸ್ವರೂಪವನ್ನು ತೋರಿಸುತ್ತದೆ. ಲೋಕಸೇವೆಯೇ ಮಾನವನ ಪರಮಧರ್ಮವೆಂಬ ನೀತಿಯು ಅದರಲ್ಲಿ ಪ್ರತಿಪಾದಿತವಾಗಿದೆ. ಈ ನೀತಿಯನ್ನು ನಡೆವಳಿಕೆಯಲ್ಲಿ ತೋರಿಸಿರುವ ಆಧುನಿಕ ಭಾರತೀಯ ಮಹಾಪುರುಷರ ಗುಣವಿಶೇಷಗಳು ದ್ವಿತೀಯ ಭಾಗದಲ್ಲಿ ಸೂಚಿತವಾಗಿವೆ." ಎಂದು ವಿವರಿಸಿದ್ದಾರೆ.

ಈ ಹೊತ್ತಗೆಯಲ್ಲಿ ವ್ಹಿಟ್ಟಿಯರ್ ಕವಿ, ಶ್ರೀ ರಾಮಕೃಷ್ಣ ಪರಮಹಂಸರು, ರಾಮಮೋಹನರಾಯರು, ದಾದಾಭಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ, ವಿವೇಕಾನಂದ ಸ್ವಾಮಿಗಳು, ಬಾಲಗಂಗಾಧರ ತಿಲಕರು, ಕವಿ ರವೀಂದ್ರರು, ವೈಜ್ಞಾನಿಕ ಜಗದೀಶ ಚಂದ್ರ ಬೋಸ್, ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು, ಮಹಾತ್ಮ ಗಾಂಧಿ ಮತ್ತು ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಚಿತ್ರಗಳ ಜೊತೆಗೆ ದಾದಾಭಾಯಿ ನವರೋಜಿಯವರ ಹಸ್ತಾಕ್ಷರದ ಚಿತ್ರವನ್ನೂ ನೀಡಲಾಗಿರುವುದು ಒಂದು ವಿಶೇಷ.

ವಸಂತ ಕುಸುಮಾಂಜಲಿ ಸಂಕಲನದಲ್ಲಿ ಕಂದ ಪದ್ಯ, ಹಲವು ಬಗೆಯ ವೃತ್ತಗಳು, ಷಟ್ಪದಿಗಳು ಹಾಗೂ ಸೀಸಪದ್ಯಗಳು ಇವೆ. ಅದರಲ್ಲಿಯೂ ಸೀಸಪದ್ಯಗಳನ್ನು ವಿಶೇಷವಾಗಿ ಬಳಸಲಾಗಿದೆ. ಸೀಸಪದ್ಯ ಇಂಗ್ಲೀಷಿನ ಸಾನೆಟ್ಟಿಗೆ ಸ್ವಲ್ಪ ಹತ್ತಿರವಾದ ಛಂದೋರೂಪ. ಸಾನೆಟ್ ಹದಿನಾಲ್ಕು ಸಾಲಿನ ಪದ್ಯವಾದರೆ ಸೀಸಪದ್ಯ 12 ಸಾಲಿನ ಪದ್ಯದ ಕಟ್ಟು ಮತ್ತು ಇದು ಶುದ್ಧ ದ್ರಾವಿಡ ಛಂದೋರೂಪ. ಸೀಸಪದ್ಯದಲ್ಲಿ ಒಂದು ಅಷ್ಟಪದಿಯೂ ಮತ್ತು ಒಂದು ಚೌಪದಿಯೂ ಇರುತ್ತದೆ. ಸಾನೆಟ್ ಕನ್ನಡದಲ್ಲಿ ಅಷ್ಟು ಹೊತ್ತಿಗಾಗಲೇ(1916) ಗೋವಿಂದ ಪೈ ಅವರ' ಕವಿತಾವತಾರ' ಎಂಬ ಹೆಸರಿನ ಮೂಲಕ ಅವತಾರವಾಗಿಬಿಟ್ಟಿತ್ತು.

ಈ ಸಂಕಲನದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಜೀವಗೀತೆ, ಆತ್ಮಗೀತೆ, ಸರ್ವಮತಸಿದ್ಧಾಂತ, ದೇವರೆಲ್ಲಿ ? ಮತ್ತು ಬೇಡಿಕೆ ಎಂಬ ಐದು ಪದ್ಯಗಳಿವೆ. ಜೀವಗೀತೆಯು ವ್ಹಿಟ್ಟಿಯರ್ ಕವಿಯ "ಮೈ ಸೋಲ್ ಅಂಡ್ ಐ" ಎಂಬ ಕವಿತೆಯ ಅನುವಾದ. ಆತ್ಮಗೀತೆಯು ವಾಲ್ಟ್ ವ್ಹಿಟ್‌ಮನ್ನನ "ಸಾಂಗ್ ಆಫ್ ಮೈ-ಸೆಲ್ಫ್" ಎಂಬ ಕವಿತೆಯ ಅನುವಾದ. ಜೀವಗೀತೆ ಮತ್ತು ಬೇಡಿಕೆ ಸೀಸಪದ್ಯಗಳ ಸಮುಚ್ಚಯ ವಾದರೆ, ಆತ್ಮಗೀತೆ ರಗಳೆ ಛಂದಸ್ಸಿನ ಕಟ್ಟು,

ಎರಡರಲ್ಲಿಯೂ ಬದುಕಿನ ಗಹನವಾದ ಚಿಂತನೆಗಳ ಜಿಜ್ಞಾಸೆ ಮಂಥನವಾಗಿದೆ. ದೇವರೆಲ್ಲಿ ಎಂಬ ಕವಿತೆ ಕುಸುಮ ಷಟ್ಪದಿಯಲ್ಲಿದೆ.

ಎರಡನೆಯ ಭಾಗದಲ್ಲಿ ಆ ಕಾಲಕ್ಕೆ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದ ಹಿರಿಯ ಚೇತನಗಳಾದ **ರಾಮಕೃಷ್ಣ ಪರಮಹಂಸ, ಗಾಂಧಿ, ಜಗದೀಶ್ ಚಂದ್ರ ಬೋಸ್**, **ರವೀಂದ್ರ ನಾಥ ಟಾಗೋರ್** ಮುಂತಾದ ಮಹಾಪುರುಷರನ್ನು ಕುರಿತ ವ್ಯಕ್ತಿಚಿತ್ರ ಗೀತಗಳಿವೆ. **ರವೀಂದ್ರ ನಾಥ ಟಾಗೋರ್** ಅವರನ್ನು ಕುರಿತ ಒಂದು ಕಂದಪದ್ಯ ಹೀಗಿದೆ :

ರವಿಯರಿಯದ ಮರ್ಮಂಗಳಂ।
ಕವಿಯರಿವನೆಂದು ಲೋಕಮೊರೆವುದು ಪುಸಿಯೇಂ॥
ರವಿ ಬೆಳಗೆ ಬಾಹ್ಯಲೋಕವ।
ಕವಿ ಬೆಳಗಿಪನಲ್ತೆ ಜನರ ಹೃದಯಾನ್ತರಮಂ॥

ಇಲ್ಲಿ ರವಿ ಎಂದರೆ ಕವಿ ರವೀಂದ್ರರು ಮತ್ತು ಸೂರ್ಯ ಎಂಬ ಎರಡರ್ಥವಿರುವುದನ್ನು ಗಮನಿಸಬಹುದು.

ಹಾಗೆಯೇ **ಮೋಕ್ಷಗುಂಡಂ ವಿಶ್ವೇಶ್ವರಯ್ಯ**ನವರನ್ನು ಕುರಿತ ಈ ಪದ್ಯವನ್ನು ನೋಡಬಹುದು.

ಜನಪದವೆ ದೇವನಿಲಯಂ।
ಜನಸೇವೆಯೆ ದೇವಪೂಜೆಯೆನುತುಂ ಸತತಂ॥
ಘನಸಚಿವಧರ್ಮಮಾರ್ಗವ-।
ನನುಸರಿಸಿದನೀತನಲ್ತೆ ಸುಜನಪ್ರೀತಂ॥

ಅವರ ಉಪದೇಶಾತ್ಮಕ ಕಾವ್ಯವಾದ **ಮಂಕುತಿಮ್ಮನ ಕಗ್ಗ** ಜನಪ್ರಿಯವಾದ ಕೃತಿಯಾಗಿಬಿಟ್ಟಿರುವುದರಿಂದ **ಡಿ.ವಿ.ಜಿ.**ಯವರ ಇತರ ಪ್ರಯೋಗಗಳು ಅಷ್ಟಾಗಿ ಜನರ ಗಮನ ಸೆಳೆಯುವುದಿಲ್ಲ.

**ವಸಂತ ಕುಸುಮಾಂಜಲಿ** ಸಂಕಲನವನ್ನು ಅದು ಪ್ರಕಟ ವಾದ(1922) ಕಾಲಘಟ್ಟದ ಹಿನ್ನೆಲೆಯಲ್ಲಿ ಗಮನಿಸಬೇಕು. **ಡಿ.ವಿ.ಜಿ.** , **ಮಾಸ್ತಿ ವೆಂಕಟೇಶ ಅಯ್ಯಂಗಾರ್, ಬಿ.ಎಂ.ಶ್ರೀ., ಕುವೆಂಪು** ಮತ್ತು **ಬೇಂದ್ರೆ** ಅವರು ಆ ಆಸುಪಾಸಿನ ಕಾಲದಲ್ಲಿ ಬರೆಯುತ್ತಿದ್ದ ಲೇಖಕರು ಎಂಬ ಹಿನ್ನೆಲೆಯಲ್ಲಿ ಈ ಸಂಕಲನವನ್ನು ಪರಿಗಣಿಸಬೇಕು. ನವೋದಯ ನಿಕಟಪೂರ್ವ ಕಾಲಘಟ್ಟದಲ್ಲಿ ಬಂದ ಈ ಕವಿತಾ ಸಂಕಲನಕ್ಕೆ ಕನ್ನಡ ಕಾವ್ಯ ಚರಿತ್ರೆಯಲ್ಲಿ ಸೂಕ್ತ ಸ್ಥಾನವಿದೆ.

# ALL ABOUT MYSORE - D.V.GUNDAPPA

'ಆಲ್ ಅಬೌಟ್ ಮೈಸೂರ್' ಎಂಬ ಡಿ.ವಿ. ಗುಂಡಪ್ಪನವರ ಈ ಇಂಗ್ಲಿಷ್ ಭಾಷೆಯ ಕೃತಿಯನ್ನು ಕರ್ನಾಟಕ ಪಬ್ಲಿಷಿಂಗ್ ಹೌಸ್- ಇವರು ೧೯೩೧ ರಲ್ಲಿ ಪ್ರಕಟಿಸಿದ್ದಾರೆ. ಇದೊಂದು ಅಪೂರ್ವ ಕೃತಿ. ಇದು ೧೯೩೧ ರ ಮೈಸೂರು ರಾಜ್ಯದ ಒಂದು ಸಂಪೂರ್ಣ ಕೈಪಿಡಿ. ಇದೇ ರೀತಿಯ ಕೃತಿಯೊಂದನ್ನು ಇದೇ ಲೇಖಕರು ೧೯೧೫ ರಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷ 'ಗಳೆರಡರಲ್ಲಿಯೂ ಪ್ರಕಟಿಸಿ ದ್ದೆನೆಂಬ ಮಾಹಿತಿ ಯನ್ನು ಗ್ರಂಥದ 'ಪ್ರಿಫೇಸ್' ಭಾಗದಲ್ಲಿ ಹೇಳಿದ್ದಾರೆ. ೧೪೧ ಪುಟಗಳು, ೨೨ ಅಧ್ಯಾಯಗಳು ಹಾಗೂ ೩೦ ಛಾಯಾಚಿತ್ರಗಳಿರುವ ಈ ಕೃತಿಯು 'ದಿ ಬೆಂಗಳೂರು ಪ್ರೆಸ್' ನಲ್ಲಿ ಅಚ್ಚಿನ ದೋಷಗಳಿಲ್ಲದೆ ಮುದ್ರಣಗೊಂಡಿದೆ.

ಅಂದಿನ ಮೈಸೂರು ರಾಜ್ಯದ ಸಮಗ್ರ ಪರಿಸ್ಥಿತಿಯನ್ನು ಈ ಕೃತಿಯು ಓದುಗನಿಗೆ ಮನದಟ್ಟು ಮಾಡಿಸಿ ಕೊಡುತ್ತದೆ. ಈ ಕೃತಿಯ 'ಕಂಟೆಂಟ್ಸ್' ಗಮನಿಸಿ :

ಅಧ್ಯಾಯಗಳು

೧. ಭೌತಿಕ ಲಕ್ಷಣಗಳು

೨. ಸಸ್ಯ ಮತ್ತು ಜಂತುಗಳು

೩. ಭೂವಿಜ್ಞಾನ ಮತ್ತು ಗಣಿಗಾರಿಕೆ

೪. ಭಾಷೆ

೫. ಚರಿತ್ರೆ

೬. ಸರಕಾರ

೭. ಶಿಕ್ಷಣ

೮. ಕೈಗಾರಿಕೆ ಹಾಗೂ ವಾಣಿಜ್ಯ

೯. ಕಲೆ ಹಾಗೂ ವಾಸ್ತುಶಿಲ್ಪ



೧೦. ವ್ಯವಸಾಯ ಹಾಗೂ ರೇಷ್ಮೆ ವಿಜ್ಞಾನ
೧೧. ವೈದ್ಯಕೀಯ ಹಾಗೂ ಆರೋಗ್ಯ
೧೨. ರಾಜ್ಯದ ಆರ್ಥಿಕ ಪರಿಸ್ಥಿತಿ
೧೩. ಜನಗಣತಿ ಹಾಗೂ ಇತರೆ ವಿಷಯಗಳು
೧೪. ಬೆಂಗಳೂರು
೧೫. ಶ್ರೀರಂಗ ಪಟ್ಟಣ
೧೬. ಮೈಸೂರು
೧೭. ರಾಜ್ಯಸ್ಥಳ ವಿಚಾರ (ಗೆಜೆಟಿಯರ್)
೧೮. ಸಂಘಸಂಸ್ಥೆಗಳು
೧೯. ಅನುಕ್ರಮೀ ದಿವಾನರುಗಳು
೨೦. ರಾಜ್ಯದ ಕೆಲವು ಪ್ರಮುಖ ಅಧಿಕಾರಿಗಳು.

ಮೇಲ್ಕಂಡ ವಿಷಯಗಳನ್ನೊಳಗೊಂಡಿರುವ ಈ ಪುಸ್ತಕ ಹಳೆಯ ಕಾಲದ ಮೈಸೂರು ರಾಜ್ಯದ ಅಧ್ಯಯನ ಮಾಡುವ ಆಸಕ್ತರಿಗೆ ಅನೇಕ ಅಪೂರ್ವ ಮಾಹಿತಿಗಳನ್ನೊದಗಿಸುತ್ತದೆ. ಉದಾಹರಣೆಗೆ ೧೮ನೆಯ ಅಧ್ಯಾಯದಲ್ಲಿ ಮೈಸೂರು ರಾಜ್ಯದಲ್ಲಿ ಅಂದು ಪ್ರಸಿದ್ಧಿಯನ್ನು ಪಡೆದಿದ್ದ ೧೩ ಸಂಘಸಂಸ್ಥೆಗಳ ವಿವರಗಳಿವೆ..ಬೆಂಗಳೂರಿನ ಸೌತ್ ಇಂಡಿಯನ್ ಸೈನ್ಸ್ ಅಸೋಸಿಯೇಷನ್, ಮೈಸೂರ್ ಇಂಜಿನಿಯರ್ಸ್ ಅಸೋಸಿಯೇಷನ್, ಮೈಸೂರ್ ಚೇಂಬರ್ ಆಫ್ ಕಾಮರ್ಸ್, ಮಿಥಿಕ್ ಸೊಸೈಟಿ, ಸಿವಿಲ್ ಆಂಡ್ ಸೋಷಿಯಲ್ ಪ್ರೋಗ್ರೆಸಿವ್ ಅಸೋಸಿ ಯೇಷನ್, ಮಹಿಳಾ ಸೇವಾ ಸಮಾಜ, ಅಶಕ್ತ ಪೋಷಕ ಸಭಾ, ಮೈಸೂರ್ ಹಾರ್ಟಿಕಲ್ಚರ್ ಸೊಸೈಟಿ, ಮೈಸೂರ್


ONE OF THE FOUR TOWERS OF KEMPE GOWDA (ULSOOR, BANGALORE)


TEMPLE OF SOMESWARA (ULSOOR, BANGALORE)

ಮೆಡಿಕಲ್ ಅಸೋಸಿಯೇಷನ್, ಮೈಸೂರ್ ಅಗ್ರಿಕಲ್ಚರಲ್ ಆಂಡ್ ಎಕ್ಸ್ಪರಿ ಮೆಂಟಲ್ ಯೂನಿಯನ್, ಮೈಸೂರ್ ಸೆಕೆಂಡರಿ ಎಜುಕೇಷನ್ ಲೀಗ್, ನ್ಯಾಷನಲ್ ಎಜುಕೇಷನ್ ಸೊಸೈಟಿ ಆಫ್ ಮೈಸೂರ್, ಕರ್ನಾಟಕ ಸಾಹಿತ್ಯ ಪರಿಷತ್-ಈ ಸಂಘ ಸಂಸ್ಥೆ ಗಳ ಸ್ಥಾಪನೆ, ಧ್ಯೇಯೋ ದ್ದೇಶಗಳು, ಕಾರ್ಯಕಾರೀ ವರ್ಗ, ಸದಸ್ಯರ ಸಂಖ್ಯೆ, ಅವು ಪ್ರಕಟಿಸುವ ವಾರ್ತಾಪತ್ರ ಇವುಗಳನ್ನೊಳ ಗೊಂಡ ಸಮಗ್ರ ಪರಿಚಯವನ್ನು ಅಧಿಕೃತ ದಾಖಲೆಗಳ ಹಿನ್ನೆಲೆಯಲ್ಲಿ ನೀಡಿರುತ್ತಾರೆ.

ರಾಜ್ಯದ ಕೆಲವು ಪ್ರಮುಖ ಅಧಿಕಾರಿಗಳು ಎಂಬ ಅಧ್ಯಾಯದಲ್ಲಿ ಅಂದಿನ ಮೈಸೂರು ರಾಜ್ಯದ ೩೧ ಜನ ಪ್ರಮುಖ ಅಧಿಕಾರಿಗಳ ಪಟ್ಟಿಯನ್ನು ಅವರು ಪಡೆಯುತ್ತಿದ್ದ ಸಂಬಳದ ಮೊಬಲಗು ಸಹಿತ ನೀಡಿರುತ್ತಾರೆ.

ಈ ಪಟ್ಟಿಯ ಪ್ರಕಾರ

ಅಂದಿನ ಮೈಸೂರು ಹೈಕೋರ್ಟಿನ ಮುಖ್ಯ ನ್ಯಾಯಾಧೀಶರು ರಾಜಧರ್ಮ ಪ್ರವೀಣ ಸಿ.ಎಸ್.ದೊರೆಸ್ವಾಮಿ ಅಯ್ಯರ್. ಅವರ ಸಂಬಳ ೨,೫೦೦/=ರೂಪಾಯಿಗಳು.

ಮೈಸೂರು ವಿಶ್ವವಿದ್ಯಾನಿಲಯದ ಉಪ-ಕುಲಪತಿ ಡಾ॥ ಇ.ಪಿ.ಮೆಟ್‌ಕ್ಲಾಫ್. ಸಂಬಳ=೧,೭೫೦/=

ಸೆನ್ಸಸ್ ಸೂಪರಿಂಟೆಂಡೆಂಟ್ ಆಗಿದ್ದವರು ಮಾಸ್ತಿ ವೆಂಕಟೇಶ ಅಯ್ಯಂಗಾರ್. ಅವರ ಸಂಬಳ=ರೂ.೧,೦೦೦/=

ಟ್ರೇಡ್ ಕಮಿಷನರ್ ಇನ್ ಲಂಡನ್ ಸಿ.ರಂಗನಾಥ ರಾವ್ ಸಾಹೇಬ್, ಸಂಬಳ=೧,೬೦೦ಪೌಂಡುಗಳು

-ಈ ಮುಂತಾದ ವಿರಳ ಮಾಹಿತಿಗಳು ಇಲ್ಲಿ ದೊರೆಯುತ್ತವೆ.

ಶಿಕ್ಷಣ ಎಂಬ ಅಧ್ಯಾಯದಲ್ಲಿ **೧. ಸಾರ್ವಜನಿಕ ಶಿಕ್ಷಣ ಇಲಾಖೆ ೨. ಮೈಸೂರು ವಿಶ್ವವಿದ್ಯಾಲಯ ೩. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್** ಈ ಮೂರು ಸಂಸ್ಥೆಗಳ ಕಿರುಪರಿಚಯವಿದೆ.

ಮೈಸೂರು ವಿಶ್ವವಿದ್ಯಾನಿಲಯದ ಅಧೀನ ಕಾಲೇಜುಗಳಾದ ಮೈಸೂರಿನ ಮಹಾರಾಜ ಕಾಲೇಜು, ಮಹಾರಾಣಿ ಕಾಲೇಜು, ಮೆಡಿಕಲ್ ಕಾಲೇಜು, ಬೆಂಗಳೂರಿನ ಸೆಂಟ್ರಲ್ ಕಾಲೇಜು-ಇವುಗಳ ವಿವರಗಳಿವೆ. ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಿಗೆ ಒಂದು ಪ್ರತ್ಯೇಕ ವಿದ್ಯಾರ್ಥಿ ನಿಲಯ

ವಿದ್ದದ್ದರ ಬಗ್ಗೆ ಪ್ರಸ್ತಾಪವಿದೆ. ಬೆಂಗಳೂರಿನ ನ್ಯಾಷನಲ್ ಹೈಸ್ಕೂಲಿನಲ್ಲಿ ೧೯೩೦ರಲ್ಲಿ ೨೯೭ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರೆಂದೂ ೯೧ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ ಪರೀಕ್ಷೆ ಕಟ್ಟಿದರೆಂಬ ಸುದ್ದಿ ಇಲ್ಲಿದೆ.

೧೯೧೧ರ ಜೂಲೈ ೨೪ರಂದು ಸ್ಥಾಪನೆಗೊಂಡ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆಯನ್ನು ಕುರಿತ ಅದರ ಧ್ಯೇಯೋದ್ದೇಶ, ಗ್ರಂಥಾಲಯ, ಪ್ರಯೋಗಾಲಯಗಳು, ಚೇರುಗಳು, ಲೆಕ್ಚರುಷಿಪ್ಪುಗಳು–ಇವೆಲ್ಲ ಮಾಹಿತಿಗಳು ಇಲ್ಲಿವೆ. ಇನ್ಸ್ಟಿಟ್ಯೂಟ್ನ ಅಂದಿನ ಗ್ರಂಥಾಲಯದ ಪುಸ್ತಕಗಳ ಸಂಖ್ಯೆ–೧೮,೯೪೧ ವಾಲ್ಯೂಮುಗಳು. ೧೯೩೦–೩೧ರ ಸಂಸ್ಥೆಯ ಆದಾಯ=ರೂ.೫,೯೪,೩೮೪/= ವೆಚ್ಚ–ರೂ.೫,೪೦,೭೧೧

ಸರ್ ಸಿ.ವಿ.ರಾಮನ್ ಅವರು ನೊಬೆಲ್ ಬಹುಮಾನ ಖ್ಯಾತಿವೆತ್ತ "ರಾಮನ್ ಎಫೆಕ್ಟ್" ಎಂಬ ತಮ್ಮ ಶೋಧವನ್ನು ಪ್ರಥಮ ಬಾರಿಗೆ ಘೋಷಿಸಿದ್ದು 'ಸೌತ್ ಇಂಡಿಯನ್ ಸೈನ್ಸ್ ಅಸೋಸಿಯೇಷನ್' ಎಂಬ ಬೆಂಗಳೂರಿನ ಸಂಸ್ಥೆಯಲ್ಲಿ ಎಂಬ ಮಾಹಿತಿ ಈ ಕೃತಿಯಲ್ಲಿದೆ.

ಭಾಷೆ ಎಂಬ ಅಧ್ಯಾಯದಲ್ಲಿ ಮಾನ್ಯ ಡಿ.ವಿ.ಜಿ. ಅವರು ಕುಮಾರವ್ಯಾಸ ಭಾರತವನ್ನು ಕುರಿತು ಹೇಳಿರುವ ಮಾತುಗಳನ್ನು ಗಮನಿಸಿ : This is perhaps the grandest epic poem in the Language. For vastness of conception, for vividness of portraiture, for the variegated splendours of a colossal and complex drama, for the sweep of imagination that can reproduce for us the Varying notes mixed in a mighty clash of human forces-avarice, indignation, pity, melancholy, love, hate, scorn, irony, desperation, terror, heroism, nobility, envy, meanness, magnanimity, faith, hope-for a sustained spiritual idealism and a kindly and manful attitude towards life , as well as for naturalness and freedom and vigour of style, this work stands supreme. ಇವು ಒಬ್ಬ ಧೀಮಂತ ಕವಿಯನ್ನು ಕುರಿತ ಧೀಮಂತ ಚಿಂತಕರೊಬ್ಬರ ಗಮನಿಕೆಗಳು.

ಒಟ್ಟಿನಲ್ಲಿ ಸಾರ್ವಜನಿಕರ ಗಮನಕ್ಕೆ ಹೆಚ್ಚು ಬಾರದ ಒಂದು ಅಮೂಲ್ಯ ಹಾಗೂ ಅಪೂರ್ವ ಕೃತಿ ಇದು.

# ಎಸ್.ಜಿ.ಗೋವಿಂದರಾಜ ಅಯ್ಯಂಗಾರ್ಯರ "ಪ್ರಿಂರೋಜವಿಜಯಂ (1913)"

'ಪ್ರಿಂರೋಜವಿಜಯಂ' ಕೃತಿಯು ಶ್ರೀ ಎಸ್.ಜಿ.ಗೋವಿಂದರಾಜ ಅಯ್ಯಂಗಾರ್ಯ ಅವರು ರಚಿಸಿರುವ ಕಾದಂಬರಿ. ಇದರ ಮೊದಲ ಮುದ್ರಣದ ಆವೃತ್ತಿಯು ೦೫-೦೯- ೧೯೧೩ರಲ್ಲಿಯೂ, ಎರಡನೆಯ ಆವೃತ್ತಿಯು ೩೧-೦೮-೧೯೨೪ರಲ್ಲಿಯೂ ಪ್ರಕಟವಾಗಿದೆ. ೧೧-೦೪-೧೯೨೬ರಲ್ಲಿ ಪ್ರಕಟ ವಾಗಿರುವ ಇದರ ಮೂರನೆಯ ಆವೃತ್ತಿಯನ್ನು ಬೆಂಗಳೂರು ಸಿಟಿಯ ಬಿ. ಶ್ರೀನಿವಾಸ ಅಯ್ಯಂಗಾರ್ಯರು ಮುದ್ರಿಸಿರುತ್ತಾರೆ. "ಸಹೃದಯರಾದ ಪಾಠಕ ಮಹಾಶಯರ ಪ್ರೋತ್ಸಾಹದಿಂದ" ಇದು ಎರಡೇ ವರ್ಷಗಳ ಅವಧಿಯಲ್ಲಿ ಮರುಮುದ್ರಣಗೊಂಡಿರುವುದು ಗಮನಾರ್ಹ. ಈ ಕಾದಂಬರಿಯ ಮೂರನೆಯ ಆವೃತ್ತಿಯ ಬೆಲೆ ೧ ರುಪಾಯಿ ೮ ಆಣೆಗಳು. ಒಂದನೇ ಅಷ್ಟ ಕಿರೀಟಾಕಾರದ ಈ ಕಾದಂಬರಿಯು ೨೦೦ ಪುಟಗಳಷ್ಟಿದ್ದು ಇಂಗ್ಲೀಷಿನ ಮೂಲ ಕೃತಿಯಲ್ಲಿರುವ ೩೨ ಅಧ್ಯಾಯ ಗಳನ್ನೊಳಗೊಂಡಿದೆ. ಕಾದಂಬರಿಯ ಆರಂಭಕ್ಕೆ ಮೊದಲು ಐದು ಪುಟಗಳ "ಇಂಗ್ಲಿಷ್ ಮಹಾಕವಿ ಯಾದ ಆಲಿವರ್ ಗೋಲ್ಡಸ್ಮಿತ್ತಿನ ಸಂಕ್ಷಿಪ್ತ ಜೀವನಚರಿತೆ" ಇದೆ. ಇದು ಔಚಿತ್ಯ ಪೂರ್ಣವಾಗಿದ್ದು ತುಂಬಾ ಉಪಯುಕ್ತ ವಾಗಿದೆ. ಹೊಸಗನ್ನಡ ಕವಿತೆಯ ಹುಟ್ಟಿನ ಸಂದರ್ಭದ ಮಹತ್ವದ ಕವಿ ಎಸ್.ಜಿ. ನರಸಿಂಹಾಚಾರ್ಯರ ತಮ್ಮಂದಿರೇ ಎಸ್.ಜಿ. ಗೋವಿಂದಾ ಚಾರ್ಯರು. ಇವರಿಬ್ಬರೂ ಕರ್ಣಾಟಕ ಕಾವ್ಯಮಂಜರಿ ಮತ್ತು ಕಾವ್ಯಕಲಾನಿಧಿಯ ಪ್ರವರ್ತಕರೂ ಪ್ರೊಪ್ರೈ ಟರೂ ಆದ ಮಂ॥ ಆ॥ ರಾಮಾನುಜ ಯ್ಯಂಗಾರ್ಯ ಅವರ ಬಂಧುಗಳು, ಆಧುನಿಕ ಪೂರ್ವ ಕನ್ನಡ ಸಾಹಿತ್ಯ ನಿರ್ಮಿತಿಯ ಒಂದು ಕುಟುಂಬಕ್ಕೆ ಸೇರಿದವರು.





ಈ ಕಾದಂಬರಿಯು OLIVER GOLDSMITH ಎಂಬ ಇಂಗ್ಲಿಷ್ ಕವಿಯ THE VICAR OF WAKEFIELD ಎಂಬ ಕಾದಂಬರಿಯ ಗದ್ಯಾನುವಾದ. ಪ್ರಥಮ ಮುದ್ರಣದ ಅವತಾರಿಕೆಯಲ್ಲಿ ಕೃತಿಕಾರರು ಹೀಗೆ ಹೇಳಿದ್ದಾರೆ–'ಇದು ಇಂಗ್ಲೀಷು ಭಾಷೆಯಲ್ಲಿ ಪ್ರಖ್ಯಾತವಾಗಿ, ನೀತಿಬೋಧಕವಾಗಿ, ಮೃದುಪದಪುಂಜರಂಜಿತವಾದ ಗೋಲ್ಡ್‌ಸ್ಮಿತ್ ಎಂಬ ಕವಿವರನ "ದಿ ವಿಕಾರ್ ಆಫ್ ವೇಕ್‌ಫೀಲ್ಡ್" (The Vicar of Wakefield) ಎಂಬ ಗ್ರಂಥದ **ಗದ್ಯಾನುವಾದವು**. ಇದನ್ನು ಕೂಡಿದ ಮಟ್ಟಿಗೆ ಶುದ್ಧವಾದ, ಸುಲಭವಾದ ಭಾಷೆಯಲ್ಲಿ ಬರೆದು, ತನ್ಮೂಲಕ ಮೂಲಗ್ರಂಥದಲ್ಲಿರುವ ಸಂದರ್ಭಗಳನ್ನೂ ಪಾತ್ರಗಳನ್ನೂ, ಯಥಾವತ್ತಾಗಿ ಇರಿಸಿ, ಆಂಗ್ಲೇಯರ ಮಧ್ಯಮಶ್ರೇಣಿಯವರ ನಡೆನುಡಿಗಳನ್ನು ಕನ್ನಡಿಗರೆಲ್ಲರಿಗೂ ತಿಳಿಸಲು ಪ್ರಯತ್ನಿಸಿರುವೆನು.' ಕೃತಿಯ ಆರಂಭದ ಇಂಗ್ಲಿಷಿನಲ್ಲಿ ಬರೆದಿರುವ Foreword ಭಾಗದಲ್ಲಿ ಪಾತ್ರಗಳು ಹಾಗೂ ಸ್ಥಳಗಳನ್ನು ಮತ್ತು ಅಭಿವ್ಯಕ್ತಿವಿಧಾನವನ್ನು ಕುರಿತು ಈ ರೀತಿ ಹೇಳಿದ್ದಾರೆ–' The names of the characters and places, as well as the modes of expression, have in the translation been retained the same as in the original with a view to preserve intact the English air of the story and present to the reader the exact situations and surroundings of the original. It would fit ill, indeed, to clothe persons and sentiments essentially English in character in any but English garb.'

ಕಾದಂಬರಿಯ ಆರಂಭದಲ್ಲಿ ಒಂದು ಕಂದಪದ್ಯದಲ್ಲಿ ಶ್ರೀಕೃಷ್ಣನ ಪ್ರಾರ್ಥನೆಯಿದೆ. ಮುಂದಿನ ಮತ್ತೇಭ ವಿಕ್ರೀಡಿತ ಛಂದೋರೂಪದ ವೃತ್ತ ಹೀಗಿದೆ :

ಜಗದೊಳ್ ಸತ್ಯಮೆ ಗೆಲ್ಗುಮೆಂದು ನುಡಿವಾ ತತ್ತ್ವಾರ್ಥಮಂ ಪೆಣ್ಗೆ ಬಾ।
ಲಗಣಕ್ಕೊಯ್ಯನೆ ಬೋಧೆಗೆಯ್ಯಲೆಳಸುತ್ತಿಂಗ್ಲಿಷ್ ಕಥಾರೂಪದಿಂ ॥
ಸೊಗಮುಣ್ಮುತ್ತಿರೆ **ಗೋಲ್ಡ್‌ಸ್ಮಿ**ದಾಖ್ಯಕವಿವರ್ಯಂ ಪೇಳ್ದನಾ ಗ್ರಂಥಮೇ।
ಸುಗುಣಜ್ಞರ್ ನೆರೆ ಮೆಚ್ಚುವಂತೆಸೆವುದೀ ಕರ್ಣಾಟಗದ್ಯೋಕ್ತಿಯೊಳ್ ॥

"ಜಗತ್ತಿನಲ್ಲಿ ಸತ್ಯವೇ ಗೆಲ್ಲುತ್ತದೆ ಎಂದು ನುಡಿಯುವ ತತ್ತ್ವವನ್ನು ಹೆಂಗಸರಿಗೆ ಮಕ್ಕಳಿಗೆ ಸಾರುವ ಕಥಾರೂಪದಿಂದ ಸೊಗಸು ಹೊಮ್ಮುವಂತೆ ಗೋಲ್ಡ್‌ಸ್ಮಿತ್ ಕವಿಯು ಇಂಗ್ಲಿಷ್ ಭಾಷೆಯಲ್ಲಿ ರಚಿಸಿದನು. ಆ ಗ್ರಂಥವೇ ಕನ್ನಡ ಭಾಷೆಯಲ್ಲಿ ಗದ್ಯ ರೂಪದಲ್ಲಿ ಗುಣಗ್ರಾಹಿಗಳು ಚೆನ್ನಾಗಿ ಮೆಚ್ಚುವ ಹಾಗೆ ಶೋಭಿಸುತ್ತಿದೆ. "–ಎಂಬುದು ಈ ಪದ್ಯದ ತಾತ್ಪರ್ಯ. ' ಇಂಗ್ಲಿಷಿನಿಂದ ಕನ್ನಡದ ಭಂಡಾರವನ್ನು ತುಂಬಬೇಕು ಎನ್ನುವ ಆಕಾಂಕ್ಷೆ ' ಎಸ.ಜಿ. ಗೋವಿಂದರಾಜಯ್ಯಂಗಾರ್ಯರಲ್ಲಿತ್ತೆಂದು ಪ್ರೊ॥ ಎಸ್.ಅನಂತನಾರಾಯಣ ಅವರು ಅಭಿಪ್ರಾಯ ಪಡುವುದು ಸರಿಯಾಗಿಯೇ ಇದೆ ಎಂಬುದಕ್ಕೆ ಈ ಕೃತಿ ಮತ್ತು ಮೇಲಿನ ಈ ಪದ್ಯ ಒಳ್ಳೆಯ ನಿದರ್ಶನವಾಗಿದೆ. ಆ ಕಾಲದಲ್ಲಿ ಈ ಧೈರ್ಯ ಕನ್ನಡ ಸಾಹಿತ್ಯದ ಮುನ್ನಡೆಗೆ ಅಗತ್ಯವಾಗಿತ್ತು.

ಮೂಲಕೃತಿ 'ದಿ ವಿಕಾರ್ ಆಫ್ ವೇಕ್‌ಫೀಲ್ಡ್' ಕೃತಿಯ ಪ್ರತಿ ಚಾಪ್ಟರಿನ ಆರಂಭದಲ್ಲಿರುವಂತೆ 'ಪ್ರಿಂರೋಜವಿಜಯಂ' ಕನ್ನಡಾನುವಾದದಲ್ಲಿಯೂ ಪ್ರತಿ ಅಧ್ಯಾಯದ ಆರಂಭದಲ್ಲಿ ಆಯಾ ಅಧ್ಯಾಯದ ಇಡೀ ಸಾರಾಂಶವನ್ನು ಒಂದೆರಡು ವಾಕ್ಯಗಳಲ್ಲಿ ನೀಡಲಾಗಿದೆ. ಉದಾಹರಣೆಗೆ:

Chapter 1v : A proof that even the humblest fortune may grant happiness, which depends not on circumstances, but constitution.

ನಾಲ್ಕನೆಯ ಅಧ್ಯಾಯ : ಮನುಷ್ಯನು ಎಂತಹ ದೀನದಶೆಯಲ್ಲಿಯೂ ಸುಖಪಡಬಹುದು. ಸುಖಕ್ಕೆ ಮನಸ್ಸೇ ಕಾರಣ.

ಪ್ರತಿ ಅಧ್ಯಾಯದ ಕೊನೆಯಲ್ಲಿ 'ಎಂಬಲ್ಲಿಗೆ ಪ್ರಿಂರೋಜವಿಜಯದಲ್ಲಿ ........ನೆಯ ಅಧ್ಯಾಯ' ಎಂದೂ, ಕೊನೆಯ ಅಧ್ಯಾಯವಾದ ೩೨ನೆಯ ಅಧ್ಯಾಯವನ್ನು ಮೂಲಕೃತಿಯ conclusion ಗೆ ಸಂವಾದಿಯಾಗಿ ಉಪ ಸಂಹಾರವೆಂದೂ ಕರೆದು ಕೃತಿಯು ಕೊನೆಯಲ್ಲಿ 'ಎಂಬಲ್ಲಿಗೆ ಪ್ರಿಂರೋಜವಿಜಯದಲ್ಲಿ ಮೂವತ್ತೆರಡನೆಯ ಅಧ್ಯಾಯ ಸಂಪೂರ್ಣವು' "ಪ್ರಿಂರೋಜವಿಜಯಂ ಸಮಾಪ್ತಂ." ಎಂದೂ ನಮೂದಿಸಲಾಗಿದೆ.

ಮೂಲ ಇಂಗ್ಲಿಷ್ ಕೃತಿಯ ೮ನೆಯ ಚಾಪ್ಟರಿನಲ್ಲಿ ೩೯ Quartret ಗಳಿರುವ A Ballad ಎಂಬ ಪದ್ಯಭಾಗವಿದೆ. ಇದಕ್ಕೆ ಸಂವಾದಿಯಾಗಿ ಕನ್ನಡ ಕೃತಿಯಲ್ಲಿ ಈ ಲಾವಣಿಯನ್ನು ಲೇಖಕರ ಅಣ್ಣಂದಿರಾದ ಎಸ್.ಜಿ. ನರಸಿಂಹಾಚಾರ್ಯರು ೪೦ ಕಂದ ಪದ್ಯಗಳಲ್ಲಿ ಅನುವಾದಿಸಿರುವುದು ಕುತೂಹಲಕಾರಿಯಾಗಿದೆ. ಎರಡೂ ಭಾಷೆಗಳಲ್ಲಿನ ಒಂದು ಪದ್ಯದ ಮಾದರಿಯನ್ನು ನಿದರ್ಶನಕ್ಕಾಗಿ

ಗಮನಿಸಬಹುದು.

"For here forlorn and lost I tread,
With fainting steps and slow;
Where wilds, immeasurably spread,
Seem lengthening as I go."

ಆರುಮೊಡನಿಲ್ಲವಕ್ಕಟ।
ದಾರಿಯನರಿಯೆಂ ಬಳಲ್ದು ಮೆಲ್ಲನದೆನಿತಂ॥
ದೂರಮನೆಯ್ದುವೆನನಿತುಮ।
ಪಾರಮೆನಿಪ್ಪಡವಿ ಬಳೆವ ತೆರದಿಂ॥

ಹೀಗೆಯೇ ಮೂಲದ ೧೭ನೆಯ ಚಾಪ್ಟರಿನಲ್ಲಿ On the death of a mad dog ಎಂಬ ಎಂಟು quartret ಗಳಿರುವ Elegy ಇದೆ. ಇದನ್ನು ಸ್ವತಹ ಲೇಖಕರೇ ಹದಿನಾರು ದ್ವಿಪದಿಗಳಿರುವ ' ಹುಚ್ಚು ನಾಯ ಮರಣ ' ಎಂಬ ಚರಮಗೀತೆಯಾಗಿ ಕನ್ನಡಿಸಿದ್ದಾರೆ. ಈ ಎಲಿಜಿ/ಚರಮಗೀತೆಯ ಒಂದೆರಡು ಮಾದರಿಗಳನ್ನು ಇಲ್ಲಿ ತೌಲನಿಕವಾಗಿ ಗಮನಿಸಬಹುದು.

ಇಂಗ್ಲಿಷಿನ ಎಲಿಜಿಯ ಎರಡನೆಯ Quartret:

In Islington there was a man
Of whom the world might say,
That still a godly race he ran
whene'er he went to pray.

ಕನ್ನಡದ ಚರಮಗೀತೆಯ ಮೂರು ನಾಲ್ಕನೆಯ ದ್ವಿಪದಿಗಳು:

ಐಲಿಂಗ್ಟನೆಂಬ ಹೆಸರಾಂತ ಪತ್ತನದೆ।
ಶೀಲವಂತನದೊರ್ವನಿರ್ದನನುದಿನದೆ ॥೩॥
ದೇವಾಲಯಕೆ ಪೋಪ ವೇಳೆಯೊಳವನು।
ಭಾವಿಸಲು ಬಹುಭಕ್ತನಂತೆ ತೋರುವನು ॥೪॥

ಕಾದಂಬರಿ ಪ್ರಕಾರ ಕನ್ನಡದಲ್ಲಿ ಉಗಮಗೊಂಡು ವಿಕಾಸವಾಗುತ್ತಿದ್ದ ಘಟ್ಟದಲ್ಲಿ ಬರುತ್ತಿದ್ದ ಕಾದಂಬರಿಗಳ ಸಾಲಿನಲ್ಲಿ ಎಸ್.ಜಿ.ಗೋವಿಂದರಾಜ ಅಯ್ಯಂಗಾರ್‍ಯರ 'ಪ್ರಿಂರೋಜವಿಜಯಂ' ಕೃತಿಗೆ ಐತಿಹಾಸಿಕವಾಗಿ ಒಂದು ಸ್ಥಾನಮಾನವಿದೆ.

# ಎಂ.ಎ.ರಾಮಾನುಜಯ್ಯಂಗಾರ್ಯರ ಕಾದಂಬರಿ ಸುವ್ರತ ಅಥವಾ ಕರ್ಮವಿಲಾಸ (1915)

'ಕರ್ಣಾಟಕಕಾವ್ಯಕಲಾನಿಧಿಪ್ರವರ್ತಕರೂ, ಕವಿಸಮಯೇತ್ಯಾದ್ಯನೇಕ ಗ್ರಂಥಕರ್ತರೂ ಆದ ಮಂ.ಅ.ರಾಮಾನುಜಯ್ಯಂಗಾರ್ಯ'ರಿಂದ ವಿರಚಿತವಾದ ಈ ಸುವ್ರತ ಅಥವಾ ಕರ್ಮವಿಲಾಸ (suvratha, the child of karma) ಎಂಬ ಈ ಕೃತಿಯನ್ನು ಸ್ವತಃ ಲೇಖಕರೇ 'ಅರಿಕೆ'ಯಲ್ಲಿ ಕಾದಂಬರಿ ಎಂದೇ ನಿರ್ದೇಶಿಸಿದ್ದಾರೆ. ೧೯೧೫ರಲ್ಲಿ ಪ್ರಕಟಣೆಗೊಂಡ ಈ ಕೃತಿಯನ್ನು ಉಡುಪಿಯ ಶ್ರೀ "ಸದಾನಂದ" ಮುದ್ರಾಶಾಲೆಯ ಮ್ಯಾನೇಜಿಂಗ್ ಪ್ರೊಪ್ರೈಟರ್ ಯು. ನರಸಿಂಹ ಮಲ್ಯ ಅವರು ಮುದ್ರಿಸಿರುತ್ತಾರೆ. ಕೃತಿಯ ಬೆಲೆಯನ್ನು ಎಲ್ಲಿಯೂ ನಮೂದಿಸಲಾಗಿಲ್ಲ. ಆರಂಭದ ರಕ್ಷಾಕವಚಪುಟದ ಮೇಲೆ 'ಅರ್ಧನೇಮಿಪುರಾಣಂ' ಕೃತಿಯಲ್ಲಿ ಬರುವ

**'ಆರೇನಾದವರೆಂಬುದ।**
**ನಾರರಿವರೋ ಜಗದೊಳುಳ್ಳ ರೂಪುಗಳಂ ಸಂ॥**
**ಸಾರಿಯಘಸೂತ್ರಧಾರ।**
**ಪ್ರೇರಣೆಯಿಂ ಪೊತ್ತಿ, ಸುತ್ತಿ ಕುಣಿಯುತ್ತಿರ್ಪಂ'॥**

ಎಂಬ ಕಂದಪದ್ಯವನ್ನು ಸೂತ್ರರೂಪದಲಿ ಕೊಟ್ಟಿರುತ್ತಾರೆ. ಹಿಂಬದಿಯ ರಕ್ಷಾಕವಚಪುಟದಲ್ಲಿ ಯು.ನರಸಿಂಹ ಮಲ್ಯರು ಮ್ಯಾನೇಜಿಂಗ್ ಪ್ರೊಪ್ರೈಟರ್ ಆಗಿದ್ದ, ೧೯೧೧ರಲ್ಲಿ ಸ್ಥಾಪಿತವಾದ "ಸದಾನಂದ" ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್, ಉಡುಪಿ–ಈ ಮುದ್ರಣಾಲಯದ ಜಾಹಿರಾತು ಅಚ್ಚಾಗಿದೆ. ಒಂದು ಶತಮಾನದ ಹಿಂದಿನ ಜಾಹಿರಾತಿನ ಮಾದರಿಗೆ ಇದು ಒಂದು ಒಳ್ಳೆಯ ನಿದರ್ಶನ. ಮಧ್ಯಮ ಗಾತ್ರದ ಆಕಾರದ ಈ ಕೃತಿಯು VIII+188 ಪುಟಗಳನ್ನು ಹೊಂದಿದೆ.


SUVRATA


M. A. R.

ಕಥಾನಿಮಿತ್ತ, ರಾಣಿಯ ಮೋಹ, ಧರ್ಮಸಂಕಟ, ವೈರಾಗ್ಯ, ವಿಷಪ್ರಯೋಗ, ನವಿಲು-ನಾಯಿ, ಪರಿಣಾಮ, ಪುನರ್ಜನ್ಮ, ಆಡು-ಹೋತ, ಕೋಣ, ಕಾಳೆಗದ ಕೋಳಿ, ಗುಟ್ಟು ರಟ್ಟಾಯಿತು, ಸತಿ;ಅಸತಿ, ಸೂಚನೆ, ವನವಿಹಾರ, ಸುದರ್ಶನಾಚಾರ್ಯ, ಕರ್ಮ ಸಂಸರ್ಗ, ಧನುರ್ವಿದ್ಯಾಪ್ರದರ್ಶನ, ಪುತ್ರೋತ್ಸವ, ಜನ್ಮಾಟವಿ, ತಪೋವನಗಮನ, ಪ್ರಜ್ಞೆಯ ರಾಜ್ಯಭಾರ, ಅಭಯಮತಿ-ಅಭಯರುಚಿ ಮತ್ತು ಉಪಸಂಹಾರ- ಎಂಬ ಹೆಸರುಗಳ ಒಟ್ಟು ೨೪ ಅಧ್ಯಾಯಗಳನ್ನು ಈ ಕಾದಂಬರಿಯು ಒಳಗೊಂಡಿದೆ.

ವಾಸ್ತವವಾಗಿ ಈ ಕಾದಂಬರಿಯು ವಿಷಮ ದಾಂಪತ್ಯ ಹಾಗೂ ಅಹಿಂಸೆಯ ಮಹತ್ವವೆಂಬ ಪ್ರಬಲ ಕಥಾವಸ್ತುವನ್ನೊಳಗೊಂಡ ಹಳಗನ್ನಡ ಕವಿ ಜನ್ನನ 'ಯಶೋಧರ ಚರಿತ್ರೆ ' ಎಂಬ ಚಂಪೂ ಕಾವ್ಯದ ಪರಿವರ್ತನಾರೂಪದ ಕಾದಂಬರಿ ಅಥವಾ ಒಂದು ಒಳ್ಳೆಯ adaptation. ಕನ್ನಡಕ್ಕೆ ಕಳೆದ ಶತಮಾನದ ಆರಂಭದಲ್ಲಿ ಕಾದಂಬರಿ ಎಂಬ ಹೊಸ ಪ್ರಕಾರವು ಇಂಗ್ಲಿಷ್ ಪ್ರಭಾವದಿಂದ ಬಂದ ಹೊಸತರಲ್ಲಿ ಕಾದಂಬರಿಯನ್ನು ಕರಿತು ನಡೆಯುತ್ತಿದ್ದ ಪ್ರಯೋಗಗಳ ಸರಣಿಯಲ್ಲಿ "ಸುವ್ರತ" ಒಂದು ಬಹು ಮುಖ್ಯ ಕೊಂಡಿ. ಒಂದು ಭಾಷೆಯ ಸಾಹಿತ್ಯ ಸೃಜನಶೀಲವಾಗಿ ಮತ್ತು ಸಮೃದ್ಧವಾಗಿ ವಿಕಾಸಗೊಳ್ಳುವುದೇ ಹೀಗೆ. ಇದರ ಜೊತೆಗೆ ಇಂಗ್ಲಿಷ್, ಮರಾಠಿ, ಬಂಗಾಳಿ ಭಾಷಾ ಕಾದಂಬರಿಗಳ ಅನುವಾದಗಳೂ ಕೂಡ ಕನ್ನಡದಲ್ಲಿ ಬಂದಿವೆ. ಲೇಖಕರು ಬರೆದಿರುವ 'ಅರಿಕೆ'ಯಲ್ಲಿ "ಈ ಕಾದಂಬರಿಯು ಕರ್ಮವಿಲಾಸವನ್ನು ನಿದರ್ಶಿಸುತ್ತದೆ. ಕರ್ಮಗತಿಯು ಅತಿಸೂಕ್ಷ್ಮವಾಗಿ ತಿಳಿಯಲು ಗಹನವಾಗಿರುವ ಪ್ರಯುಕ್ತ, ಜನಗಳ ಪ್ರವೃತ್ತಿಮೂಲಕವಾಗಿಯೇ ವಿವರಿಸಲ್ಪಡಬೇಕು;

ಅದಕ್ಕಾಗಿ, ಒಬ್ಬ ಮಹಾಶಯನ ಚರಿತ್ರೆಯನ್ನು ಅವಲಂಬಿಸಲಾಯಿತು. ಲೋಕವು ಕರ್ಮಾಧೀನವಾಗಿದೆ; ಲೋಕದಲ್ಲಿ ನೆಲೆಯಾಗಿ ನಿಲ್ಲತಕ್ಕದ್ದು ಧರ್ಮವೇ-ಎಂಬ ಮರ್ಮವನ್ನು ತಿಳಿಯಿಸುವುದೇ ಈ ಗ್ರಂಥರಚನೆಗೆ ಮುಖ್ಯೋದ್ದೇಶವು ಎಂದು ಹೇಳಿ ತಮ್ಮ ಕೃತಿಯ ಉದ್ದೇಶವನ್ನು ಸ್ಪಷ್ಟ

ಪಡಿಸಿರುತ್ತಾರೆ. ಒಬ್ಬ ಮಹಾಶಯನ ಚರಿತ್ರೆ ಎಂದರೆ 'ಯಶೋಧರ ಚರಿತ್ರೆ'ಯೇ ಆಗಿದೆ. ಹಾಗೆಯೇ ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ preface ನೊಳಗೆ ಧಾರ್ಮಿಕ ಹಾಗೂ ತಾತ್ವಿಕ ವಸ್ತುಗಳನ್ನು ಕಾದಂಬರಿ ಪ್ರಕಾರದಲ್ಲಿ ನಿರ್ವಹಿಸುವುದು ಎಷ್ಟು ಸೂಕ್ಷ್ಮ ಹಾಗೂ ಕ್ಲಿಷ್ಟ ಎಂಬ ವಿಚಾರವನ್ನು ಚರ್ಚಿಸಿರುತ್ತಾರೆ. ಪ್ರಾಯೋಗಿಕವಾಗಿ, ಈ ಕಾದಂಬರಿಕಾರರು ಆ ಕಾಲದಲ್ಲಿ ತಮಗಿದ್ದ ಇತಿಮಿತಿಯೊಳಗೆ ಈ ಧಾರ್ಮಿಕ ಹಾಗೂ ತಾತ್ವಿಕ ವಸ್ತುವನ್ನು ಸಮರ್ಥವಾಗಿಯೇ ನಿರ್ವಹಿಸಿರುತ್ತಾರೆ. " Of all the themes, religious, or philosophic ones are the most difficult of treatment in a novel and require the highest powers of imagination and analysis to be brought into play." ಎಂಬುದು ಕೃತಿಕಾರರ ಅಭಿಪ್ರಾಯ.

ಯಶೋಧರ ಚರಿತ್ರೆ ಕಾವ್ಯದ ಕಾದಂಬರೀ ರೂಪದ ಅಳವಡಿಕೆಯಾದ ಈ ಕೃತಿಯಲ್ಲಿ ಲೇಖಕರು ಹೆಸರುಗಳಿಗೆ ಸಂಬಂಧಿಸಿದಂತೆ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡಿರುತ್ತಾರೆ.

| **ಯಶೋಧರ ಚರಿತ್ರೆ** | **ಸುವ್ರತ** |
|---|---|
| ಮಾರಿದತ್ತ | ಅರಿಷ್ಟಕರ್ಮ |
| ಯಶೌಘ | ಸುಬಲ |
| ಯಶೋಧರ | ಸುವ್ರತ |
| ಅಮೃತಮತಿ | ಚಂದ್ರಾಳಿ |
| ಅಷ್ಟವಂಕ( ಮಾವಟಿಗ) | ಕೃಕಲ( ಬ್ರಾಹ್ಮಣ) |

ಈ ಕೃತಿಯು ಯಶೋಧರ ಚರಿತ್ರೆಯ ತದ್ವತ್ತಾದ ಗದ್ಯಾನುವಾದವೇನಲ್ಲ. ಅನೇಕ ಸ್ವತಂತ್ರ ಕಲ್ಪನೆಗಳು ಔಚಿತ್ಯಪೂರ್ಣವಾಗಿ ಬದಲಾವಣೆಗಳು ಈ ಕೃತಿಯಲ್ಲಿ ಕೆಲವೆಡೆ ಕಾಣಿಸಿಕೊಂಡಿದೆ. ಮೂಲ ಕಾವ್ಯದಲ್ಲಿರುವ ನಾಲ್ಕು ಅವತಾರಗಳನ್ನು ೨೪ ಅಧ್ಯಾಯಗಳಿಗೆ ಹೊಂದಿಸಿಕೊಂಡು ಕಾದಂಬರಿ ಯೊಂದರ ಆಕೃತಿಗೆ ಅದನ್ನು ಅಳವಡಿಸಿ ಕನ್ನಡದಲ್ಲಿ ಕಾದಂಬರಿ ಪ್ರಕಾರವು ವಿಕಾಸವಾಗುತ್ತಿರುವುದರ ನಿದರ್ಶನವೆಂಬಂತೆ ವಸ್ತುನಿರ್ವಹಣೆಯನ್ನು ಮಾಡಿರುವುದು ಈ ಕೃತಿಯ ವಿಶೇಷ. ಐತಿಹಾಸಿಕವಾಗಿ ಮತ್ತು ಗುಣಾತ್ಮಕವಾಗಿ ಈ ಕೃತಿಗೆ ಕನ್ನಡ ಸಾಹಿತ್ಯಲೋಕದಲ್ಲಿ ಒಂದು ಪ್ರಮುಖ ಸ್ಥಾನವಿದೆ. ಈ ಕೃತಿಯ ಒಂದು ವಾಕ್ಯವೃಂದವನ್ನು ಗಮನಿಸಿ:–

ಸುವ್ರತನು ಬಂದ ವಿದ್ವಾಂಸರನ್ನು ಆದರಿಸಿ; ಅವರ ವಿದ್ಯೆಯನ್ನು

ಪರಾಮರ್ಶಿಸಿ, ಅವರವರ ಯೋಗ್ಯತೆಗೆ ತಕ್ಕಂತೆ ಮರ್ಯಾದೆಯನ್ನು ಮಾಡುತ್ತಿದ್ದುದೂ ಅಲ್ಲದೆ, ಕೇವಲ ಪ್ರವೀಣರಾದವರನ್ನು ತನ್ನ ಆಸ್ಥಾನವನ್ನು ಬಿಟ್ಟು ಇತರ ಕಡೆಗೆ ಹೋಗಗೊಳಿಸದೆ, ತನ್ನಲ್ಲಿಯೇ ನಿಲ್ಲಿಸಿಕೊಳ್ಳುತ್ತಿದ್ದನು. ತನ್ನ ಹತ್ತಿರ ನಿಂತ ವಿದ್ವಾಂಸರಿಗೆ, ತನ್ನ ಆಸ್ಥಾನಕ್ಕೆ ಸಮೀಪದಲ್ಲಿದ್ದ ಉದ್ಯಾನವನದಲ್ಲಿ ಬೀಡಾರಗಳನ್ನು ಮಾಡಿಕೊಟ್ಟು ತನ್ನ ಮೋತೀಖಾನೆಯಿಂದ ಸಕಲ ಸಂಭಾರಗಳನ್ನೂ ಒದಗಿಸಿಕೊಡುತ್ತ, ನೋಡಿಕೊಳ್ಳುತ್ತಿದ್ದನು.

ಸುಮಾರು ಇದೇ ಕಾಲದ ಆಸುಪಾಸಿನಲ್ಲಿ ಎಂ.ಟಿ. ವಲ್ಲಭಯ್ಯಂಗಾರ್ಯರಿಂದ ರಘೂನಾಥಸಿಂಹ–(೧೯೨೨–ಬಂಗಾಳಿ ಭಾಷೆ ಯಿಂದ ಅನುವಾದ) ಮತ್ತು ಎಸ್.ಜಿ.ಗೋವಿಂದರಾಜ ಅಯ್ಯಂಗಾರ್ಯ ರಿಂದ ಪ್ರಿಂರೋಜವಿಜಯಂ–(೧೯೧೩–ಗೋಲ್ಡ್ ಸ್ಮಿತ್‌ನ ವಿಕಾರ್ ಅಫ್ ವೇಕ್ಫೀಲ್ಡ್‌ನ ಅನುವಾದ) ಎಂಬ ಕೃತಿಗಳು ಹಾಗೂ ಇನ್ನೂ ಹಲವಾರು ಕೃತಿಗಳು ಪ್ರಕಟ ವಾಗಿರುವುದು ಕನ್ನಡ ಕಾದಂಬರೀ ಪ್ರಕಾರವು ಗುಣಾತ್ಮಕವಾಗಿ ಬೆಳೆಯುವುದಕ್ಕೆ ಸಹಕಾರಿಯಾಯಿತು. ಇಂತಹ ಕೃತಿಗಳ ಗದ್ಯವು ಅಂದಿನ ಸಂದರ್ಭದ ಕನ್ನಡ ಗದ್ಯವೈವಿಧ್ಯವನ್ನು ಕೂಡ ನಮಗೆ ಪರಿಚಯ ಮಾಡಿಕೊಡುತ್ತದೆ. ಈ ಕಾದಂಬರಿಯ ಇನ್ನೊಂದು ವಿಶೇಷವೆಂದರೆ ಕೆಲವೆಡೆ ಲೇಖಕರು ಯಶೋಧರ ಚರಿತ್ರೆ ಕಾವ್ಯದ ಹಲವು ಪದ್ಯಗಳನ್ನು ಹಾಗೆಯೇ ಉಲ್ಲೇಖ ಮಾಡಿರುವುದು ಮತ್ತು ಇದರ ಜೊತೆಗೆ ವರ್ಣನೆಗಳ ಸಂದರ್ಭದಲ್ಲಿ ಹಲವಾರು ಸಂಸ್ಕೃತ ಕಾವ್ಯಗಳು ಹಾಗೂ ಪಂಪರಾಮಾಯಣ, ತಿರುಮಲಾರ್ಯ ಮತ್ತು ಅನೇಕ ಕನ್ನಡ ಕವಿಗಳ ಕಾವ್ಯದ ಪದ್ಯಗಳನ್ನು ಬಳಸಿಕೊಂಡಿರುವುದು. ಒಟ್ಟಿನಲ್ಲಿ ಎಂ.ಎ.ರಾಮಾನುಜಯ್ಯಂಗಾರ್ಯರ ಈ ಕೃತಿಯು ಒಂದು ಗಮನಾರ್ಹ ಕೃತಿಯಾಗಿದ್ದು ಸಾಹಿತ್ಯಾಸಕ್ತರ ಹಾಗೂ ಸಂಶೋಧಕರ ಗಮನವನ್ನು ಸೆಳೆದು ಪುಸ್ತಕಲೋಕದಲ್ಲಿ ತನ್ನದೇ ಆದ ಒಂದು ಚಾಪನ್ನು ಮೂಡಿಸಿದೆ.

# ಎಂ.ಟಿ.ವಲ್ಲಭಯ್ಯಂಗಾರ್ಯರ 'ರಘುನಾಥಸಿಂಹ' (1922)

ಎಂ.ಟಿ.ವಲ್ಲಭಯ್ಯಂಗಾರ್ಯರ 'ರಘುನಾಥಸಿಂಹ' ಎಂಬ ಈ ಐತಿಹಾಸಿಕ ಕಾದಂಬರಿಯು 1922ರಲ್ಲಿ ಎರಡನೆಯ ಬಾರಿಗೆ ಮುದ್ರಣಗೊಂಡಿದೆ. ಮುದ್ರಣಗೊಂಡ ಪ್ರತಿಗಳ ಸಂಖ್ಯೆ 1500. ಆಗಿನ ಇದರ ಕ್ರಯ 1 ರುಪಾಯಿ 12 ಆಣೆಗಳು. ವಿ.ಪಿ.ಹಾಸಲು ತರಿಸಿಕೊಳ್ಳುವವರಿಗೆ 6 ಆಣೆ ಪ್ರತ್ಯೇಕ. ಕೋಟೆ ಸಿಟಿ ಮುದ್ರಣಾಲಯ, ಬೆಂಗಳೂರು, ಇಲ್ಲಿ ಅಚ್ಚಾದ ಈ ಕೃತಿ ನಂಜನಗೂಡು-ನಂದಿನೀ-ಹಿತೈಷಿಣೀ-ಮಾತೃಮಂದಿರದಲ್ಲಿ 'ಪ್ರಕಟಿಸಲ್ಪಟ್ಟುದು'. ಈ ಹಿತೈಷಿಣಿ ಬೇರೆ ಯಾರೂ ಅಲ್ಲ-ಆ ಕಾಲದ ಪ್ರಸಿದ್ಧ ಲೇಖಿಕಿ ನಂಜನಗೂಡು ತಿರುಮಲಾಂಬ ಅವರು. ಇದರ ಪ್ರಥಮ ಮುದ್ರಣದ ಕುರಿತ ಮಾಹಿತಿ ಎಲ್ಲೂ ದೊರಕುತ್ತಿಲ್ಲ. ಲೇಖಕರು 1913 ರಲ್ಲಿ ಮತ್ತೊಂದು ಕಾದಂಬರಿಯನ್ನು ಬರೆದಿರುವುದರಿಂದ ಸುಮಾರು 1910ರಲ್ಲಿ ಇದು ಮೊದಲು ಮುದ್ರಣವಾಗಿರಬಹುದೆಂದು ಅಂದಾಜುಮಾಡಲು ಅಡ್ಡಿಯಿಲ್ಲ. ಕೃತಿಯ ಹಿಂದಿನ ರಕ್ಷಾಪುಟದಲ್ಲಿ ಹಿತೈಷಿಣೀ ಮಾತ್ರಮಂದಿರಂ, ನಂಜನಗೂಡು-ಈ ಪ್ರಕಟಣ ಸಂಸ್ಥೆಯ ಜಾಹಿರಾತು ಇದೆ. ಆ ಕಾಲದ ಪುಸ್ತಕ ಪ್ರಕಟಣೆಯ ಜಾಹಿರಾತಿನ ಒಂದು ವಾಕ್ಯ ಗಮನಿಸಿ : **ಪ್ರಕೃತದಲ್ಲಿ ನಮ್ಮ ಕರ್ನಾಟಕನಂದಿನಿಯು ತನ್ನ ತೃತೀಯ ವರ್ಷದ ಒಂಬತ್ತನೆಯ ಸಂಚಿಕೆಯಲ್ಲಿ ಅಂದು ತನ್ನ ಸೋದರಿಯರಿಗೆ ಕೊಟ್ಟಿದ್ದ ಆಶ್ವಾಸನದಂತೆ ಇಂದಿನ ಕರ್ನಾಟಕನಂದಿನಿಯೇ ಭಾರತನಂದಿನಿಯೇ ಭಾರತನಂದಿನಿಯೆನಿಸುವಳು. ನಂದಕಂದನ ದಯೆಯಿಂದ ಭಾರತನಂದಿನಿಯೆನಿಸಿ ಮುಂದಿನ ವಿಜಯದಶಮಿಯಿಂದ ಮತ್ತೆ ಅಜ್ಞಾತವಾಸವನ್ನುಳಿದು ನಿಯಮವನ್ನು ಹಿಡಿದು, ಕಾಲಕ್ರಮವನ್ನು ಅನುಸರಿಸಿ, ಶುದ್ಧಭಾಷೆ, ಶದ್ಧಭಾವನೆಗಳಿಂದ ಕೂಡಿ, ನಿಷ್ಪಕ್ಷಪಾತವಾಗಿಯೂ ನಿರ್ವಿವಾದವಾಗಿಯೂ ಇರತಕ್ಕ ಉದಾತ್ತ ವಿಚಾರಗಳನ್ನು ಪ್ರತಿಪಾದಿಸುವುದರಿಂದ ಸೋದರಿಯರನ್ನು ಆಪ್ಯಾಯಗೊಳಿಸುವುದನ್ನು**



**ಮುಖ್ಯಗುರಿಯಾಗಿಟ್ಟುಕೊಂಡು ಹೊರಹೊರಡುವವಳಾಗಿರುವಳು.**

**ಅಂದಿನ ಈ ಸಂಸ್ಥೆಯ ವಾರ್ಷಿಕ ವರ್ಗಣಿ= 3 ರೂಪಾಯಿಗಳು ಮತ್ತು ಪೋಷಕರಿಗೆ ವರ್ಗಣಿ=12 ರೂಪಾಯಿಗಳು.** ಪ್ರಸ್ತುತ ಲೇಖಕರು 1913ರಲ್ಲಿ **ಮಾಲಿನೀ** ಎಂಬ ಕಾದಂಬರಿಯನ್ನೂ, 1921ರಲ್ಲಿ 'ಆಧುನಿಕ ನ್ಯಾಯ ವಿಚಾರಣೆಯ ರೂಪದಲ್ಲಿ ಬರೆದ ಪೌರಾಣಿಕ ಕಥಾವಸ್ತು' ವನ್ನುಳ್ಳ **ಅಂಗದನ ಫಿರ್ಯಾದಿ** ಎಂಬ ಕಾದಂಬರಿಯನ್ನೂ ರಚಿಸಿರುತ್ತಾರೆ.

ಆರಂಭದ ಒಳಪುಟಗಳಲ್ಲಿ ಗ್ರಂಥಕರ್ತರಾದ ವಲ್ಲಭಯ್ಯಂಗಾರ್ಯರವರು–"ಸಮರ್ಪಣೆ–ನನ್ನ ಪರಮಗುರುಗಳೂ ಹಿತಾಕಾಂಕ್ಷಿಗಳೂ ಆಗಿದ್ದು ಶ್ರೀಮದ್ರಾಮಾಯಣ ಪಾರಾಯಣ ಮಾಡುತ್ತಿರುವಾಗಲೇ ಶ್ರೀಮದಾಚಾರ್ಯರ ತಿರುವಡಿಯನ್ನೈದಿದ ನನ್ನ ತೀರ್ಥಪಾದರು 'ಮುಡುಂಬೆ ತಿರುಮಲಾಚಾರ್ಯರವರ ಜ್ಞಾಪಕಾರ್ಥವಾಗಿ ಈ ಗ್ರಂಥವು ಸಮರ್ಪಿಸಲ್ಪಟ್ಟಿದೆ–ಗ್ರಂಥ ಕರ್ತ." ಎಂಬ ಒಕ್ಕಣೆಯಿದೆ. ಮತ್ತೊಂದು ಪುಟದಲ್ಲಿ

"ಶ್ರೀಃ॥ ವಂದೇತ್ವಾಂ ಭೂದೇವಿ ಆರ್ಯಮಾತರಂ।
ಜಯತು ಜಯತು ಪದಯುಗಲಂ ತೇ ನಿರಂತರಂ॥'
ಗಂಧೋಜ್ವಲಾಂ ಗಹನಕುಂತಲ ದರ್ಶನೀಯಾಂ
ಶೈಲಸ್ತನೀ ತರಳ ನಿರ್ಝರ ಲಂಬಹಾರಾಂ ॥
ಶ್ಯಾಮಾಂ ಸ್ವತಸ್ತ್ವಿಯುಗ ಸೂಕರಗೇಹೇನೀತ್ವಂ।
ವ್ಯಕ್ತಿಂ ಸಮುದ್ರ ವಸನಾಮುಭಯೀಂ ಬಿಭರ್ಷಿ ॥"

ಎಂಬ ಪ್ರಕಟಣಾ ಸಂಸ್ಥೆಯ ಧ್ಯೇಯ ವಾಕ್ಯದ ಆದರ್ಶ ಶ್ಲೋಕಗಳಿವೆ.

ಈ ಕಾದಂಬರಿಗೆ ಮೂಲ ಆಕರ ಬಂಗಾಳಿ ಭಾಷೆಯ ಆ ಕಾಲದ ಪ್ರಸಿದ್ಧ ಲೇಖಕರಾದ ಶ್ರೀ ರಮೇಶ್ ಚಂದ್ರ ದತ್ತರವರ 'ಜೀವನ ಪ್ರಭಾತ' ಎಂಬ ಐತಿಹಾಸಿಕ ಕಾದಂಬರಿ. ಪೀಠಿಕೆಯಲ್ಲಿ ಗ್ರಂಥಕರ್ತರು ಹೇಳಿರುವ ಈ ಮಾತುಗಳನ್ನು ಗಮನಿಸಿ: "ಇದು ವಂಗ ಭಾಷೆ ಯಲ್ಲಿ ಪ್ರಸಿದ್ಧ ಲೇಖಕ ರಾದ ಶ್ರೀವಾನ್ ರೊಮೇಶ ಚಂದ್ರ ದತ್ತರವರಿಂದ ಬರೆಯಲ್ಪಟ್ಟ 'ಜೀವನ ಪ್ರಭಾತ' ವನ್ನು ಅನುಸರಿಸಿ ಬರೆಯ ಲಾಗಿದೆ. ಈ ಮಾತೃಕೆಯನ್ನು ಆಂಧ್ರ ಭಾಷೆಯಲ್ಲಿ ನನಗೆ ಒದಗಿಸಿ



ಕೊಟ್ಟು, ಭಾಷಾಂತರಿಸಲು ಅನುಮತಿಯನ್ನಿತ್ತ ತೆನಾಲಿ ಆಖ್ಯಾಯಿ ಕಾನಿಲಯದ ವ್ಯವಸ್ಥಾಪಕರಾದ ಶ್ರೀಮಾನ್ ಶಿವಶಾಸ್ತ್ರಿಗಳವರಿಗೆ ತುಂಬ ಕೃತಜ್ಞನಾಗಿರುತ್ತೇನೆ."

ಅಚ್ಚಿನಲ್ಲಿ ತುಂಬಾ ದೋಷಗಳಿದ್ದು ಹಲವಾರು ಕಡೆ ಒಡೆದ ಅಕ್ಷರಗಳೂ ಕೆಲವೆಡೆ ಅಸ್ಪಷ್ಟವಾಗಿರುವ ಅಕ್ಷರಗಳೂ ಇವೆ. ಇವನ್ನು 'ಹಿತೈಷಿಣಿ' ಯವರು ಗುರುತಿಸಿ' ಇನ್ನು ಮುಂದಿನ ಗ್ರಂಥಗಳಿಗೆ ಹೊಸ ಅಕ್ಷರಗಳನ್ನು ಉಪಯೋಗಿಸಿ, ಅಂದವಾಗಿಯೂ ಶುದ್ಧವಾಗಿಯೂ ಪ್ರಕಟಿಸಿ ಇದರಿಂದಾದ ಕೊರತೆಯನ್ನು ತುಂಬಿಸಿಕೊಡುವೆವೆಂದೂ ನಮ್ಮ ಸಹೃದಯವಾಚಕರಲ್ಲಿ ಸವಿನಯವಾಗಿ ನಿವೇದಿಸುವೆವು' ಎಂದು ಗ್ರಂಥಾರಂಭದ 'ನಿವೇದನ' ದಲ್ಲಿ ನಿವೇದಿಸಿ ಕೊಂಡಿದ್ದಾರೆ. ಕೊನೆಯಲ್ಲಿ ೫ ಪುಟಗಳಷ್ಟು ದೀರ್ಘವಾದ ಶುದ್ಧಿಪತ್ರಿಕೆಯನ್ನು ನೀಡಲಾಗಿದೆ. ಶ್ರೀಶಿವಾಜಿ ಮಹಾರಾಜನ ಆಳ್ವಿಕೆಯ ಸಂದರ್ಭದಲ್ಲಿ ಒಬ್ಬ ರಾಜಪುತ್ರನಾಗಿ ಹುಟ್ಟಿದರೂ ಕಡು ಕಷ್ಟಕ್ಕೆ ಗುರಿಯಾಗಿಯೂ ರಾಜಭಕ್ತಿಯನ್ನು ಮೆರೆದ ರಘುನಾಥಸಿಂಹ ಎಂಬ ಧೀರನೇ ಈ ಕತೆಯ ನಾಯಕ. ಅನುವಾದವಾಗಿದ್ದರೂ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಇಂತಹ ವಸುವನ್ನು ಒಳಗೊಂಡ ಕೃತಿ ಕನ್ನಡದಲ್ಲಿ ಆ ಕಾಲಕ್ಕೇ ಹುಟ್ಟಿಕೊಂಡಿರುವುದು ತುಂಬಾ ಔಚಿತ್ಯಪೂರ್ಣವಾಗಿಯೇ ಇದೆ.

ಡೆಮಿ ಅಷ್ಟದಳಾಕಾರದ, 196 ಪುಟಗಳನ್ನೊಳಗೊಂಡ ಈ ಕಾದಂಬರಿ ಯಲ್ಲಿ–ರಘುನಾಥಸಿಂಹ, ಸರಳಬಾಲೆ, ಷಾಯಿಸ್ಥಾಖಾನ, ಪುರೋಹಿತನು, ರಾಜಾಜಸವಂತಸಿಂಹ, ಶ್ರೀಶಿವಾಜಿ, ಶುಭಕಾರ್ಯವು, ರಾಜಗಡಕ್ಕೆ ಪ್ರಯಾಣ, ರಾಜಾಜಯಸಿಂಹ, ದುರ್ಗದವಿಜಯ, ಬಹುಮಾನ, ಚಂದ್ರರಾಯ, ಭವಾನೀಮಂದಿರ, ಗೋಸಾಯಿ ಸೀತಾಪತಿ, ರಾಮಸಿಂಹ, ದೆಹಲಿ ನಗರ, ಆಗಂತುಕ, ಔರಂಗಜೇಬ, ಅಸ್ವಸ್ಥತೆ, ಆರೋಗ್ಯ, ಪರಿವರ್ತನೆ, ಪುನರಾಗಮನ, ಆಗಮನ, ವಿಚಾರಣೆ, ಉಪಸಂಹಾರ– ಎಂಬ ಶೀರ್ಷಿಕೆಯ ಒಟ್ಟು 25 ಅಧ್ಯಾಯಗಳಿವೆ. ಮಹಾದೇವಜೀ ನ್ಯಾಯಶಾಸ್ತ್ರಿ ಎಂಬ ಬ್ರಾಹ್ಮಣನ ವೇಷಾಂತರದಲ್ಲಿದ್ದ ಶಿವಾಜಿಯು ಷಾಯಿಸ್ತಾಖಾನನಿಗೆ ಒಂದೆರಡು ಕಡೆ ಸಂಸ್ಕೃತದ ಶ್ಲೋಕಗಳಲ್ಲಿ ಉತ್ತರ ನೀಡುವ ಸಂದರ್ಭ ಕುತೂಹಲಕಾರಿಯಾಗಿದೆ. 'ಸಿಂಹಗಢದ ವಾರ್ತೆಯೇನು?' ಎಂದಾಗ ಅದಕ್ಕುತ್ತರವಾಗಿ

**'ಸನ್ತಿ ನದ್ಯೋದಂಡಕೇಷು ತಥಾ ಪಂಚವಟೀವನ।**
**ಸರಯೂ ವಿಚ್ಛೇದದುಃಖಂ ರಾಘವಸ್ತು ಕಥಂಸಹೇತ್।'**

'ಎಂದರೆ' ಸಿಂಹಗಢ ಮೊದಲಾದ ಅನೇಕ ದುರ್ಗಗಳಿದ್ದರೂ ಪೂನಾ ನಿಮ್ಮ ಕೈಲಿ ಸಿಕ್ಕಿರುವುದು. ಶಿವಾಜೀ ಪ್ರಭುವು ತದ್ವಿಯೋಗ ಸಂತಾಪವನ್ನು ಹೇಗೆ ಮರೆಯುವನು' ಎಂದು ಹೇಳುವನು. ಮತ್ತೊಂದು ಶ್ಲೋಕ :

'ನವಿಜ್ಞಾಪಯಿತುಂ ಶಕ್ತಃ ಸ್ವಾಭಿಲಾ ಷಂಹಿಜಾತಕಃ।
ಜ್ಞಾತ್ವಾತು ತಂ ಜಲಧರ ಪರಿತೋಷಯತಿ ಯಾಚಕಂ॥'

(ಕೆಲವು ಪಟ್ಟಣಗಳನ್ನು ಕಳೆದುಕೊಂಡ ನಮ್ಮ ಪ್ರಭುಗಳು ಸಂಧಿ ಮಾಡಿಕೊಳ್ಳುವುದಕ್ಕೆ ಕೂಡ ಲಜ್ಜೆಪಡುವರು. ಅವರ ಮನೋರಥವನ್ನು ಗ್ರಹಿಸಿ ಅನುಗ್ರಹಪೂರ್ವಕವಾಗಿ ಯಾವುದನ್ನು ಕೊಟ್ಟರೂ ಅದನ್ನು ಅಂಗೀಕರಿಸುವರು). 19ನೆಯ ಶತಮಾನದ ಮೊದಲ ಪಾದದಲ್ಲಿ ಕನ್ನಡದಲ್ಲಿ ಕಾದಂಬರೀ ಪ್ರಕಾರ ಶಿಲ್ಪವಿನ್ಯಾಸದ ದೃಷ್ಟಿಯಿಂದ ಮತ್ತು ಗುಣಾತ್ಮಕವಾಗಿ ವಿಕಾಸಗೊಳ್ಳುತ್ತಿದ್ದ ಕಾಲಘಟ್ಟದಲ್ಲಿ ಬಂದಂತಹ ಈ ಕಾದಂಬರಿಯು ಆಂದಿನ ಕನ್ನಡ ಕಾದಂಬರಿಗಳ ರಾಚನಿಕ ಸ್ವರೂಪವನ್ನು ನಮಗೆ ತಿಳಿಸಿಕೊಡುತ್ತದೆ. ಈ ನಿಟ್ಟಿನಲ್ಲಿ ಈ ಕೃತಿಗೆ ಐತಿಹಾಸಿಕ ಮಹತ್ವವಿದೆ.

# ಹೇಮಚಂದ್ರರಾಜವಿಲಾಸ (1899)–ಎಂ.ಎಸ್.ಪುಟ್ಟಣ್ಣ

'ಷೇಕ್ಸ್‌ಪೀರ್ ಮಹಾಕವಿಯಿಂದ ರಚಿಸಲ್ಪಟ್ಟ ಕಿಂಗ್‌ಲೀರ್ ಎಂಬ ನಾಟಕದ ಭಾಷಾಂತರವಾದ 'ಹೇಮಚಂದ್ರರಾಜ ವಿಲಾಸ' ಎನ್ನುವ ಈ ಕೃತಿಯನ್ನು ಎಂ.ಎಸ್.ಪುಟ್ಟಣ್ಣ ಅವರು ರಚಿಸಿರುತ್ತಾರೆ. ಡೆಮ್ಮಿ ಅಷ್ಟದಳ ಆಕಾರದ ೫+೧೨೧ ಪುಟಗಳ ೩ ರೂ ಕ್ರಯದ ಈ ಕೃತಿಯು ವಿಕಾರಿ ಸಂವತ್ಸರ ಮಾರ್ಗಶಿರ ಮಾಸ ಅರ್ಥಾತ್ ಡಿಸೆಂಬರ್ ೧೮೯೯ರಲ್ಲಿ ಕಾಕ್ಸ್‌ಟನ್ ಪ್ರೆಸ್, ೧೭, ಸೌತ್ ಪೆರೇಡ್, ಬೆಂಗಳೂರು–ಇಲ್ಲಿ ಮುದ್ರಣಗೊಂಡಿದೆ. ೨೬ ಪ್ರಕರಣಗಳಿಂದ ಕೂಡಿದ ೫ ಅಂಕಗಳುಳ್ಳ ಈ ನಾಟಕವು ಗದ್ಯಪದ್ಯ ಮಿಶ್ರ ಅನುವಾದವಾಗಿದ್ದು ಆರಂಭದಲ್ಲಿ ಗ್ರಂಥಕರ್ತರು ಇಂಗ್ಲಿಷ್ ಮತ್ತು ಕನ್ನಡಗಳೆರಡರಲ್ಲಿಯೂ ಪೀಠಿಕೆಯನ್ನು ಬರೆದಿದ್ದಾರೆ. ' ಈ ತರ್ಜುಮೆಯು ಮೈಸೂರಲ್ಲಿ ಪ್ರಚುರವಾಗುತ್ತಿದ್ದ ಹಿತಬೋಧಿನಿ ಎಂಬ ಮಾಸಪತ್ರಿಕೆಯಲ್ಲಿ ೧೮೮೫ನೆಯ ಇಸವಿಯಲ್ಲಿ ಮೂರು ತಿಂಗಳ ಸಂಚಿಕೆಯೊಳು ಸ್ವಲ್ಪ ಸ್ವಲ್ಪವಾಗಿ ಅಚ್ಚಾಯಿತು.' ಎಂದು ಲೇಖಕರೇ ಹೇಳಿರುವುದರಿಂದ ಈ ಕೃತಿಯು ೧೮೮೫ರಲ್ಲಿಯೇ ಬೆಳಕು ಕಂಡಿದೆ. 'ಯಳಂದೂರು ಜಹಗೀರು ದಾರರಾಗಿಯೂ ಮೈಸೂರು ಸರ್ಕಾರಕ್ಕೆ ಮಂತ್ರಾಲೋಚನ ಸಭೆಯ ಕೌನ್ಸಿಲ ರಾಗಿಯೂ ಇರುವ ಪೂರ್ಣ ನ.ಕೃಷ್ಣಮೂರ್ತಿಗಳು ಬಿ.ಎಲ್., ಎ.ಇ.ಐ.ಇ. ಯವರ ಪ್ರಥಮಾಲೋಕನಕ್ಕಾಗಿ ಅವರ ಅಪ್ಪಣೇ ಪಡೆದು ಕನ್ನಡ ಭಾಷೆಯಲ್ಲಿ ಅವರಿಗಿರುವ ಅಭಿಮಾನ ಕ್ಕೋಸ್ಕರ ಈ ಗ್ರಂಥವು ಒಪ್ಪಿಸಲ್ಪಟ್ಟಿದೆ'. ಕೃತಿಕಾರರು ಪೀಠಿಕೆಯಲ್ಲಿ "ಷೇಕ್ಸ್ಪಿರ್ ಎಂಬ ಇಂಗ್ಲಿಷ್ ಮಹಾಕವಿಯಿಂದ ರಚಿಸ ಲ್ಪಟ್ಟಿರುವ 'ಕಿಂಗ್‌ಲೀರ್' ಎಂಬ ಮಹಾನಾಟಕವು ಈ ಕವಿ ಬರೆದ ಗ್ರಂಥಗಳಲ್ಲೆಲ್ಲಾ ಸರ್ವೋತ್ತಮ ವಾದ್ದು, ಯಾವ ಇತರ ಭಾಷೆಗಳಲ್ಲಿಯೂ ಇಂಥ ಉತ್ತಮವಾದ ಗ್ರಂಥವು ರಚಿಸಲ್ಪಟ್ಟಿಲ್ಲ ಎಂದು ಅನೇಕ ಜನ ಪಂಡಿತರು ಅಭಿಪ್ರಾಯ ಪಟ್ಟಿರುತ್ತಾರೆ. ಇದರಲ್ಲಿ ತೋರಿಸಿರುವ ಸದ್ಗುಣದುರ್ಗುಣಗಳು, ತಂದೆಗೆ ಮಗಳಲ್ಲಿರುವ ಅತಿಶಯವಾದ ವಾತ್ಸಲ್ಯ, ಅತಿ


TRANSLATION OF
SHAKESPEARE'S KING LEAR
KANARESE
Bangalore:



ಹೇಯವಾದ ಪಿತೃದ್ರೋಹ, ಸ್ತ್ರೀಯರಲ್ಲಿರತಕ್ಕ ಉತ್ತಮಾಧಮ ಗುಣಗಳು, ನಿಜವಾದ ಹುಚ್ಚು ಸುಳ್ಳು ಹುಚ್ಚು, ಅಚ್ಚ ರಾಜಭಕ್ತಿ ಆತ್ಮಾರ್ಥವಾದ ರಾಜಭಕ್ತಿ, ಇವೇ ಮೊದಲಾದ ಗುಣದೋಷಗಳನ್ನು ವಿಚಿತ್ರವಾದ ರೀತಿಯಲ್ಲಿ ವಿವರಿಸಿರುವ ಕಾರಣ ಸರ್ವೋತ್ತಮವಾದ ಗ್ರಂಥವೆಂದು ಅನೇಕರು ಪರಿಭಾವಿಸಿದ್ದಾರೆ. ಹೀಗೆ ಈ ನಾಟಕದಲ್ಲಿ ತೋರಿಸಿರುವ ಜಗದ್ವಿಲಕ್ಷಣವಾದ ಬುದ್ಧಿಯನ್ನೂ ಕೌಶಲವನ್ನೂ ನಮ್ಮ ಕನ್ನಡಿಗರು ತಿಳಿದುಕೊಳ್ಳಲು ಸ್ವಲ್ಪ ಮಟ್ಟಿಗಾದರೂ ಅನುಕೂಲ ಪಡಿಸಿಕೊಡಬೇಕೆಂದು ನನಗೆ ಆಶೆ ಹುಟ್ಟಿತು. ಈ ಗ್ರಂಥವನ್ನು ಕಥಾ ರೂಪವಾಗಿಯಾಗಲಿ ಕಾವ್ಯರೂಪವಾಗಿಯಾಗಲಿ ಕನ್ನಡಿಸಿದರೆ, ಕವಿಯ ಆಶಯವನ್ನು ಸರಿಯಾಗಿ ಕಂಡು ಹಿಡಿದು ಭಾಷಾಂತರ ಮಾಡತಕ್ಕ ಶಕ್ತಿ ನನಗಿಲ್ಲವಾಗಿ, ಎಲ್ಲಿಯಾದರೂ ನನ್ನ ಬುದ್ಧಿ ಮೋಸ ಹೋಗಿ ಅಪಾರ್ಥವನ್ನು ಕಲ್ಪಿಸಿಯೇನಲ್ಲ ಎಂದು ಭಯಗೊಂಡು, ಸಾಧ್ಯವಾದ ಮಟ್ಟಿಗೂ ಮೂಲಕ್ಕೆ ಅನುಸಾರವಾಗಿರಲೆಂದು ವಾಕ್ಯರೂಪವಾಗಿಯೇ ಈ ನಾಟಕವನ್ನು ಕನ್ನಡಿಸಿದೆ.'– ಹೀಗೆ ಈ ಕೃತಿಯನ್ನು ಏಕೆ ಮತ್ತು ಹೇಗೆ ಈ ರೀತಿ ಕನ್ನಡಕ್ಕೆ ತರ್ಜುಮೆ ಮಾಡಿದ್ದೇನೆಂಬುದಕ್ಕೆ ಕಾರಣವನ್ನು ನೀಡಿರುತ್ತಾರೆ. ೧೯ನೆಯ ಶತಮಾನದ ಅಂತ್ಯ ಭಾಗದಲ್ಲಿ ಮೈಸೂರಿನ ಆಸುಪಾಸಿನಲ್ಲಿ ರೂಢಿಯಲ್ಲಿದ್ದ ಆಡುಮಾತನ್ನು ಪುಟ್ಟಣ್ಣನವರು ಈ ನಾಟಕದಲ್ಲಿ ಬಳಸಿದ್ದಾರೆ. ನಾಟಕದ ಪಾತ್ರಪ್ರಪಂಚ ಕನ್ನಡೀಕರಣಗೊಂಡಿದೆ. ಇಂಗ್ಲಿಷ್ ನಾಟಕದ ಪಾತ್ರಗಳ ಹೆಸರುಗಳಿಗೆ ಸಂವಾದೀ ಹೆಸರುಗಳನ್ನು ಗಮನಿಸಿ:

1. Lear-King of Britain ಹೇಮಚಂದ್ರರಾಜ–ನೀಲಪುರಿ ಅರಸು

2. King of France ಅನಂಗರಾಯ–ಮಾರದೇಶದ ದೊರೆ

3. Earl of Kent ನಿಷ್ಕಂಟಕ–ಸಾಮಾಜಿಕ

4. Earl of Gloucester ದುಃಖಸಾರ–ಸಾಮಾಜಿಕ

5. Edmund (Bastard son of Gloucester) ಕುಮಂತ್ರ–ದುಃಖಸಾರನ ಪ್ರಿಯಪತ್ನೀಮಗ

6. Duke of Carnwall ಕುಟಿಲ–ಧೊರೆಯ ೨ನೇ ಮಗಳ ಗಂಡ

7. Duke of Albany ಭದ್ರನಾಥ-ದೊರೆಯ ಹಿರೇಮಗಳ ಗಂಡ

8. Goneril(Wife of Duke of Albany) ನಾಗವೇಣಿ-ಧೊರೆಯ ಹಿರೇಮಗಳು

9. Regan (Wife of Duke of Carnwall) ವಿಷಜೆ-ಧೊರೆಯ ನಡುಕಲ ಮಗಳು

10. Cordelia ಇಂದುಕಲೆ-ಧೊರೆಯ ಕಿರೀಮಗಳು

11. Edgar (Son of Gloucester) ಶುಕ್ಲಚಂದ್ರ-ದುಃಖಸಾರನ ಔರಸಪುತ್ರ

12. Oswald (Steward to Goneril) ರಾಹುಕ-ನಾಗವೇಣಿಯ ಹರಿಕಾರ.

ನಾಟಕದಲ್ಲಿ ಬಹುತೇಕ ಆಡುಮಾತಿನ ಗದ್ಯದ ನಡುವೆ ೫ ಕಂದಪದ್ಯಗಳೂ, ೧ ಭಾಮಿನೀಷಟ್ಪದಿ, ೧ ತ್ರಿಪದಿ, ೩ ಹೊಸ ಬಗೆಯ ಹಾಡು ಮತ್ತು ೧ ಜೋಗಿ ಹಾಡಿನ ಮಟ್ಟಿನ ಹಾಡು-ಇವುಗಳನ್ನು ಕೃತಿಕಾರರು ಮೂಲದ ಪದ್ಯಕ್ಕೆ ಸಂವಾದಿಯಾಗಿ ರಚಿಸಿದ್ದಾರೆ. ನಿದರ್ಶನಕ್ಕಾಗಿ ತ್ರಿಪದಿ ಹಾಗೂ ಜೋಗೀಹಾಡಿನ ಮಟ್ಟಿನ ಹಾಡುಗಳನ್ನು ಗಮನಿಸಬಹುದು. (ತ್ರಿಪದಿಗೆ ಕೊನೆಯಲ್ಲಿ ಸರ್ವಜ್ಞ ಎಂದು ಸೇರಿಸಿರುವುದನ್ನು ಗಮನಿಸಿ)

Then they for their sudden joy did weep,| And I for sorrow sung,|That such a king should play **bo-peep**,|And go the fools among | (bo-peep=play childish games)

ಅತ್ತರವರಾಮುದಕೆ ವ್ಯಥೆಗೆ ನಾ ಪಾಡಿದೆ ।
ಇಂತಪ್ಪ ಧೊರೆಯು ಇಂತಾಡಿಪೋಲಲು ।
ಸಂತೆ ಕೋಡಗವ, ಸರ್ವಜ್ಞ॥

ಇಂಗ್ಲಿಷಿನ ಪದ್ಯ ಮತ್ತು ಸಂವಾದಿಯಾದ ಕನ್ನಡದ ಜೋಗಿಹಾಡಿನ ಮಟ್ಟಿನ ಹಾಢನ್ನು ಗಮನಿಸಿ:

He that keeps nor crust nor crum, |
Weary of all, shall want some ॥

ಹಿಟ್ಟಿನ ಮುರುಕ ಕೂಡಾ ಇರಿಸದೆ ।
ರೊಟ್ಟಿಯ ಚೂರಾ ಕೂಡಾ ಇರಿಸದೆ ॥
ಕೊಟ್ಟಂಗೆ ಏನೇನು ಇಲ್ಲವೈ ।
ಹರಹರಾ ಜಯತು ಜಯತು ॥

ಹಾಗೆಯೇ ಹೊಸಬಗೆಯ ಹಾಡಿನ ಎರಡೂ ಭಾಷೆಗಳ ಮಾದರಿಯನ್ನು ಗಮನಿಸಬಹುದು:

He that has and a little thing wit,-|
With hey, ho, the wind and the rain,- ||
Must make content with his fortunes fit,|
For the rain it raineth everyday ||

ಬುದ್ಧಿ ಲವವನುಳ್ಳ ಮನುಜ ।
ಮಳೆಯು ಗಾಳಿ ಬೀಸುತೀದೆ ॥
ಸಧ್ಯಕ್ಕೆ ಸಹಿಸಬೇಕು ।
ಮಳೆಯು ನಿತ್ಯ ಹುಯ್ಯುತೀದೆ ॥

ಇಲ್ಲಿ ಪುಟ್ಟಣ್ಣನವರು ದ್ವಿತೀಯಾಕ್ಷರ ಪ್ರಾಸವನ್ನು ಇಟ್ಟೂ ಬಿಟ್ಟೂ ಪ್ರಯೋಗ ಮಾಡಿರುವುದು ಗಮನೀಯ. **ಗೋವಿಂದ ಪೈಗಳಿಗಿಂತ ಸಾಕಷ್ಟು ಮುಂಚೆಯೇ** ಪುಟ್ಟಣ್ಣನವರಲ್ಲಿ ಪ್ರಾಸತ್ಯಾಗದ ಹಂಬಲ ಕಾಣಿಸಿಕೊಂಡಿರುವುದಕ್ಕೆ ಇದು ಒಳ್ಳೆಯ ನಿದರ್ಶನ. ಕೆಲವೆಡೆ ಕೃತಿಕಾರರು ಮೂಲವನ್ನು ಅಲ್ಪಸ್ವಲ್ಪ ಮಾರ್ಪಾಟು ಮಾಡಿಕೊಂಡಿರುವುದುಂಟು. ಉದಾಹರಣೆಗೆ ೩ನೇ ಅಂಕದ ೨ನೇ ಪ್ರಕರಣದ ಕೊನೆಯ ಇಂಗ್ಲಿಷಿನ ೧೩ ಸಾಲಿನ ಪದ್ಯವನ್ನು ಬಿಟ್ಟುಬಿಟ್ಟಿದ್ದಾರೆ. ಅದನ್ನು ಗಮನಿಸಿ:

I'll speak a prophecy ere I go: |
When priests are more in word than matter ; |
When brewers mar their malt with water; |
When nobles are their tailor's tutors;|
No heretics burn'd, wenchers' suitors,|
When every case in law is right;|
No squire in debt, nor no poor knight;|
When slanders do not live in tongues;|
Nor cutpurses come not to throngs,|
Then shall the realm of Albion|
Come to great confusion:|
Then comes the time, who lives to see't,|
That going shall be used with feet.|

೧೯ನೆಯ ಶತಮಾನದ ಕೊನೆಗೆ ಷೇಕ್‌ಸ್ಪಿಯರ್ ಮಹಾಕವಿಯ ಪ್ರಬಲ ನಾಟಕವೊಂದನ್ನು ಅಷ್ಟು ಹಿಂದೆಯೇ ಕನ್ನಡಕ್ಕೆ ರೂಪಾಂತರಿಸಿದ ಕೀರ್ತಿ ಮೈ. ಸೂ. ಪು ಅವರಿಗೆ ಸಲ್ಲುತ್ತದೆ.

# ಹೊಸಕೆರೆ ಚಿದಂಬರಯ್ಯನವರ " ಕೃಷ್ಣಮಹೀಶ್ವರೀ "(1910)
## [Krishna and mahishwari ( A Historical Drama)]

ಶ್ರೀಕೃಷ್ಣಸೂಕ್ತಿಯಗ್ರಂಥಮಾಲಿಕೆ ನಂಬರು 14ನೆಯ ಕೃತಿ **'ಕೃಷ್ಣಮಹೇಶ್ವರೀ'**(ಮೈಸೂರು ದೇಶದ ಚರಿತ್ರೆಯ ನಾಟಕಾನುವಾದ) ನಾಟಕವನ್ನು "ಸುಶೀಲಾಪರಿಣಯ, ಸ್ತ್ರೀಧರ್ಮ ಸಂಗ್ರಹ, ನೀತಿಸಾರ, ತಾರಾನಾಥ, ಕಾಲಾಂತಕ, ಮಾಧವರಾವ್ ಸಿಂಧೆ, ಗುಣ ನಿರೂಪಣೆ- ಮೊದಲಾದ ಉದ್ಗ್ರಂಥಗಳನ್ನು ವಿರಚಿಸಿರುವ ದಾವಣಗೆರೆಯ ಎ.ವಿ.ಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದ" **ಎಚ್.ಚಿದಂಬರಯ್ಯ** ಅವರು ರಚಿಸಿರುತ್ತಾರೆ. ಇವರೇ ಸುಮಾರು೭೦ ಪುಸ್ತಕ ಹಾಗೂ ನೂರಾರು ಲೇಖನಗಳನ್ನು ಬರೆದ ಹೊಳೇನರಸೀಪುರದ ಆಧ್ಯಾತ್ಮಪ್ರಕಾಶಕಾರ್ಯಾಲಯ ಪ್ರಸಿದ್ಧಿಯ **ಹೊಸಕೆರೆ ಚಿದಂಬರಯ್ಯನವರು.** 1910ರಲ್ಲಿ ಮಂಗಳೂರಿನ **'ಧರ್ಮಪ್ರಕಾಶ'** ಮುದ್ರಾಲಯದಲ್ಲಿ ಮುದ್ರಣಗೊಂಡ ಈ ಕೃತಿಯ ಬೆಲೆ 6 ಆಣೆ. 76 ಪುಟಗಳ "ಈ ಚಿಕ್ಕ ಪುಸ್ತಕವು ಮೈಸೂರಿನ ಶ್ರೀಮಾನ್ ಮಹಾರಾಜಾಸಾಹೇಬ್ ಬಹದ್ದೂರ್ ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ- ಪ್ರೌಢಪ್ರತಾಪಾ ಪ್ರತಿಮವೀರನರಪತಿ- ಬಿರುದಂತೆಂಬರಗಂಡ- ಲೋಕೈಕ ವೀರ ಯದು ಕುಲಪಯಃಪಾರಾವಾರ ಕಳಾನಿಧಿಶಂಖ ಚಕ್ರಾಂಕುಶ ಕುಠಾರಮಕರ ಮತ್ಸ್ಯಶರಭಸಾಳ್ವವರಗಂಡ ಭೇರುಂಡ- ಧರಣೀವರಾಹ ಹನು ಮದ್ಗರುಡ ಕಂಠೀರವಾದ್ಯನೇಕಬಿರುದಾಂಕಿತ-**ಶ್ರೀಕೃಷ್ಣ ರಾಜೇಂದ್ರ ಒಡೆಯರ್ ಬಹದ್ದೂರ್ ಜೀ.ಸೀ.ಎಸ್.ಐ.** ಮಹಾಸನ್ನಿಧಾನದಲ್ಲಿ (ಅನುಗ್ರಹ ಪೂರ್ವಕ ವಾದ ಅನುಮತಿ



ಯನ್ನು ಪಡೆದು) ಅತ್ಯಂತ-ರಾಜಭಕ್ತಿ-ವಿಶ್ವಾಸ ಪೂರ್ವಕ ವಾಗಿ ಗ್ರಂಥಕರ್ತನಿಂದ ಸಮರ್ಪಿಸಲ್ಪಟ್ಟಿದೆ. "

ಕನ್ನಡದಲ್ಲಿ ಐತಿಹಾಸಿಕ ನಾಟಕಗಳನ್ನು ಬರೆದ ಸಂಸರಿಗಿಂತ ಸಾಕಷ್ಟು ಮುಂಚೆಯೇ ಹೊಸಕೆರೆ ಚಿದಂಬರಯ್ಯನವರು ಈ ನಾಟಕವನ್ನು ಬರೆದಿರುವುದನ್ನು ನಾವು ಗಮನಿಸಬೇಕು. ಐದು ಅಂಕಗಳ ಈ ನಾಟಕದ ಪೀಠಿಕೆಯಲ್ಲಿ ಗ್ರಂಥಕರ್ತರು "ಪುರಾಣದ ಕಥೆಗಳಿಗಿಂತಲೂ, ಐತಿಹಾಸಿಕವಾದ ಸಂಗತಿಗಳೇ ಈಗಿನ ಜನರಿಗೆ ವಿಶೇಷವಾಗಿ ಆದರಣೀಯವಾಗಿಯೂ, ಜನಾಂಗದ ಅಭ್ಯುದಯಕ್ಕೆ ಅತ್ಯಗತ್ಯವಾಗಿಯೂ ಇರುವುವೆಂದು ಕಂಡುಬಂದುದರಿಂದ, ಅಂತಹ ಐತಿಹಾಸಿಕವಾದ ನಾಟಕವೊಂದನ್ನು ಬರೆಯಬೇಕೆಂದು ಅಪೇಕ್ಷಿಸಿ, ಮಾತೃಭೂಮಿಯಾದ ಮೈಸೂರು ದೇಶದ ಚರಿತ್ರ ಸೂಚಿತವಾದ ಸಂಗತಿಗಳನ್ನೆಲ್ಲಾ ಅಡಕಮಾಡಿ, ಹೊಸಬಗೆಯ ಸಂವಿಧಾನದಿಂದ ಸಾಲಂಕೃತವಾಗಿರುವಂತೆ, ಯಥಾಮತಿಯಾಗಿ ಈ ನಾಟಕವನ್ನು ವಿರಚಿಸಿರುತ್ತೇನೆ." ಎಂದು ಹೇಳಿ ಈ ನಾಟಕರಚನೆಯ ಕಾರಣವನ್ನು ತಿಳಿಸಿದ್ದಾರೆ. **ಹೊಸಬಗೆಯ ಸಂವಿಧಾನದಿಂದ ಸಾಲಂಕೃತ ವಾಗಿರುವಂತೆ ಯಥಾಮತಿಯಾಗಿ** ವಿರಚಿಸಿರುವುದು ಇಲ್ಲಿಯ ವಿಶೇಷ. ಇದು ಆ ಕಾಲದ ಲೇಖಕರ **ಪ್ರಯೋಗಶೀಲತೆಯನ್ನು** ಸೂಚಿಸುತ್ತದೆ. ನಾಟಕಗಳ ಮಹತ್ವವನ್ನು ಕುರಿತು ಚಿದಂಬರಯ್ಯನವರು

"ಸಂಗತಿಗಳು ಸುಖವಾಗಿ ಮನುಷ್ಯನ ಮನಸ್ಸಿನಲ್ಲಿ ನಡುವುದಕ್ಕೆ, ನಾಟಕಗಳೇ ಅತ್ಯುತ್ತಮವಾದ ಸಾಮಗ್ರಿ ಗಳೆಂಬುದು ಎಲ್ಲರಿಗೂ ಅನುಭವ ದಲ್ಲಿರುವ ವಿಷಯವಾಗಿದೆ." ಎಂಬ ಅಭಿಪ್ರಾಯವನ್ನು ಪೀಠಿಕೆಯಲ್ಲಿ ವ್ಯಕ್ತ ಪಡಿಸಿದ್ದಾರೆ ಹಾಗೂ ತಮ್ಮ ಸ್ನೇಹಿತ ಮತ್ತು ಸಹಾಯೋಪಾಧ್ಯಾಯರು ಮ।ರಾ।ವೈ. ಸುಬ್ಬರಾಯರನ್ನು ಕೃತಜ್ಞತಾಪೂರ್ವ ಕವಾಗಿ ವಂದಿಸಿದ್ದಾರೆ.


ನಂಬರು 14.

(ಮೈಸೂರುದೇಶದ ಚರಿತ್ರೆಯ ನಾಟಕಾನುವಾದ)

ಮಂಗಳೂರಿನ

ಧರ್ಮಪ್ರಕಾಶ' ಮುದ್ರಾಲಯದಲ್ಲಿ ಮುದ್ರಿತವಾದುದು.

1910.

ಗದ್ಯಕೃತಿಯಾದ, 6 ವೃತ್ತಗಳು (ಇದರಲ್ಲಿ ಒಂದು ವೃತ್ತ ಸೋಮೇಶ್ವರ ಶತಕದ್ದು), 42ಕಂದ ಪದ್ಯಗಳು ಹಾಗೂ 3ಸಂಸ್ಕೃತ ಶ್ಲೋಕಗಳಿಂದ ಕೂಡಿರುವ ಈ

ನಾಟಕದ ಹಿಂಬದಿಯ ಪುಟಗಳಲ್ಲಿ ಇದೇ ಲೇಖಕರಿಂದ ರಚಿತವಾದ ಸುಶೀಲಾಪರಿಣಯ, ಸ್ತ್ರೀಧರ್ಮಸಂಗ್ರಹ, ನೀತಿಸಾರ, ಕನ್ನಡ ಭಾಷೆಯ ನವೀನಾಭರಣಗಳು- ಕೃತಿಗಳನ್ನು ಕುರಿತ' ಕೆಲವು ಯೋಗ್ಯತಾ ಪತ್ರಗಳು' ಹಾಗೂ ಕಾಲಾಂತಕ, ಶಂಕರ ಕಥಾಮೃತ, ತಾರಾನಾಥ ಮತ್ತು ಮಾಧವರಾವ್ ಸಿಂಧ್ಯ ಕೃತಿಗಳನ್ನು ಕುರಿತ ಜಾಹಿರಾತುಗಳೂ ಪ್ರಕಟವಾಗಿವೆ. ಸೂತ್ರಧಾರ, ನಟಿ, ಸಖಿ ಮುಂತಾದ ಪಾತ್ರಗಳೂ ಹಾಗೂ ನಾಂದಿ, ಪ್ರಸ್ತಾವನೆ, ಭರತವಾಕ್ಯ ಮುಂತಾದ ಪರಿಕಲ್ಪನೆಗಳಿರುವುದರಿಂದ ತಾಂತ್ರಿಕವಾಗಿ ಸ್ವಲ್ಪ ಮಟ್ಟಿಗೆ ಭಾಸನ ನಾಟಕಗಳ ಅನುಸರಣೆ ಇದ್ದಂತಿದೆ.

ಪ್ರಾಚೀನ ಯದುವಂಶದ ಮೂಲಪುರುಷನಾದ ಶ್ರೀಕೃಷ್ಣ-ಈ ನಾಟಕದ ನಾಯಕ. ನಾಟಕದಲ್ಲಿ ಬರುವ ಮೈಸೂರರಸರಾದ ಯದುರಾಜ, ರಾಜೊಡೆಯರು, ಚಿಕ್ಕದೇವರಾಜೊಡೆಯರು, ಮುಮ್ಮಡಿಕೃಷ್ಣರಾಜೊಡೆಯರು, ಚಾಮರಾಜೊಡೆಯರು ಮತ್ತು ಕೃಷ್ಣರಾಜೊಡೆಯರು-ಈ ಆರು ಜನ ಕ್ರಮವಾಗಿ ಶ್ರೀಕೃಷ್ಣನ ಒಂದರಿಂದ ಆರು ಅವತಾರದ ಪುರುಷರು ಎಂಬ ಪರಿಕಲ್ಪನೆಯನ್ನು ಚಿದಂಬರಯ್ಯನವರು ಇಲ್ಲಿ ಮಾಡಿಕೊಂಡಿದ್ದಾರೆ. ಇಲ್ಲಿ ನಾಯಿಕೆ ಮಹೇಶ್ವರಿ. ಈಕೆ ಮೈಸೂರು ರಾಜ್ಯದ ಅಭಿಮಾನಿ ದೇವಿ ಮತ್ತು ಭೂದೇವಿ. ಈಕೆಯ ಮತ್ತು ಮೈಸೂರರಸರ ಕುಲದೇವತೆ ಚಾಮುಂಡಿ. ಈ ಪಾತ್ರಗಳ ಜೊತೆಗೆ ಹೈದರಲ್ಲಿ, ಟೀಪು, ನಿಜಾಮ, ಪೂರ್ಣಯ್ಯ, ಬೇಲಿ, ಕಾರ್ನ್‌ವಾಲಿಸ್, ಖಂಡೇರಾಯ- ಮುಂತಾದ ಪ್ರಮುಖಪಾತ್ರಗಳು ನಾಟಕ ದಲ್ಲಿ ಬರುತ್ತವೆ. ನಾಟಕದ ಕ್ರಿಯೆ ನಡೆಯುವುದು ಮೈಸೂರು ಮುಖ್ಯಪಟ್ಟಣ ಮತ್ತು ಶ್ರೀರಂಗಪಟ್ಟಣಗಳಲ್ಲಿ. ನಾಟಕದ ಕತೆಯೆಂದರೆ ಹೈದರ್ ಟೀಪುಗಳ ಪತನ, ಮೈಸೂರು ರಾಜ್ಯ ಇಂಗ್ಲಿಷರ ವಶವಾಗಿ ಅವರ ಅಧೀನದಲ್ಲಿ ಮೈಸೂರರಸರು ಮೈಸೂರನ್ನು ಆಳಿದ್ದು. ಆ ಆಳ್ವಿಕೆಯಲ್ಲಿ ಪ್ರಜಾಪೀಡನ ಕಾರ್ಯಗಳು ಕಡಿಮೆಯಾಗಿ ಸರ್ವಜನಹಿತ ಕಾರ್ಯಗಳು ನಡೆದದ್ದು ಮತ್ತು ಅಂತಿಮವಾಗಿ ಚಾಮುಂಡಿಯ ಆಶೀರ್ವಾದದಿಂದ ಶ್ರೀಕೃಷ್ಣ ಮತ್ತು ಮಹೇಶ್ವರಿಯರಿಗೆ ಮದುವೆಯಾದದ್ದು.

ಏತನ್ಮಧ್ಯೆ ಪ್ರಸ್ತಾವನೆಯ ಭಾಗದಲ್ಲಿ ಬರುವ ಸೂತ್ರಧಾರ ನಟಿಯರ ಸಂವಾದದಲ್ಲಿ ಸ್ತ್ರೀಶಿಕ್ಷಣದ ಪ್ರಸ್ತಾಪ ಬರುವುದು ಕುತೂಹಲಕಾರಿಯಾಗಿದೆ. ನಟಿ ಸೂತ್ರಧಾರನಿಗೆ ಹೇಳುವ ಈ ಮಾತನ್ನು ಗಮನಿಸಿ: **ಮೈಸೂರು ದೇಶದಲ್ಲಿ ಸ್ತ್ರೀವಿದ್ಯಾಭ್ಯಾಸವು ಈಚೆಗೆ ಬಹಳ ಅಭಿವೃದ್ಧಿಗೆ ಬಂದು, ಅನೇಕ ಅಬಲೆಯರು ಬೀ.ಎ.ಪರೀಕ್ಷೆಯಲ್ಲಿ ಕೂಡ ಉತ್ತೀರ್ಣರಾಗಿರುವುದರಿಂದ, ಅನೇಕ ವಸ್ತುಗಳ**

ಬಳಕೆಯು ಸುಲಭವಾಗಿ ಅವರಿಗೆ ಉಂಟಾಗಿದೆ. ಈ ನಾಟಕವು ರಚಿತ ವಾಗಿರುವುದು ಒಂದು ಶತಮಾನಗಳಷ್ಟು ಹಿಂದೆ ಎಂಬುದರ ಹಿನ್ನೆಲೆಯಲ್ಲಿ ಮೇಲ್ಕಂಡ ಮಾತುಗಳನ್ನು ಮನನ ಮಾಡಬೇಕು. ನಾಟಕದ ಐದನೆಯ ಹಾಗೂ ಕೊನೆಯ ಅಂಕದ ಕೊನೆಯಲ್ಲಿ ಮಹೀಶ್ವರೀದೇವಿಯ ಸಖಿ ಮತ್ತು ಮಂತ್ರಿಣಿಯಾದ ಸುಮಿತ್ರೆ ಹೇಳುವ ಮಾತುಗಳು ಗಮನೀಯವಾಗಿದೆ. ಅವಳು ಹೇಳುತ್ತಾಳೆ :

"ಚಾಮರಾಜೊಡೆಯರವರ ಆಳ್ವಿಕೆಯಲ್ಲಿ, ಪ್ರಜಾಪ್ರತಿನಿಧಿ ಸಭೆಯು ಸಂಸ್ಥಾಪನೆಯಾಗಿ,-ಪ್ರಜೆಗಳು ರಾಜ್ಯಾಧಿಕಾರಿಗಳಲ್ಲಿ ಕಷ್ಟನಿಷ್ಠುರಗಳನ್ನು ಹೇಳಿಕೊಂಡು ಯಥೋಚಿತವಾದ ನಿವೃತ್ತಿಗಳನ್ನು ಪಡೆಯುವುದಕ್ಕೆ ತಕ್ಕ ಪಥವೇರ್ಪಟ್ಟಿತು. ವ್ಯವಸಾಯದ ಮತ್ತು ಕೈಗಾರಿಕೆಯ ವಸ್ತುಪ್ರದರ್ಶನವು ಮೊತ್ತ ಮೊದಲು ಮಾಡಿಸಲ್ಪಟ್ಟು, ದೇಶೀಯರ ಮೇಲಾಟದಿಂದ ಉತ್ತಮ ವಸ್ತುಗಳನ್ನು ಮಾಡಿ ಮಾರುವುದಕ್ಕೆ ಮಾರ್ಗವುಂಟಾಯಿತು. ಬಾಲ್ಯವಿವಾಹವು ನಿರೋಧಿಸಲ್ಪಟ್ಟು, ಕಾಯಪುಷ್ಟವಾದ ಪ್ರಜೆಗಳ ಸಂತತಿಗೆ ಮುಂದೆ ಮುಂದೆ ದಾರಿಯು ತೋರಿಸಲ್ಪಟ್ಟಿತು. ಈ ವಿಧವಾದ ವಿಚಕ್ಷಣೆಯ ರಾಜ್ಯಭಾರವನ್ನು ನೋಡಿ, ಇಂಗ್ಲೀಷ್ ಚಕ್ರಾಧೀಶ್ವರರು ನಮ್ಮ ಮಹಾರಾಜರಿಗೆ 'ಜೀ. ಸೀ. ಎಸ್. ಐ.' ಎಂಬ ಬಿರುದನ್ನು ಅಪರಿಮಿತವಾದ ಮನಸ್ಸಂತೋಷದಿಂದ ದಯೆ ಪಾಲಿಸಿರುವರು. ಮೈಸೂರು ದೇಶವು ಈಗಲೀಗ 'ಮಾದರಿರಾಜ್ಯ'ವೆಂದು ಹೆಸರುಗೊಂಡಿರುವುದು. ಶಿವಸಮುದ್ರದ ಕಾವೇರಿಯ ಜಲಪಾತದ ಮೂಲವಾಗಿ, ವಿಶೇಷವಾದ ವಿದ್ಯುಚ್ಛಕ್ತಿಯನ್ನು ಹುಟ್ಟಿಸಿ, ಅದರ ಬಲದಿಂದ ಕೋಲಾರದ ಬಂಗಾರದ ಗನಿಗಳನ್ನು ಬೆಳಗುತ್ತಿದ್ದಾರೆ. ಮಾರೀಕಣಿವೆಯ ಕೆರೆಯನ್ನು ಕಟ್ಟಿಸಿ, ವ್ಯವಸಾಯ ವೃತ್ತಿಯನ್ನು ಉಜ್ಜೀವನಗೊಳಿಸಿದುದು ; ಬಡವರಿಗೆಲ್ಲಾ ಆಧಾರವಾಗುವಂತೆ ಇನ್ಶೂರೆನ್ಸ್ ಕಂಪನಿಯನ್ನು ಮಾಡಿದುದು ; ವ್ಯವಸಾಯವ್ಯಯದ ಮುಂಗಡಕ್ಕಾಗಿ ಬ್ಯಾಂಕುಗಳನ್ನು ಅಲ್ಲಲ್ಲಿ ಏರ್ಪಡಿಸಿದುದು ;- ಇವೆಲ್ಲಾ ಸಾಮಾನ್ಯವಾದ ರಾಜ ಕಾರ್ಯಗಳೇನು? " ಈ ಮಾತುಗಳಲ್ಲಿ ಕೃತಿಕಾರರ ರಾಜಭಕ್ತಿ ಮತ್ತು ಆ ಕಾಲದಲ್ಲಿ ಮೈಸೂರುರಾಜ್ಯ ಪ್ರಗತಿಯತ್ತ ಸಾಗುತ್ತಿರುವುದನ್ನು ಕಾಣಬಹುದಾಗಿದೆ.

ಒಂದು ಶತಮಾನದ ಹಿಂದೆ ಮೈಸೂರು ರಾಜ್ಯವು ಮೈಸೂರ ರಸರಾಳ್ವಿಕೆಯಲ್ಲಿ ತನ್ನನ್ನು ತಾನು ಹೊಸ ನವೋದಯಕ್ಕೆ ತೆರೆದುಕೊಂಡು ಪ್ರಗತಿಯತ್ತ ಸಾಗುತ್ತಿರುವುದರ ಚಿತ್ರವನ್ನು ಕೃಷ್ಣಮಹೀಶ್ವರೀ ನಾಟಕ ಚಿತ್ರಿಸಿರುವುದರೊಂದಿಗೆ ಅಂದಿನ ಮೈಸೂರಿನ ಸಾಮಾನ್ಯ ಜನಜೀವನ ಹೇಗಿತ್ತೆಂಬುದಕ್ಕೂ ಈ ನಾಟಕ ಕೈದೀವಿಗೆಯಂತಿದೆ.

# ‘ಮಧುರಚೆನ್ನ’ರು ಅನುವಾದಿಸಿರುವ ರವೀಂದ್ರನಾಥ ಠಾಕೂರ್ ಅವರ ನಾಟಕ ‘ವಿಸರ್ಜನ’ (1927)

ಧಾರವಾಡದ **‘ಗೆಳೆಯರ ಗುಂಪಿ’**ನ ‘ನೂತನಗ್ರಂಥಮಾಲೆ’ಯ ಮೊದಲನೆಯ ಹೂವಾಗಿ **ರವೀಂದ್ರ-ಗುರುದೇವನ ‘ವಿಸರ್ಜನ’** ಎಂಬ ಪ್ರಾಣಿದಯಾಧರ್ಮಬೋಧಕ ನಾಟಕವು-ಬಂಗಾಲಿಯಿಂದ ಕನ್ನಡಿಸಿದುದು- ಇದನ್ನು ಸನ್ 1927 ರಲ್ಲಿ ‘ಪ್ರಭವ’ ಸಂವತ್ಸರದ 'ಅಕ್ಷಯ ತೃತೀಯೆ'ಯಂದು **‘ಗೆಳೆಯರ ಗುಂಪಿ’** ನ **‘ಚೆನ್ನ ಮಲ್ಲ’** ಅವರು ಕನ್ನಡಿಸಿ **ಗುಂಪಿನವರು** ಪ್ರಕಟಿಸಿರುತ್ತಾರೆ. ಡೆಮಿ ಅಷ್ಟ ಪ್ರಥಮ ಆಕಾರದ ಎಂಟೇ ಆಣೆ ಬೆಲೆಯ ಈ ಅನುವಾದಿತ ನಾಟಕವು 72 ಪುಟಗಳನ್ನೊಳಗೊಂಡಿದೆ. **‘ವಿಸರ್ಜನ’** ದ ಪ್ರಸ್ತಾವನೆಯನ್ನು **“**ತಮ್ಮೆಲ್ಲರ ಆಶ್ರಯಾಕಾಂಕ್ಷಿ, **ಗೆಳೆಯರ ಗುಂಪಿನ, ದತ್ತಾತ್ರೇಯ ರಾಮಚಂದ್ರ ಬೇಂದ್ರೆ”** ಯವರು ಬರೆದಿರುತ್ತಾರೆ. ಈ **‘ಚೆನ್ನ ಮಲ್ಲ’** ಅವರು **ಮಧುರಚೆನ್ನ** ಕಾವ್ಯನಾಮಾಂಕಿತ **ಹಲಸಂಗಿ ಚೆನ್ನಮಲ್ಲಪ್ಪ**ನವರು. ಈ 'ಹೊತ್ತಗೆಯ ಒಡೆತನವೆಲ್ಲ **ಗೆಳೆಯರ ಗುಂಪಿ**ನದು'. ಹೊದಿಕೆಯ 2,3 ಮತ್ತು 4ನೇ ಪುಟಗಳಲ್ಲಿ **ಗೆಳೆಯರ ಗುಂಪಿ**ನ ಮಾಸಪತ್ರಿಕೆ **‘ಸ್ವಧರ್ಮ’**, ಅದರ ಜಾಹಿರಾತು ದರಗಳು, ಪತ್ರಿಕೆಯ ಏಜೆಂಟರುಗಳಿಗೆ ನೀಡುವ ಅನುಕೂಲತೆಗಳು, ಶಾಲೆಯ ವಿದ್ಯಾರ್ಥಿಗಳಿಗೆ ವಿಶೇಷ ಅನುಕೂಲತೆಗಳು, ಗೆಳೆಯರ ಗುಂಪಿನಲ್ಲಿ ದೊರೆಯುವ ಪುಸ್ತಕಗಳು- ಮುಂತಾದುವು ಗಳನ್ನು ಕುರಿತ ಜಾಹಿರಾತು ಗಳಿವೆ. ಆಗ ಇವಕ್ಕೆಲ್ಲಾ **ಗೆಳೆಯರ ಗುಂಪಿ**ನ ವ್ಯವಸ್ಥಾಪಕ ರಾಗಿದ್ದವರು **ಬಿಂದುಮಾಧವ ಬುರ್ಲಿ**ಯವರು. **ಗೆಳೆಯರ ಗುಂಪಿ**ನ ಅಂದಿನ ಮಾಸಪತ್ರಿಕೆ **‘ಸ್ವಧರ್ಮ’**ದ ಸಂಪಾದಕರಾಗಿದ್ದ ವರು **ಹನುಮಂತ ರಾಯ ಬ. ಕೊಣ್ಣೂರ**, ಬಿ.ಎ ಮತ್ತು **ಕವಿಭೂಷಣ ಶ್ರೀ ಕೃಷ್ಣಶರ್ಮ ಬೆಟಗೇರಿ**


ರವೀಂದ್ರ ಗುರುದೇವನ

ವಿಸರ್ಜನ

ಯವರು. ಅದರಲ್ಲಿನ ಜಾಹಿರಾತಿನ ಮಾದರಿಯ ತುಣುಕೊಂದು ಇಂತಿದೆ: "ಎಲ್ಲ ಕನ್ನಡಿಗರು ಉದಾರ ಮನಸ್ಕರಾಗಿ, ಸ್ವಧರ್ಮಕ್ಕೆ ಸಿರಿವಂತರು, ಆಶ್ರಯದಾತ-ರಕ್ಷಕರಾಗಿಯೂ, ದೇಸಾಯಿ, ದೇಶಪಾಂಡೆ, ಶಾನುಭೋಗ, ವಕೀಲರು ಪೋಷಕರಾಗಿಯೂ, ಸಾಮಾನ್ಯ ಸ್ಥಿತಿಯ ಜನರು ಹಿತಚಿಂತಕರು ವರ್ಗಣಿದಾರರೂ ಆಗಿಯೂ ಸ್ವಧರ್ಮಪ್ರಸಾರವನ್ನೂ ವಾಙ್ಮಯ ಸೇವೆಯನ್ನೂ ಮಾಡಬೇಕಾಗಿ ಪ್ರಾರ್ಥನೆಯದೆ."

'ವಿಸರ್ಜನ'ದ ಪ್ರಸ್ತಾವನೆಯಲ್ಲಿ **ಬೇಂದ್ರೆಯವರು** "ಈ ನಾಟಕದ ಪ್ರಯೋಜನವೇನೆಂದು ಕೇಳಬಹುದು. ಸಪ್ರಮಾಣವಾಗಿ ಮಾತಾಡುವದಾದರೆ 'ವಿಸರ್ಜನ'ವು ಈಗಾಗಲೇ ತಕ್ಕಮಟ್ಟಿಗೆ ಲಬ್ಧಪ್ರಯೋಜನವಾಗಿದೆ ಎಂದು ಹೇಳಬಹುದು. ಯಾಕಂದರೆ ಈ ಆಟವನ್ನು ಆಡಿ ತೋರಿಸಿದಂದಿನಿಂದ **ಶಾಂತಿನಿಕೇತನ**ದ ಸುತ್ತಮುತ್ತಲಿನ ಎಷ್ಟೋ ಹಳ್ಳಿಗಳಲ್ಲಿ 'ದುರ್ಗಾಪೂಜೆಯ ಕಾಲಕ್ಕೂ ಪ್ರಾಣಿಬಲಿಯನ್ನು ಕೊಡುವುದು ನಿಂತುಬಿಟ್ಟಿದೆ. **ಶಾಂತಿನಿಕೇತನ**ದಲ್ಲಿಯೂ ಪ್ರಾಣಿ ಹಿಂಸೆಯಾಗಬಾರದೆಂದು ಒಂದು ಆಜ್ಞೆಯಿದೆ. ಮಾನವನ ಆಹಾರಕ್ಕಾಗುವ ಪ್ರಾಣಿಹಿಂಸೆಯನ್ನು ಕಂಡು ದಯಾರ್ದ್ರ ಅಂತಃಕರಣವುಳ್ಳವರಾಗಿ 1894ರಲ್ಲಿ ತಾವು ಶಾಕಾಹಾರಿಗಳಾಗಬೇಕೆಂದು ಪ್ರಯತ್ನ ಮಾಡುವ ಪ್ರತಿಜ್ಞಾವಾಕ್ಯವೊಂದು **ರವೀಂದ್ರರ** **'ಗ್ಲಿಂಪ್ಸಸ್ ಆಫ್ ಬೆಂಗಾಲ'** ಎಂಬ ಓಲೆಗಳಲ್ಲಿ ಕಂಡುಬರುವುದು. ಜೀವದಯೆಯ ಅಪೂರ್ವ ಅನುಭವದಿಂದ ಬರೆದೀ ನಾಟಕವು ಜನರಲ್ಲಿ ಪರಿಣಾಮವನ್ನುಂಟು ಮಾಡಿದ್ದು ಆಶ್ಚರ್ಯವಲ್ಲ." ಎಂದು ಅಭಿಪ್ರಾಯ ಪಡುತ್ತಾರೆ. ಈ ಕೃತಿಯನ್ನು "ಬಂಗಾಲಿಯಿಂದಲೇ ಕನ್ನಡಿಸಿದ್ದರಿಂದ **ರವೀಂದ್ರರು** ತಾವೇ ಸ್ವತಃ ಅಪ್ಪಣೆಯನ್ನು ಕೊಟ್ಟಿದ್ದಕ್ಕೆ ಅವರಿಗೂ ಉಪಕೃತರಿರುವೆವು. ಅಥವಾ ಜಗತ್ತನ್ನೇ ರಿಣದಲ್ಲಿ ಮುಳುಗಿಸಿದ **ರವೀಂದ್ರ ಗುರುದೇವನಿಗೆ** ನಾವು ರಿಣಿಗಳಾಗಿರುವೆವೆಂದು ಅನ್ನುವುದೇ ಬೇಡ. ಮಾತ್ರ ಕೆರೆಯ ನೀರು ಕೆರೆಗೆ ಹಾಕಿ ವರವ ಪಡೆದುಕೊಳ್ಳುವವರಂತೆ ನಾವು ಈ

ಪುಸ್ತಕವನ್ನೇ ಆ ರಸಪುರುಷನ ಪಾದತಲದಲ್ಲಿ ಅರ್ಪಿಸಿದ್ದೇವೆ." ಎಂದು ರವೀಂದ್ರರಿಗೆ ಅರ್ಪಿಸಿರುತ್ತಾರೆ. ಪುಸ್ತಕವನ್ನು ಕನ್ನಡಿಸುವುದಕ್ಕೆ ಅನುಮತಿ ಕೊಡಿಸಲು ನೆರವು ನೀಡಿದ್ದಕ್ಕಾಗಿ ಶಾಂತಿನಿಕೇತನದಲ್ಲಿ ಕಲಿಯುತ್ತಿದ್ದ ಗುಂಪಿನ ಗೆಳೆಯರಾದ ಕಲ್ಲೂರ ಕೃಷ್ಣ ಅವರಿಗೆ ಬೇಂದ್ರೆಯವರು ಕೃತಜ್ಞತೆ ಸಲ್ಲಿಸಿರುತ್ತಾರೆ. ಪ್ರಾಣಿಬಲಿಯನ್ನು ಕುರಿತು ಬೇಂದ್ರೆಯವರು ಹೀಗೆ ಬರೆಯುತ್ತಾರೆ: " 'ದೇವೋ ದುರ್ಬಲಘಾತಕಃ' ಮತ್ತು 'ಅಜಾತಪುತ್ರಂ ಬಲಿಂ ದದ್ಯಾತ್' ಎಂಬ ಲೋಕೋಕ್ತಿಗಳಲ್ಲಿ ಒಂದು ವಿಶಾಲತರವಾದ ಸತ್ಯವಿದೆ. ದುರ್ಬಲವಾದ ಮೂಕಪ್ರಾಣಿಗಳನ್ನು ಪ್ರಬಲರು ತಮ್ಮ ಈಪ್ಸಿತಾರ್ಥಪ್ರಾಪ್ತಿಗಾಗಿ ದೇವರಿಗಾಗಿ ಬಲಿದಾನವನ್ನು ಮಾಡುವ ರೂಢಿಯಲ್ಲಿ ಧರ್ಮದ ಕುಚೇಷ್ಟೆಯೇ ಇದೆ ಎಂದೆನ್ನಬಹುದು. ಈ ಬಲಿದಾನ ಪದ್ಧತಿಯು ತ್ಯಾಗಸೂತ್ರಕ್ಕೆ ಬರೆದ ತಾಮಸಿಕ ಭಾಷ್ಯವೇ ಸೈ. ಎಲ್ಲಿಯವರೆಗೆ ಮನುಷ್ಯರಿಗಾಗಿ, ದೇವರಿಗಾಗಿ, ವಿನೋದಕ್ಕಾಗಿ, ತಮ್ಮ ಇಷ್ಟವನ್ನು ಸಾಧಿಸಿಕೊಳ್ಳಲು ಎರಡನೆಯದವರನ್ನು ಬಲಿಕೊಡುವ ತಾಮಸವೃತ್ತಿಯಿದೆಯೋ ಅಲ್ಲಿಯವರೆಗೂ ಈ ಆಟದ ಪ್ರಯೋಜನ ತೀರಲಾರದು."

58 ಪುಟಗಳ 21 ದೃಶ್ಯಗಳನ್ನೊಳಗೊಂಡ 5 ಅಂಕಗಳ 'ವಿಸರ್ಜನ' ನಾಟಕದಲ್ಲಿ ಗೋವಿಂದ ಮಾಣಿಕ್ಯ, ಗುಣವತಿ, ನಕ್ಷತ್ರರಾಯ, ಧ್ರುವ, ರಘುಪತಿ, ಜಯಸಿಂಹ, ಅಪರ್ಣೆ, ಮಂತ್ರಿ, ಚಾಮದಪಾಲ ಮತ್ತು ನಯನರಾಯ ಎಂಬ ಹತ್ತು ಪ್ರಮುಖ ಪಾತ್ರಗಳಿವೆ. ನಾಟಕದಲ್ಲಿನ ಕ್ರಿಯೆಗಳ ಕಾರ್ಯಕ್ಷೇತ್ರ ತ್ರಿಪುರದ ಕಾಲೀಮಂದಿರ, ತ್ರಿಪುರದ ರಾಜಸಭೆ, ಅಂತಃಪುರ ಮಂದಿರದ ಇದಿರಿನ ಬೀದಿ, ಪ್ರಾಸಾದಕಕ್ಷ, ಅಂತಃಪುರಕಕ್ಷ, ಮಂದಿರದ ಮೆಟ್ಟಿಲು, ಓಲಗ, ಅರಮನೆ ಮತ್ತು ಅಂತಃಪುರದ ಬೀದಿ–ಇವುಗಳು.

ಈ 'ವಿಸರ್ಜನ' ನಾಟಕದ ಬಗ್ಗೆ ಮುಂದುವರೆಯುತ್ತಾ ಬೇಂದ್ರೆಯವರು ಹೀಗೆ ಅಭಿಪ್ರಾಯಪಡುತ್ತಾರೆ : "ರಘುಪತಿಯ ದುರಾಗ್ರಹದ ಮತ್ತು ಗೋವಿಂದಮಾಣಿಕ್ಯನ ಸದಾಗ್ರಹದ ಅರ್ಥವಾಗುವಂತಿದೆ. ಜಯಸಿಂಹನ ಮತ್ತು ಗುಣವತಿಯ ಮೋಹವು ನಮ್ಮ ಅನುಭವದ ಹೊರಗಿಲ್ಲ. ಅಪರ್ಣೆಯಲ್ಲಿದ್ದ ಆಕರ್ಷಕ ಗುಣವು ನಮಗೆ ತೋಚದ ಮಾತಲ್ಲ. ದೇವಿಯ ವಿಸರ್ಜನೆಯೆಂದರೆ ದೇವಿ ವಿಸರ್ಜನೆ. ಪ್ರಾಣಿ ಹಿಂಸೆಯಾಗಬಾರದೆಂದರೆ ಪ್ರಾಣಿ ಹಿಂಸೆಯಾಗಬಾರದು; ಇದೇ ಅದರ ಅರ್ಥ. ಒಳಗೊಂದು

ಹೊರಗೊಂದು ಅದರ ಅರ್ಥವಿಲ್ಲ. ಧರ್ಮರೂಢಿಯ ನೆವದಿಂದಾಗುತ್ತಿರುವ ಪ್ರಾಣಿಹಿಂಸೆಯಲ್ಲಿ ಆತ್ಮವಂಚನೆಯಿದೆ; ಇದರಿಂದ ಗೋವಿಂದಮಾಣಿಕ್ಯ, ರಘುಪತಿ, ಗುಣವತಿ, ಜಯಸಿಂಹ, ಮೊದಲಾದವರು ತಮ್ಮ ತಮ್ಮ ಪರಿಯಿಂದ ಹೇಗೆ ಮುಕ್ತರಾದರು ಎಂಬುದನ್ನು ಈ ನಾಟಕದಲ್ಲಿ ತೋರಿಸಿದೆ. ಇದರಿಂದ ನಾವು ಕಲಿಯಬೇಕಾದದ್ದೇನು ? ಎಂದು ಕೇಳಿದರೆ ಬುದ್ಧಿವಂತರು ಮಾತುಮಾತಿಗೂ, ಇದರಿಂದ ಕಲಿಯಬೇಕಾದ ಸಂಗತಿಗಳು ಹೇರಳವಾಗಿವೆ. ಒಂದೇ ಎಂದು ಹೇಳಲು ಬರದು. ತಮ್ಮ ತಮ್ಮ ಶ್ರದ್ಧೆಗಾಗಿ ತಮ್ಮ ತಮ್ಮ ಸರ್ವಸ್ವವನ್ನೂ ಅರ್ಪಿಸಲು ಪ್ರತಿಯೊಬ್ಬನೂ ಸಿದ್ಧನಿರಬೇಕೆಂದು ಕಲಿಯ ಬಹುದು. ಯಾವ ಅಮಾನುಷ ಕೃತ್ಯಗಳಿಗೂ ದೇವದೇವನ ಸಮ್ಮತಿಯಿಲ್ಲ ; ನಮ್ಮ ಅವಿವೇಕದಿಂದ ನಾವೇ ಪ್ರತಿಷ್ಠೆ ಮಾಡಿದ್ದನ್ನು ನಮ್ಮ ವಿವೇಕದಿಂದ ವಿಸರ್ಜನೆ ಮಾಡುತ್ತೇವೆ ಎಂದು ಕಲಿಯಬಹುದು."

1927ರ ಹೊತ್ತಿಗೇನೆ **ರವೀಂದ್ರರ** ನಾಟಕವು ಕನ್ನಡಕ್ಕೆ ಬಂದಿರುವುದು, 1922ರ ಹೊತ್ತಿಗೆ **ಡಿ.ವಿ.ಜಿ** ಯವರು **ರವೀಂದ್ರರನ್ನು** ಕುರಿತು ಕವನವೊಂದನ್ನು ಬರೆದಿರುವುದು-ಇವೆಲ್ಲ 20ನೆಯ ಶತಮಾನದ ಆರಂಭಕ್ಕೇ ಇಂಡಿಯಾದ ದೇಶ ಭಾಷೆಗಳ ಮೇಲೆ **ರವೀಂದ್ರನಾಥ ಠಾಕೂರ್‌ರ** ಪ್ರಭಾವ ಎಷ್ಟಿತ್ತು ಎಂಬುದನ್ನು ತಿಳಿಸುತ್ತದೆ. ಇದು **ಮಧುರಚೆನ್ನರು** ರಚಿಸಿರುವ ಹದಿನಾಲ್ಕು ಕೃತಿಗಳಲ್ಲಿ ಮೊದಲನೆಯದಾಗಿದ್ದರೂ, ಬಂಗಾಳಿ ಮೂಲದಿಂದ ನೇರವಾಗಿ ಅನುವಾದ ಮಾಡಿರುವುದರಿಂದ ಅಧಿಕೃತವಾಗಿದ್ದು ಕನ್ನಡಕ್ಕೆ ಬಂದಿರುವ **ರವೀಂದ್ರರ** ಸಾಹಿತ್ಯದಲ್ಲಿ ಅಗ್ರಪಂಕ್ತಿಯಲ್ಲಿ ಇರಿಸಲು ಯೋಗ್ಯ ವಾಗಿದೆ.

## ನಂಜನಗೂಡು ತಿರುಮಲಾಂಬ ಅವರ 'ಭಾರ್ಗವ ಗರ್ವಭಂಗಂ'
### [ಭಾರ್ಗವ ಗರ್ವಭಂಗಂ ಎಂಬ ಬಾಲರಾಮ ಚರಿತಂ (ರೂಪಕ)] (1928)

ಅಷ್ಟಾಂಶ ಕಿರೀಟಾಕಾರದ ರೂಪಾಯಿ ಒಂದು ಕ್ರಯದ ೧೧೪ ಪುಟಗಳ ಪ್ರಥಮ ಮುದ್ರಣದ ' **ಭಾರ್ಗವ ಗರ್ವಭಂಗಂ** ಎಂಬ **ಬಾಲರಾಮ ಚರಿತಂ**(ರೂಪಕ)'–ಈ ಕೃತಿ ನಂಜನಗೂಡು **"ಸತೀಹಿತೈಷಿಣೀ"** ಮಾತೃಮಂದಿರದಿಂದ ೧೯೨೮ರಲ್ಲಿ ಪ್ರಕಟವಾಗಿದೆ.. ಇದನ್ನು ರಚಿಸಿ, ಸಂಪಾದಿಸಿ, ಪ್ರಕಟಿಸಿರುವವರು **ನಂಜನಗೂಡಿನ ಶ್ರೀಮತಿ ತಿರುಮಲಾಂಬ** ಅವರು. **'ಹಿತೈಷಿಣೀ'** ಇವರ ಕಾವ್ಯನಾಮ. **"ಶ್ರೀಪಾದರೇಣು"** ಎಂಬ ನಾಮಾಂಕಿತದಲ್ಲಿ ಈ ಕೃತಿಯನ್ನು ಶ್ರೀರಾಮಚಂದ್ರನಿಗೆ 'ಸಮರ್ಪಣೆ' ಮಾಡಲಾಗಿದೆ. 'ಬಿನ್ನಹ'ದಲ್ಲಿ ಲೇಖಕಿ "....ಈ ದೃಶ್ಯ ಪ್ರಬಂಧವು ನಾಲ್ಕು ವರ್ಷಗಳ ಹಿಂದೆಯೇ ಪ್ರಕಟವಾಗಬೇಕಾಗಿದ್ದಿತು. ..." ಎಂದಿರುವುದರಿಂದ ಇದರ ರಚನೆ ೧೯೨೪ರಲ್ಲಿಯೇ ಆಗಿದೆ. ' ಈ ಪುಸ್ತಕದ ೫ ರಿಂದ ೧೦೦ ಪುಟಗಳವರೆಗೆ ಮೈಸೂರು ಶ್ರೀಕೃಷ್ಣಾ ಪ್ರೆಸ್ಸಿನಲ್ಲಿ ಮುದ್ರಿತವಾಯ್ತು. ಉಳಿದ ಕೆಲವು ಭಾಗ ಮಾತ್ರ ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯ್ತು.' ಎಲ್ಲಕ್ಕೂ ಮೊದಲು ಕೃತಿಯಲ್ಲಿ ಈ ಪ್ರಾರ್ಥನೆ ಇದೆ:

**ಪ್ರಾರ್ಥನೆ**

(ರಾಗ: **ಮೋಹನ ನಲ್ಲ ಬಾರೋ** ಎಂಬಂತೆ)

ಶ್ರೀ ರಘುರಾಮ ಬಾರೈ, ಪದವನ್ನು ತೋರೈ ॥ಪ॥
ದಶರಥ ಪ್ರಿಯ ಬಾಲ, ದಶಮುಖಾಸುರ ಕಾಲ।
ಕುಶಿಕಾತ್ಮಜ ಮಖಪಾಲ ಶಶಾಂಕನಿಭಪಾಲ॥ರಾಮ॥ ॥೧॥

ಶತಪತ್ರಾಯತನೇತ್ರ, ಶತಪತ್ರಾಪ್ತಜ ಮಿತ್ರ।
ಶತಮನ್ಯು ಸ್ತುತಿಪಾತ್ರ, ಶತಯಾಗಸಹಜಾತ॥ರಾಮ॥ ॥೨॥

ವರಶೇಷಗಿರಿ ನಿಲಯ, ಶರಣರಕ್ಷಣಸದಯ।
ಗಿರಿಜಾಧವಪ್ರಿಯ, ನುತಸುರ ಸಮುದಾಯ॥ಶ್ರೀ ರಘುರಾಮ ಬಾರೈ॥ ॥೩॥

'ಬಿನ್ನಹ'ದಲ್ಲಿ ಬರುವ 'ಹಿತೈಷಿಣೀ' ಅವರು ಹೇಳುವ " ...ಇದು ಅಕ್ಷರಸ್ಥಳಲ್ಲದ ಅಬಲೆಯ ಕೃತಿಯೆಂದೂ ಅಬಲೆಯ ಅಲ್ಪಮತಿಗೆ ಒಳಪಡುವಷ್ಟು

ವಿಚಾರಗಳು ಇದರಲ್ಲಿ ಬಂದಿರಬಹುದೆಂದು. ... ..." ಮಾತುಗಳು ಹಾಗೂ ಮುಂದೆ ನಾಟಕದಲ್ಲಿ 'ನಾಂದಿ'ಯ ನಂತರ ಒಂದೆಡೆ 'ನಟಿ'ಯು ಹೇಳುವ "ಅನಾಮಧೇಯ ವಿದ್ಯಾರ್ಥಿನಿಯೋರ್ವಳಿಂದ ಬರೆಯಲ್ಪಟ್ಟುದನ್ನು ......" ಎಂಬ ಮಾತೂ ಮತ್ತು 'ಸೂತ್ರಧಾರ' ಹೇಳುವ "....... ಬಾಲಿಶ ವಿದ್ಯಾರ್ಥಿನಿ ಯೋರ್ವಳು ಶ್ರೀರಾಮಚಂದ್ರನ ಬಾಲಚರಿತವನ್ನು ಭಕ್ತಿ ಭಾವದಿಂದ ಬಾಲ ಭಾಷೆಯಲ್ಲಿ ರಚಿಸಿ ರುವುದನ್ನು ಕೂಡ......." ಎಂಬ ಮಾತು ಗಳೂ ಆ ಕಾಲ ದಲ್ಲಿ ಬರೆಯುತ್ತಿದ್ದ ಲೇಖಕಿಯರ ವಿನಯ ಹಾಗೂ ಹಿಂಜರಿ ಕೆಗಳನ್ನು ಸೂಚಿಸುತ್ತದೆ. ನಾಟಕಾ ರಂಭಕ್ಕೆ ಮೊದಲು 'ಸತೀಹಿತೈಷಿಣೀ' ಪ್ರಕಟಿಸಿದ ಕೃತಿಗಳನ್ನು ಕುರಿತು(ದಿವಂಗತ) ಜೆ.ಎಸ್. ಚಕ್ರವರ್ತಿ ಅವರು ೮-೧೧-೧೯೧೬ರಲ್ಲಿ ಬರೆದ ಅಭಿಪ್ರಾಯಗಳು ಅಚ್ಚಾಗಿದೆ. ನಾಟಕದಲ್ಲಿ ಸೂತ್ರಧಾರನ ಪ್ರಸ್ತಾವನೆ ಮತ್ತು ೧ ರಿಂದ ೬ ಅಂಕಗಳು ಇವೆ. ಸೂತ್ರಧಾರನ ಪ್ರಸ್ತಾವನೆಗೂ ಮುನ್ನ ನಾಟಕದ ಕಥಾಸಾರಾಂಶವನ್ನು ಸಂಗ್ರಹವಾಗಿ ನೀಡಲಾಗಿದೆ. ದಶರಥ, ವಸಿಷ್ಠ, ಜನಕ, ಶ್ರೀರಾಮ, ಭಾರ್ಗವರಾಮ ಮುಂತಾಗಿ ೨೧ ಪ್ರಧಾನ ಪಾತ್ರಗಳಿರುವ ಈ ನಾಟಕ ಹಿಂದಿನ ಶತಮಾನದ ಇಪ್ಪತ್ತರ ದಶಕದಲ್ಲಿ ಮಹಿಳೆಯೋರ್ವರು ರಚಿಸಿದ ಒಂದು ಗಮನಾರ್ಹ ರಚನೆಯಾಗಿದೆಯೆಂಬುದು ಒಂದು ಐತಿಹಾ ಸಿಕ ಮಹತ್ವದ ದಾಖಲೆ.



'ಬಿನ್ನಹ' ದಲ್ಲಿಯೇ ಇನ್ನೊಂದೆಡೆ ತಿರುಮಲಾಂಬ ಅವರು "ಇಷ್ಟು ಕಾಲಾನಂತರದ ಬಳಿಕ ಪ್ರಕಟಗೊಂಡಿರುವದಾದರೂ ಕವಿತಾ ಭಾಗವನ್ನು ಬಿಟ್ಟು ಇದೊಂದೇ ಪ್ರಕಟವಾಗಿದೆ" ಎಂದು ಹೇಳಿ ಪದ್ಯಗಳಿಲ್ಲದಿರುವುದಕ್ಕೆ ಕಾರಣವನ್ನು ಕೊಟ್ಟಿದ್ದಾರೆ. ಇಷ್ಟಾದರೂ ಆರಂಭದ ಪ್ರಾರ್ಥನೆಯ ಹಾಡಿನ ಜೊತೆಗೆ ಮೂರನೆಯ ಅಂಕದಲ್ಲಿ ಒಂದು ಭಾಮಿನೀ ಷಟ್ಪದಿಯೂ, ೪, ೫ ಮತ್ತು ೬ನೆಯ ಅಂಕಗಳಲ್ಲಿ ಒಂದೊಂದು ಕಂದ ಪದ್ಯಗಳೂ ಹಾಗೂ ೬ನೆಯ ಅಂಕದಲ್ಲಿ ಹಿಂದೂಸ್ತಾನಿ ರಾಗದ ಒಂದು ಹಾಡೂ, ಸಾಕೇಳಿ ದೂರು ರಾಗದ ಒಂದು ಹಾಡೂ ಮತ್ತು ನಾಟಕಾಂತ್ಯದಲ್ಲಿ ಒಂದು ಮಂಗಳದ ಹಾಡೂ ಇರುವುದೊಂದು ವಿಶೇಷ. ಲೇಖಕಿಗೆ ತಮ್ಮ ಜೀವಿತಾವಧಿಯ ಕೊನೆ ಯವರೆಗೂ ತಪ್ಪದೆ ಮಾಡುತ್ತಿದ್ದ


ಸತೀಹಿತೈಷಿಣೀ, ಸಂದಿನಿಯರಿಗೆ
ಅಭಿಪ್ರಾಯ

ಜೆ. ಎಸ್. ಚಕ್ರವರ್ತಿ.

ರಾಮಾಯಣದ ಪಾರಾಯಣ ಈ ನಾಟಕನಿರ್ಮಿತಿಗೆ ಪ್ರೇರಣೆ ನೀಡಿದೆ. ರಾಮಾಯಣದ ಬಾಲಕಾಂಡದ ಕತೆಯನ್ನು ಸಂಗ್ರಹವಾಗಿ ಹೇಳಿ ಅಯೋಧ್ಯೆಯ ದಶರಥನ ಅರಮನೆಗೆ ವಿಶ್ವಾಮಿತ್ರಾಗಮನದಿಂದ ರಾಮಲಕ್ಷ್ಮಣಾದಿಗಳ ವಿವಾಹದವರೆಗೆ ಮತ್ತು ಅಲ್ಲಿಂದ ನಂತರ ಭಾರ್ಗವರಾಮನು ತಪಸ್ಸಿಗೆ ಹೋಗುವವರೆಗೆ ನಾಟಕದ ಕಥಾವಸ್ತುವಿನ ಹರಹಿದೆ. ನಾಟಕದ ನಿರ್ವಹಣೆಯಲ್ಲಾಗಲೀ, ನಿರೂಪಣೆ ಯಲ್ಲಾಗಲೀ ನಾವೀನ್ಯವೇನಿಲ್ಲ ದಿದ್ದರೂ ನಾಟಕದ ಶಿಲ್ಪಕ್ಕೆ ಅಡ್ಡಿಯೇನಿಲ್ಲ. ಮೂಲಕತೆ ಯಾವುದೇ ಮಾರ್ಪಾಟಿಗೊಳಗಾಗದೆ ಸಾಂಪ್ರದಾಯಿಕ ರೀತಿ ಯಲ್ಲಿಯೇ ಕೃತಿರಚನೆ ಸಾಗಿದ್ದರೂ ಒಂದು ಅಚ್ಚುಕಟ್ಟಾದ ಚೌಕಟ್ಟು ಈ ಕೃತಿಗಿರುವುದು ವಿಶೇಷ. ರಾಮಮಹಿಮೆಯ ಪ್ರಚಾರ ಮತ್ತು ಪ್ರಸಾರ ಆಸ್ತಿಕ ಜನರಲ್ಲಿ ಉಂಟಾಗಬೇಕೆಂಬುದು ಲೇಖಕಿಯ ಉದ್ದೇಶವಿದ್ದಂತಿದೆ. ಅಪಾರ ವಾದ ರಾಮಭಕ್ತಿ ಲೇಖಕಿಯ ಗಾಢವಾದ ಅಚಲ ನಂಬಿಕೆ. ಈ ನಾಟಕವನ್ನು ಕುರಿತು ಶ್ರೀಮತಿ ವಿಜಯಾ ದಬ್ಬೆಯವರು ವ್ಯಕ್ತಪಡಿಸಿರುವ ಈ ಅಭಿ ಪ್ರಾಯಗಳು (ಹಿತೈಷಿಣಿಯ ಹೆಜ್ಜೆಗಳು, ೧೯೬೨) ಸೂಕ್ತವಾಗಿಯೇ ಇವೆ : "ಈ ನಾಟಕಕ್ಕೆ ಕನ್ನಡ ನಾಟಕಸಾಹಿತ್ಯದ ಚರಿತ್ರೆಯಲ್ಲಿ ಒಂದು ಚಾರಿತ್ರಿಕ ಸ್ಥಾನವಿದೆ ಎನ್ನಬಹುದು. ಮಹಿಳೆಯರ ಸಾಹಿತ್ಯಕೃಷಿಯೇ ಇಲ್ಲದಿದ್ದ ಕಾಲದಲ್ಲಿ ಹೊಸಗನ್ನಡದ ಲೇಖಕಿಯರಲ್ಲಿ ಮೊದಲ ತಲೆಮಾರಿನವರಲ್ಲೊಬ್ಬರಾದ ತಿರುಮಲಾಂಬ ನಾಟಕ ಪ್ರಕಾರವನ್ನೂ ಬಳಸಿಕೊಂಡಿದ್ದಾರೆಂಬುದು ಗಮನಿ ಸಬೇಕಾದ ಅಂಶ. ಪರಿಚಿತ ವಸ್ತುವನ್ನೇ ಆಯ್ದುಕೊಂಡರೂ ಯಾವ ಹೊಸ ಮೌಲ್ಯಗಳ ಪ್ರತಿಪಾದನೆಯನ್ನು ಉದ್ದೇಶಿಸಿರದಿದ್ದರೂ ಸಾಹಿತ್ಯಕವಾಗಿ ಎದ್ದು ಕಾಣುವಂಥ ರಚನೆಯಲ್ಲದಿದ್ದರೂ ಸ್ಪಷ್ಟವಾದ ಗ್ರಹಿಕೆ ಮತ್ತು ಅಚ್ಚುಕಟ್ಟಾದ ನಿರೂಪಣೆಯಿಂದ ಪ್ರಸ್ತುತ ನಾಟಕ ಓದುಗರ ಸಹಾನುಭೂತಿಯನ್ನು ಪಡೆಯುತ್ತದೆ. ನಾಟಕಕಾರ್ತಿಯ ವ್ಯುತ್ಪತ್ತಿಯ ಹಗ[illegible] ಈ ನಾಟಕ ಪ್ರತಿನಿಧಿಸುತ್ತದೆ."

## ತಮಿಳ ಮೊದಲನೇ ಪುಸ್ತಕ–Tamil First Reader (1896)

ವಿ.ನರಸಿಂಹ ಮೂರ್ತಿಯವರು ಬರೆದಿರುವ ಈ ತಮಿಳ ಮೊದಲನೇ ಪುಸ್ತಕ Tamil First Reader-ಈ ಕೃತಿಯು ಮದರಾಸಿನ S.P.C.K. ಪ್ರೆಸ್, ವೇಪೇರಿಯಲ್ಲಿ ೧೮೯೬ರಲ್ಲಿ ಮುದ್ರಣಗೊಂಡಿದೆ. ಪುಸ್ತಕದ ಮೇಲೆ ಅಚ್ಚಾಗಿರುವಂತೆ ಇದು "ಅನ್ಯರ ಸಹಾಯವಿಲ್ಲದೆ ಕನ್ನಡಿಗರಿಗೆ ತಮಿಳ ಜ್ಞಾನವಾಗುವ ಹಾಗೆ ಬರೆದಿರುವ ತಮಿಳ ಪುಸ್ತಕವು. ಹೆಸರು ಅಚ್ಚಾಗಿರುವ ಹಾಳೆಯ ಎದಿರು ಪುಟದಲ್ಲಿ ಈ ಪುಸ್ತಕವು ಧಾರವಾಡ ಟ್ರೇನಿಂಗ್ ಕಾಲೇಜಿನ ಪೆನಶನ್ನ ಹೊಂದಿದ ಪ್ರಿನ್ಸಿಪಾಲರೂ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರೂ ಆದ **ರಾವ ಸಾಹೇಬ ವೆಂಕಟರಂಗೋ ಕಟ್ಟಿ** ಇವರಿಗೆ ಕೃತಜ್ಞತೆಯಿಂದ ಧಾರವಾಡ ಕ.ವಿ.ವಿ.ಸಂಘದಿಂದ ಕಾಣಿಕೆಯಾಗಿ ಅರ್ಪಿಸಲ್ಪಟ್ಟಿರುತ್ತದೆ" ಎಂದು ಅಚ್ಚಾಗಿದೆ. ಈ ಕೃತಿಯನ್ನು ಪ್ರಕಟಿಸಿರುವವರು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು. ಕೃತಿಯ ಲೇಖಕರಾದ ವಿ.ನರಸಿಂಹ ಮೂರ್ತಿಯವರು ಮೈಸೂರು ಜಿಲ್ಲೆಯ ತಿರುಮಕೂಡಲ ನರಸೀಪುರದ ಸರಕಾರಿ ಆಂಗ್ಲೋ–ವರ್ನೇಕ್ಯುಲರ್ ಶಾಲೆಯಲ್ಲಿ ಸಹಾಯಕ ಅಧ್ಯಾಪಕರಾಗಿದ್ದವರು. ಒಟ್ಟು ೪೩ ಪಾಠಗಳಿಂದ ಕೂಡಿರುವ ೧೨೬ ಪುಟಗಳ ಈ ಪುಸ್ತಕದ ಅಂದಿನ ಬೆಲೆಯ ನಮೂದನೆ ಎಲ್ಲಿಯೂ ಇಲ್ಲ.

ಇದು ಮುಖ್ಯವಾಗಿ ಧಾರವಾಡದ ವಿದ್ಯಾವರ್ಧಕ ಸಂಘದವರು ಇನಾಮನ್ನಿಟ್ಟು ಪುಸ್ತಕ ಬರೆಯುವವರಿಗೆ ಆಹ್ವಾನ ನೀಡಿದಾಗ ಅದಕ್ಕಾಗಿ ಬರೆದ ಪುಸ್ತಕ. ೩೦ ಜೂನ್ ೧೮೯೬ರಲ್ಲಿ ಲೇಖಕರು ಪುಸ್ತಕಕ್ಕೆ ಬರೆದಿರುವ ಪೀಠಿಕೆಯಲ್ಲಿ "ಕನ್ನಡ ಭಾಷಾಭ್ಯಾಸಿಗಳಾದ ಈ ದೇಶದ ಜನರು ತಮ್ಮ ನೆರೆಯ ದೇಶದಲ್ಲಿ ಪ್ರಸಿದ್ಧಿಗೊಂಡಿರುವ ತಮಿಳು ಭಾಷೆಯನ್ನು ಅನ್ಯರ ಸಹಾಯವಿಲ್ಲದೆ ತಿಳಿದುಕೊಳ್ಳುವ ಸಾಧನವ್ಯಾವದೂ ಇಲ್ಲದಿರುವುದನ್ನು ಧಾರ್‍ವಾಡದ ವಿದ್ಯಾವರ್ಧಕ ಸಂಘದವರು ಮುಂಗಂಡು ಈ ಕೊರತೆಯನ್ನು ಹೋಗಲಾಡಿಸಲು ಯೋಗ್ಯವಾದಂಥ ಮೊದಲನೆಯ ಮತ್ತು ಎರಡನೆಯ



ಪುಸ್ತಕಗಳನ್ನು ಬರೆದವರಿಗೆ ಐವತ್ತು ರುಪಾಯಿ ಇನಾಮು ದೊರೆಯುವುದೆಂದು ಪ್ರಕಟಿಸಿ ಪ್ರೋತ್ಸಾಹ ಪಡಿಸಿದರು. ಅದನ್ನು ತಿಳಿದು ನಾನು ಈ ಪುಸ್ತಕಗಳನ್ನು ತಿಳಿದ ಮಟ್ಟಿಗೆ ಬರೆದು ಮುಗಿಸಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಸನ್ಮಾನಿತ ಕಾರ್ಯದರ್ಶಿಗಳ ಕಡೆಗೆ ಕಳುಹಿಸಿಕೊಡಲಾಗಿ ಅವರು ಆ ಪುಸ್ತಕಗಳನ್ನು ಮೈಸೂರು ಸೀಮೆಯ ವಿದ್ಯಾಭ್ಯಾಸದ ಇಲಾಖಾ ಸೆಕ್ರೆಟರಿಯವರಾದ ಮೆ. ಹೆಚ್.ಜೆ. ಭಾಭಾ, ಎಂ. ಏ ಯವರ ಬಳಿಗೆ ಕಳುಹಿಸಿ ಅವುಗಳಲ್ಲಿರುವ ಗುಣದೋಷಗಳನ್ನು ವ್ಯಕ್ತಪಡಿಸಬೇಕೆಂದಪೇಕ್ಷಿಸಲು, ಅವರು ಕೊಟ್ಟ ಅಭಿಪ್ರಾಯದ ಮೇಲಿಂದ ಕೆಲವು ವ್ಯಾಕರಣ ನಿಯಮಗಳು ಪುನಹ ಸೇರಿಸಲಾಯಿತು.

"ಈ ಪುಸ್ತಕಗಳಲ್ಲಿ ತಮಿಳ ಶಬ್ದಗಳ ಉಚ್ಚಾರಣಾ ಕ್ರಮವೂ, ಭಾಷಾಂತರವೂ ಕನ್ನಡದಲ್ಲಿ ಬರೆಯಲ್ಪಟ್ಟಿರುವುದರಿಂದ ಕನ್ನಡ ಭಾಷೆಯನ್ನು ಕಲಿತವರೆಲ್ಲರೂ ತಮಿಳ ಭಾಷೆಯನ್ನು ಸುಲಭದಿಂದ ಕಲಿಯಲು ಅನುಕೂಲವಾಗಿರುವುದು" ಎಂದು ಈ ಕೃತಿಯು ರಚನೆಯಾಗಲು ಕಾರಣ ಮತ್ತು ಈ ಕೃತಿಯ ಪ್ರಯೋಜನವನ್ನು ಹೇಳಿರುತ್ತಾರೆ.

ಆರಂಭದ ಪಾಠಗಳಲ್ಲಿ ತಮಿಳಿನ ವರ್ಣಮಾಲೆಯನ್ನು ತಮಿಳು ಲಿಪಿಯಲ್ಲಿ ನೀಡಿ ಅದಕ್ಕೆ ಸಂವಾದಿಯಾಗಿ ಕನ್ನಡ ಲಿಪಿಯಲ್ಲೂ ನಮೂದಿಸಿದ್ದಾರೆ. ಹಾಗೆಯೇ ಮುಂದಿನ ಪಾಠಗಳಲ್ಲಿ ೧೨ ಸ್ವರಗಳು (ಉಯಿರೆಳುತ್ತು), ೧೮ ವ್ಯಂಜನಗಳು (ಮೆಯ್ಯೆಳುತ್ತು) ಮತ್ತು ಗುಣಿತಾಕ್ಷರಗಳ ಕೋಷ್ಟಕವನ್ನೂ ನೀಡಿದ್ದಾರೆ. ತಮಿಳಿನಲ್ಲಿ ಒಟ್ಟು ಗುಣಿತಾಕ್ಷರಗಳು ೨೧೬. ಜ,ಸ,ಷ,ಹ,ಕ್ಷ–ಈ ಅಕ್ಷರಗಳು ಗ್ರಂಥಾಕ್ಷರಗಳಾದಾಗ್ಯೂ ತಮಿಳಿನಲ್ಲಿ ಉಪಯೋಗಿಸುವ ವಾಡಿಕೆಯಿದೆ ಎಂಬ ಸಂಗತಿಯನ್ನು ಹೇಳುತ್ತಾರೆ.

ಮೂರು ಕಾಲಂಗಳನ್ನು ಮಾಡಿಕೊಂಡು ಅದರಲ್ಲಿ ಮೊದಲನೆಯ ಕಾಲಮ್ಮಿನಲ್ಲಿ **ಕನ್ನಡದಲ್ಲಿ ತಮಿಳಿನ ಉಚ್ಚಾರಣೆ (Transcription),** ಎರಡನೆಯ ಕಾಲಮ್ಮಿನಲ್ಲಿ **ತಮಿಳು ಲಿಪಿಯಲ್ಲಿ ಪದ,** ಕೊನೆಯ ಕಾಲಮ್ಮಿನಲ್ಲಿ **ಕನ್ನಡ ಲಿಪಿಯಲ್ಲಿ ಕನ್ನಡದಲ್ಲಿನ ಅರ್ಥ** ಇದು ಮುಂದೆ ಲೇಖಕರು ಅನುಸರಿಸಿರುವ ವಿಧಾನ.

ಕೆಲವು ವಿಶಿಷ್ಟ ವರ್ಣಗಳ ಉಚ್ಚಾರಣೆಯನ್ನು ಕುರಿತು ಹೇಳುತ್ತಾ 'ಳ' ಎಂಬ ತಮಿಳು ಅಕ್ಷರವನ್ನು ( ಈ ವರ್ಣ ಹಳಗನ್ನಡದಲ್ಲಿ ಇದ್ದು ಉಚ್ಚಾರಣೆ ಕಷ್ಟವಾದ್ದರಿಂದ ಹೊಸಗನ್ನಡದಲ್ಲಿ ಬಿಟ್ಟು ಹೋಯಿತು.) zsha ಎಂದು

ಉಚ್ಚರಿಸಬೇಕೆಂದೂ, ತಮಿಳಿನ ಎರಡನೆಯ ವಿಶಿಷ್ಟ 'ರ' ಅಕ್ಷರ ಎರಡು ಸಲ ಬಂದಾಗ 'ಟ್ರ' ಎಂದು ಉಚ್ಚರಿಸಬೇಕೆಂದೂ ಸರಿಯಾಗಿಯೇ ಸೂಚಿಸಿದ್ದಾರೆ. "ತಮಿಳು ಭಾಷೆಯ ಪದಗಳ ಅಂತ್ಯದಲ್ಲಿನ 'ಉ'ಕಾರವನ್ನು , 'ಇ'ಕಾರಕ್ಕೂ 'ಉ'ಕಾರಕ್ಕೂ ಮಧ್ಯಸ್ಥವಾಗಿ ಉಚ್ಚರಿಸಬೇಕು." ತಮಿಳಿನ ಕ್ರಿಯಾ ಪ್ರತ್ಯಯಗಳು, ವಿಭಕ್ತಿ ಪ್ರತ್ಯಯಗಳು ಇವುಗಳ ಕೋಷ್ಟಕ ನೀಡಿ ನಂತರ ತಮಿಳು ಪದಗಳ, ಪದಪುಂಜಗಳ, ವಾಕ್ಯಗಳ ಮತ್ತು ವಾಕ್ಯಮಾಲೆಗಳನ್ನು ಕನ್ನಡ ಲಿಪಿಯಲ್ಲಿ ನೀಡಿ ಕನ್ನಡದ ಅರ್ಥದೊಂದಿಗೆ ವಿವರಿಸಿರುತ್ತಾರೆ.

**ಉದಾಹರಣೆ:೧.ಪದ :** ಅರಿಶಿ=ಅಕ್ಕಿ,ಯಾನೈ=ಆನೆಯು, ತುಂಬಿಕ್ಕೈ= ಸೊಂಡಿಲ

**೨. ಪದಪುಂಜ :** ಉಪ್ಪು ನೀರ್ ಕುಳಂ=ಉಪ್ಪು ನೀರಿನ ಕೊಳವು

**೩. ವಾಕ್ಯ :** ತಿರುಡನ್ ವೆಳ್ಳಿಕ್ಕಾಪ್ಪು ತ್ತಿರುಡಿನಾನ್=ಕಳ್ಳನು ಬೆಳ್ಳಿ ಕಡಗವನ್ನು ಕದ್ದನು.

**೪. ವಾಕ್ಯಮಾಲೆ : ತಮಿಳು:** ಒರುವನ್ ಒರು ತೇಳ್ ನೆರುಪ್ಪಿಲ್ ವಿಳಪ್ಪೋಗಿ ರದೈಕ್ಕಂಡು ಅದೈ ನೆರುಪ್ಪಿಲ್ ವಿಳಾಮಲ್ ಎಡುತ್ತುಪ್ಪೋಟ್ಟಾನ್. ತೇಳ್ ಅಂದ ಉಪಘಾರಂ ತೆರಿಯಾಮಲ್ ಅವನುಡ್ಯೆಯ ಕೈಯ್ಯೈ ಕಡಿತ್ತುವಿಟ್ಟದು. ಅದಿನಾಲ್ ಅವನ್ ಮಿಘವುಂ ವರುತ್ತಪ್ಪಟ್ಟಾನ್. ಇಪ್ಪಡಿಯೇ ಇಡಕ್ಕುಕ್ಕಾರರ್ ಉಪಕಾರತ್ತಿರ್ಕು ಅಪಕಾರಂ ಶೆಯ್‌ವಾರ್‌ಘಳ್.

**ಕನ್ನಡ :** ಒಬ್ಬನು ಒಂದು ಚೇಳು ಬೆಂಕಿಯಲ್ಲಿ ಬೀಳಹೋಗುವುದನ್ನು ಕಂಡು ಅದನ್ನು ಬೆಂಕಿಯಲ್ಲಿ ಬೀಳದ ಹಾಗೆ ಎತ್ತಿ ಹಾಕಿದನು. ಚೇಳು ಆ ಉಪಕಾರವನ್ನು ತಿಳಿಯದೆ ಅವನ ಕೈಯನ್ನು ಕುಟುಕಿತು. ಅದರಿಂದ ಅವನು ಬಹು ಕಷ್ಟಪಟ್ಟನು. ಹೀಗೆ ದುಷ್ಟರು ಉಪಕಾರಕ್ಕೆ ಅಪಕಾರವನ್ನು ಮಾಡುವರು.

ಮೇಲಿನದು ಕೆಲವು ಉದಾಹರಣೆಗಳು ಮಾತ್ರ. ಇಂತಹ ಹತ್ತಾರು ಉದಾಹರಣೆಗಳು ಈ ಕೃತಿಯಲ್ಲಿವೆ.

ದ್ರಾವಿಡ ಭಾಷಾವಂಶದಲ್ಲಿನ ಅತ್ಯಂತ ಪ್ರಾಚೀನ ಭಾಷೆಗಳಾದ ಕನ್ನಡ ಮತ್ತು ತಮಿಳು ಭಾಷೆಗಳೆರಡರ ಕಲಿಕೆಗೆ ಪರಸ್ಪರ ಅನುವಾಗುವಂತೆ ರಚಿಸಿರತಕ್ಕ ಈ ಕೃತಿ ತೌಲನಿಕ ಅಧ್ಯಯನಕ್ಕೂ ಸಹಕಾರಿ. ದ್ವಿಭಾಷಿಕ ಬಹುಭಾಷಿಕ ಸಂಸ್ಕೃತಿ ದ್ರಾವಿಡರದಾದ್ದರಿಂದ ಈ ಪುಸ್ತಕ ನೂರಕ್ಕೂ ಹಿಂದಿನ ವರ್ಷಗಳಿಗೆ ಮೊದಲು ಪ್ರಕಟಗೊಂಡಿರುವುದು ಅಚ್ಚರಿಯೇನಲ್ಲ, ಸಹಜವೇ ಆಗಿದೆ. ಆ ಕಾಲಕ್ಕೆ ಜ್ಞಾನದ ವಿವಿಧ ಶಾಖೆಗಳಲ್ಲಿ ಕೃತಿರಚನೆಗಳಾಗುತ್ತಿದ್ದವು ಎಂಬುದಕ್ಕೆ ಈ ಕೃತಿ ಒಳ್ಳೆಯ ಕೈಗನ್ನಡಿಯಾಗಿದೆ.

ಭಾಷಾವಾರು ಪ್ರಾಂತ್ಯಗಳ ರಚನೆಯ ನಂತರ ಕಂಡುಬರುತ್ತಿರುವ ಇಂದಿನ ಭಾಷಾದ್ವೇಷದ ಹಿನ್ನೆಲೆಯಲ್ಲಿ ೧೧೬ ವರ್ಷಗಳಷ್ಟು ಹಿಂದೆಯೇ ಭಾಷಾಸಾಮರಸ್ಯಕ್ಕೆ ಪೂರಕವೆನ್ನುವಂತೆ ಕಾಣಿಸಿಕೊಂಡಿರುವ ಇಂತಹ ಕೃತಿಗಳು ಗಮನೀಯ.

## ವಸ್ತುಪಾಠಗಳನ್ನು ಕುರಿತ ವಸ್ತುನಿಷ್ಠ ಅಧ್ಯಾಪನ ಕೃತಿ 'ವಸ್ತು ಪಾಠಗಳು' (1900)

ರಾವ್ ಬಹದ್ದೂರ್ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶನ ವಿಚಕ್ಷಣ ಆರ್.ನರಸಿಂಹಾಚಾರ್ ಅವರ 'ವಸ್ತುಪಾಠಗಳು' ಎಂಬ ಈ ಕೃತಿ ೧೯೨೦ರಲ್ಲಿ ೩ನೆಯ ಬಾರಿಗೆ ಮುದ್ರಣವನ್ನು ಕಂಡಿದೆ. ೩ನೆಯ ಮುದ್ರಣದಲ್ಲಿ ೩೦೦೦ ಪ್ರತಿಗಳು ಹೊರಬಂದಿದ್ದು ಮೈಸೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯು ಪ್ರಕಟಪಡಿಸಿರುವ ಈ ಕೃತಿ ಬೆಂಗಳೂರಿನ caxton press ನಲ್ಲಿ ಛಾಪಿಸಲ್ಪಟ್ಟಿದೆ. ಒಟ್ಟು ೨೨೨ ಪುಟಗಳ ಈ ಕೃತಿಯಲ್ಲಿ ೨ ಅಧಿಕರಣಗಳು ಇದ್ದು ೨೪ ಪಾಠಗಳನ್ನು ಒಳಗೊಂಡಿದೆ. ಕೃತಿಕಾರರು ಸಂಗ್ರಹವಾದ ಪೀಠಿಕೆ ಹಾಗೂ ದೀರ್ಘವಾದ ಅವತರಣಿಕೆಯಲ್ಲಿ ಈ ಕೃತಿಯ ಉದ್ದೇಶ ಹಾಗೂ ಸ್ವರೂಪವನ್ನು ಸ್ಪಷ್ಟಪಡಿಸಿರುತ್ತಾರೆ. ಈ ಕೃತಿಯು ಒಂದನೆಯ ಸಂಪುಟವಾಗಿದ್ದು ಈ ಸಂಪುಟದ ಮೊದಲನೆಯ ಮುದ್ರಣ ೧೯೦೦ರಲ್ಲಿ ಆಯಿತು. ಎರಡನೆಯ ಸಂಪುಟದ ಬಗ್ಗೆ ಯಾವುದೇ ಮಾಹಿತಿ ಪ್ರಸ್ತುತ ಲೇಖಕನಿಗೆ ದೊರೆತಿಲ್ಲ.

ಇದು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ 'ವಸ್ತುಪಾಠ'ಗಳನ್ನು ಬೋಧಿಸುವ ಶಾಲಾಶಿಕ್ಷಕರಿಗೆ ಬೋಧನೆಯ ವಿಧಾನವನ್ನು ನಿರೂಪಿಸುವ ಕೃತಿ. 'ವಸ್ತುಪಾಠ' ಎಂದರೆ ಕೃತಿಕಾರರೇ ಹೇಳಿರುವಂತೆ


ವಸ್ತು ಪಾಠಗಳು.

ಒಂದನೆಯ ಸಂಪುಟ.

A BOOK ON OBJECT LESSONS

BY

R. NARASIMHACHAR, M.A.,

VOL. I.

THIRD EDITION 3,000 Copies.

BANGALORE:
PRINTED AT THE CAXTON PRESS
·920.

"ಹುಡುಗರ ಇದಿರಿಗೆ ಯಾವುದಾದರೂ ಒಂದು ವಸ್ತುವನ್ನು ತಂದಿಟ್ಟು, ಅವರು ಅದರ ಸ್ವಭಾವವನ್ನೂ ಉಪಯೋಗವನ್ನೂ ಸಾಧ್ಯವಾದ ಮಟ್ಟಿಗೆ ಪರೀಕ್ಷಿಸಿ ತಿಳಿದುಕೊಳ್ಳುವುದಕ್ಕೆ ಅನುಕೂಲ್ಯವನ್ನು ಉಂಟು ಮಾಡುವ ಪಾಠಗಳು. ಹುಡುಗರು ತಮ್ಮ ಇಂದ್ರಿಯಗಳನ್ನು ತಾವೇ ಉಪ ಯೋಗಿಸುವುದರ ಮೂಲಕ ಅವರ ಪ್ರಪಂಚ ಜ್ಞಾನವನ್ನು ಹೆಚ್ಚಿಸುವ ಪಾಠಗಳಿಗೆಲ್ಲಾ 'ವಸ್ತುಪಾಠ'ವೆಂದು ಹೇಳಬಹುದು." ವಸ್ತು ಪಾಠಗಳ ಉದ್ದೇಶವೆಂದರೆ ೧. ಇಂದ್ರಿಯಗಳ



ಮೂಲಕ ಮನಸ್ಸಿಗೆ ಉತ್ತೇಜನವನ್ನು ಉಂಟು ಮಾಡಿ ಬುದ್ಧಿಯನ್ನು ಕುದುರಿಸುವುದೇ ವಸ್ತುಪಾಠಗಳ ಉದ್ದೇಶ. ೨. ಇಂದ್ರಿಯಗಳ ಮೂಲಕ ಮನಸ್ಸನ್ನು ಉದ್ಬೋಧಿಸುವುದು ಮುಖ್ಯೋದ್ದೇಶ ವಾದರೂ, ಜ್ಞಾನ ವೃದ್ಧಿಯೂ ಒಂದು ಉದ್ದೇಶ ವೆಂದು ಭಾವಿಸಬೇಕು. ೩. ಭಾಷೆ ಯನ್ನು ಕಲಿಯುವುದಕ್ಕೆ ಸಹಕಾರಿ ಯಾಗುವುದು.

ಉಚಿತವಾದ ಪ್ರಶ್ನೆಗಳನ್ನು ಕೇಳಿ ಪಾಠವನ್ನು ಬೋಧಿಸುವುದಕ್ಕೆ ಅವತರಣಿಕೆಯಲ್ಲಿ ಕೃತಿಕಾರರೇ ನೀಡಿರುವ ಒಂದು ಉದಾಹರಣೆಯನ್ನು ನೋಡೋಣ.

**ಗಾಜಿನ ವಿಷಯವಾದ ಪಾಠ.**

ಒಂದು ಚೂರು ಗಾಜನ್ನು ಉಪಾಧ್ಯಾಯನು ಹುಡುಗರ ಕೈಯಲ್ಲಿ ಕೊಟ್ಟು, ವರ್ಗದ ಹುಡುಗರೆಲ್ಲಾ ನೋಡುವಂತೆ ಮಾಡಿದ ಮೇಲೆ–

ಉಪಾಧ್ಯಾಯನು(ಉ)–ನನ್ನ ಕೈಯಲ್ಲಿರುವುದೇನು?

ಹುಡುಗರು(ಹು)–ಒಂದು ಚೂರು ಗಾಜು

ಉ–ಈ ಗಾಜನ್ನು ನೀವೆಲ್ಲಾ ನೋಡಿದಿರಲ್ಲಾ; ಇದು ಹೇಗಿದೆ?

ಹು–ಹೊಳಪಾಗಿದೆ–೧

ಉ–ಕೈಯಲ್ಲಿ ತೆಗೆದುಕೊಂಡು ಮುಟ್ಟಿ ನೋಡು.ಹೇಗಿದೆ?

ಹು–ನುಣುಪಾಗಿದೆ–೨

ಉ–ನಿನ್ನ ಬಟ್ಟೆಯೊಂದಿಗೆ ಹೋಲಿಸಿ ನೋಡು; ಎರಡನ್ನೂ ಅಮುಕಿ ನೋಡು.ಹೇಗಿದೆ?

ಹು–ಗಟ್ಟಿಯಾಗಿದೆ–೩

ಉ–ಈ ಕೊಟ್ಟಡಿಯಲ್ಲಿ ಬೇರೆ ಏನಾದರೂ ಗಾಜಿದೆಯೇ?

ಹು–ಇದೆ, ಕಿಟಕಿಯ ಕದದಲ್ಲಿದೆ.

ಉ–(ಗಾಜಿನ ಕದವನ್ನು ಮುಚ್ಚಿ)ಕಿಟಕಿಯ ಹೊರಗೆ ನೋಡು. ಏನು ಕಾಣುತ್ತದೆ?

ಹು–ತೋಟ ಕಾಣುತ್ತದೆ.

ಉ–(ಕಿಟಕಿಯ ಮರದ ಕದವನ್ನು ಮುಚ್ಚಿ) ಈಗ ಹೊರಗೆ ನೋಡು. ಏನು

ಕಾಣುತ್ತದೆ? ಹು–ಏನೂ ಕಾಣುವುದಿಲ್ಲ.

ಉ–ಏಕೆ? ಹು–ಮರದ ಕದ ಮುಚ್ಚಿಕೊಂಡಿದೆ.

ಉ–ಹಾಗಾದರೆ ಮರದ ಕದಕ್ಕೂ ಗಾಜಿನ ಕದಕ್ಕೂ ಏನು ವ್ಯತ್ಯಾಸ ಕಂಡುಬರುತ್ತದೆ? ಹು–ಮರದ ಕದದ ಆಚೆ ಕಾಣುವುದಿಲ್ಲ. ಗಾಜಿನ ಕದದ ಆಚೆ ಕಾಣುತ್ತದೆ–೪

ಉ–ಗಾಜಿನಲ್ಲಿರುವ ಈ ಗುಣಕ್ಕೆ ಹೆಸರೇನು ಬಲ್ಲೆಯಾ?

ಹು–ತಿಳಿಯದು.

ಉ–ಹೇಳುತ್ತೇನೆ, ಕೇಳು–'ಪಾರದರ್ಶಕ' ಜ್ಞಾಪಕವಿಟ್ಟುಕೋ, ಈಗ ಒಂದು ವಸ್ತುವು ಪಾರ ದರ್ಶಕವೆಂದರೆ ಏನು ತಿಳಿದುಕೊಳ್ಳುತ್ತೀಯೆ?

ಹು–ಆಚೆ ಕಾಣುವಂತೆ ಮಾಡುವುದು.

ಉ–ಸರಿ, ಇನ್ನಾವುದಾದರೂ ಒಂದು ಪಾರದರ್ಶಕ ವಸ್ತುವನ್ನು ಜ್ಞಾಪಿಸಿಕೋ.

ಹು–ತಿಳಿನೀರು. ಉ–ಸರಿ; ಈ ಗಾಜನ್ನು ನಾನು ಕೆಳಗೆ ಬೀಳಿಸಿದರೆ , ಅಥವಾ ಗಾಜಿನ ಕದಕ್ಕೆ ಚೆಂಡನ್ನು ಹೊಡೆದರೆ ಏನಾಗುವುದು?

ಹು–ಗಾಜು ಒಡೆದು ಹೋಗುವುದು.

ಉ–ಈ ಗುಣಕ್ಕೆ ಏನು ಹೆಸರು ಬಲ್ಲೆಯಾ? ಹು–ತಿಳಿಯದು.

ಉ–ಹೇಳುತ್ತೇನೆ, 'ಪೆಳಸು' –೫ ಜ್ಞಾಪಕವಿಟ್ಟುಕೋ. 'ಪೆಳಸು' ಎಂದರೇನು? ಹು–ಒಡೆದು ಹೋಗುವುದು

ಉ–ಮರದ ಕದದ ಮೇಲೆ ಚೆಂಡನ್ನು ಎಸೆದರೆ ಏನಾಗುತ್ತದೆ?

ಹು–ಅದು ಒಡೆದು

ಹೋಗುವುದಿಲ್ಲ. ಉ–ಹಾಗಾದರೆ ಮರವು ಪೆಳಸು ಎನ್ನಬಹುದೆ? ಹು–ಹೇಳಬಹುದು

**(ಈ ಗುಣವು ಅವರ ಮನಸ್ಸಿಗೆ ತಿಳಿದಿದೆ, ಅಭಿಪ್ರಾಯವು ಮನಸ್ಸಿಗೆ ಬಂದಿದೆ ಗುಣವನ್ನು ಸೂಚಿಸುವ ಪದ ಮಾತ್ರ ತಿಳಿಯದು. ಇಂಥ ಸಂದರ್ಭದಲ್ಲಿ ಪದವನ್ನು ಹೇಳಿಕೊಟ್ಟರೆ ಜ್ಞಾಪಕವಿರುತ್ತದೆ. ಅಭಿಪ್ರಾಯವು ಹುಟ್ಟಿದೆ, ಇಲ್ಲ, ಎಂಬುದನ್ನು ಕೇಳಿ ಉದಾಹರಣೆಗಳ ಮೂಲಕ ನಿರ್ಧರಿಸಬಹುದು.)**

ಉ–ಹಾಗಲ್ಲ. **ಸುಲಭವಾಗಿ ಒಡೆದು ಹೋಗುವುದಕ್ಕೆ** ಮಾತ್ರ 'ಪೆಳಸು' ಎನ್ನಬೇಕು. ಮರ ಪೆಳಸಲ್ಲ. ಪೆಳಸಾದ ಇನ್ನೂ ಕೆಲವು ಪದಾರ್ಥಗಳನ್ನು ಹೇಳು. ಹು–ಬಳಪ,ಸೀಮೆಸುಣ್ಣ

ಮೇಲೆ ೧,೨,೩,೪,೫ ಎಂದು ಗುರುತುಮಾಡಿ ತಿಳಿಸಿರುವ **ಹೊಳಪು, ನುಣುಪು, ಪೆಳಸು** ಮುಂತಾದ ಇಷ್ಟು ಗುಣಗಳು ಮಾತ್ರ ಹುಡುಗರಿಗೆ

ತಿಳಿಯಬಹುದು. ಅವರಿಗೆ ತಿಳಿದ ವಿಷಯಗಳನ್ನೇ ಆಧಾರ ಮಾಡಿಕೊಂಡು ಮುಂದಕ್ಕೆ ಉಚಿತ ಪ್ರಶ್ನೆಗಳನ್ನು ಕೇಳಿ, ಉಪಾಧ್ಯಾಯನು ಅವರಿಗೆ ತಿಳಿಯದ ವಿಷಯಗಳಲ್ಲಿ ಕೆಲವನ್ನು ತಿಳಿಸಬಹುದು.

ಈ ಶತಮಾನದ ಆರಂಭದಲ್ಲಿ ಬೋಧನಾವಿಧಾನ ಹೇಗಿತ್ತು ಎಂಬುದಕ್ಕೆ ಇದೊಂದು ಪುಟ್ಟ ಉದಾಹರಣೆ. ಶಾಸನ ಸಂಗ್ರಹ, ಸಾಹಿತ್ಯ ಚರಿತ್ರೆ ಮತ್ತು ಸಂಶೋಧನ ಕ್ಷೇತ್ರಗಳಲ್ಲಿ ಆಳವಾದ ಪಾಂಡಿತ್ಯವಿದ್ದ ಆಚಾರ್ಯರು ಪುಟ್ಟ ಹುಡುಗರ ವಿದ್ಯಾಭ್ಯಾಸದ ಬಗ್ಗೆ ಹೇಗೆ ಕಾಳಜಿಯನ್ನಿಟ್ಟು ಕೊಂಡಿದ್ದರು ಎಂಬುದನ್ನು ಈ ಕೃತಿ ತಿಳಿಸುತ್ತದೆ.

ವಸ್ತು ಪಾಠಗಳನ್ನು ಹುಡುಗರಿಗೆ ಬೋಧಿಸುವಾಗ ಆ ವಸ್ತುವನ್ನು ಹುಡುಗರ ಇದಿರಿಗೆ ಇಡಬೇಕೆಂದು ಕೃತಿಕಾರರು ಹೇಳುತ್ತಾರೆ. ಮುಂದೆ ಅವರ ಮಾತುಗಳನ್ನು ಗಮನಿಸಿ:

ಕೆಲವು ವೇಳೆ ವಸ್ತು ದೊರೆಯುವುದಿಲ್ಲ, ಅಥವಾ ಅವುಗಳನ್ನು ತರುವುದು ಅಸಾಧ್ಯವಾಗುತ್ತದೆ. ಹುಲಿಯನ್ನು ತಂದು ಹುಡುಗರ ಮುಂದೆ ನಿಲ್ಲಿಸುವುದಕ್ಕಾದೀತೇ? ಇಂಥ ಸಂದರ್ಭದಲ್ಲಿ ವಸ್ತುಗಳ ಚಿತ್ರವನ್ನಾದರೂ ತಂದಿಡಬೇಕು.'

ವಸ್ತುಪಾಠಗಳನ್ನು ಬೋಧಿಸುವಾಗ ಶಿಕ್ಷಕರಿಗೆ ಆಚಾರ್ಯರು ೯ ಸೂಚನೆಗಳನ್ನು ನೀಡಿರುತ್ತಾರೆ.

೧. ಅಧ್ಯಾಪಕನಿಗೆ ತಾನು ತಿಳಿಸುವ ವಿಷಯದ ಬಗ್ಗೆ ತಿಳಿವಳಿಕೆ ಇರಬೇಕು.

೨. ವಿದ್ಯಾರ್ಥಿಗಳು ತಮ್ಮ ಇಂದ್ರಿಯಗಳನ್ನು ಉಪಯೋಗಿಸುವಂತೆ ಮಾಡಬೇಕು.

೩. ಮನೋರಂಜಕ ಹಾಗೂ ಉಚಿತ ಪ್ರಶ್ನೆಗಳನ್ನು ಕೇಳಬೇಕು.

೪. ಸಂವಾದ ಏರ್ಪಡಿಸಬೇಕು.

೫. ಪ್ರಾಯೋಗಿಕತೆ ತಿಳಿಸಿಕೊಡಬೇಕು. ಉದಾ-ಉಪ್ಪನ್ನು ನೀರಿನಲ್ಲಿ ಹಾಕಿ 'ಕರಗು'ವ ಬಗ್ಗೆ ತಿಳಿಸಬಹುದು.

೬. ಸುಲಭವಾದ ಭಾಷೆ ಬಳಸಬೇಕು.

೭. ಅಗತ್ಯಬಿದ್ದರೆ ಉಚಿತ ಕಥೆಗಳನ್ನು ಹೇಳಬಹುದು.

೮. ಕಾಡುಹರಟೆ ಹೊಡೆಯತಕ್ಕದ್ದಲ್ಲ.

೯. ಬೇಸರವಾಗದಂತೆ ಪಾಠಗಳನ್ನು ಅನೇಕಾವೃತ್ತಿ ಬೋಧಿಸುವುದು.

ಬೋಧನಾವಿಧಾನಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಬಂದ ಮೊದಲ ಪುಸ್ತಕಗಳಲ್ಲಿ ಇದೊಂದಾಗಿದೆ.

# ಕನ್ನಡ ಬಾಲಬೋಧಿನಿ
## [ KANARESE INFANTS ' PREMER (1931) ]

---

**ಕನ್ನಡ ಬಾಲಬೋಧಿನಿ** (ವರ್ನ್ಯಾಕ್ಯುಲರ ಟೆಕ್ಸ್‌ಟಬುಕ್ಸ ರಿವಿಜನ್ ಕಮಿಟಿಯವರಿಂದ ರಚಿತವಾದದ್ದು)–**Kanarese Infants' Primer** (prepared by the vernacular text books revision committee )- ಈ ಪುಸ್ತಕವನ್ನು ಮುಂಬಯಿ ಇಲಾಖೆಯೊಳಗಿನ ಸರಕಾರದ ವಿದ್ಯಾಖಾತೆ (The Department of Public Instructioin, Bombay )–ಇವರಿಗಾಗಿ **ಆರ್. ಎನ್. ದಾತಾರ್ ಅಂಡ್ ಸನ್ಸ್,** ಪಬ್ಲಿಷರ್ಸ್, ಪೂನಾ ಸಿಟಿ–ಇವರು 1931ರಲ್ಲಿ ಪ್ರಕಟಿಸಿರುತ್ತಾರೆ. ಪಠ್ಯ ಪುಸ್ತಕ ಸಮಿತಿಯ ಅಧ್ಯಕ್ಷರ ಮತ್ತು ಸದಸ್ಯರ ಹೆಸರುಗಳನ್ನು ಇಲ್ಲಿ ನೀಡಿಲ್ಲದಿರುವುದರಿಂದ ಇಲ್ಲಿನ ಪಾಠಗಳನ್ನು ರಚಿಸಿದವರಾರೆಂಬುದು ಗೊತ್ತಾಗುವುದಿಲ್ಲ. ಅಷ್ಟಮ ಡೆಮಿ ಆಕಾರದ 32 ಪುಟಗಳ ಈ ಚಿಕ್ಕ ಪುಸ್ತಕದ ಈ ಆವೃತ್ತಿ ಐದನೆಯ ಮುದ್ರಣವಾಗಿದ್ದು ಈ ಐದನೆಯ ಮುದ್ರಣದಲ್ಲಿ **1,00,000–ಒಂದು ಲಕ್ಷ** ಪ್ರತಿಗಳನ್ನು ಛಾಪಿಸಿರುತ್ತಾರೆ. ಮೊದಲನೆಯ ಮುದ್ರಣದ ತೇದಿ ಗೊತ್ತಿಲ್ಲ. ಕನ್ನಡದ ಯಾವ ಗ್ರಂಥಸೂಚಿಗಳಲ್ಲೂ ಈ ಪುಟ್ಟ ಕೃತಿಯ ನಮೂದು ಇಲ್ಲ. ಕನ್ನಡದ ಪುಸ್ತಕಗಳ ಮರುಮುದ್ರಣಗಳ ಕಾಲಸರಾಸರಿ 5ವರ್ಷ ಎಂದಿಟ್ಟುಕೊಂಡರೆ ಈ ಕೃತಿಯ ಮೊದಲ ಮುದ್ರಣದ ಕಾಲವನ್ನು ಸುಮಾರು 1900 ಎಂದು ಇಟ್ಟುಕೊಳ್ಳಬಹುದು. ಈ ಪುಸ್ತಕದ 1931ನೆಯ ಇಸವಿಯ ಬೆಲೆ ಒಂದು ಆಣೆ ಅರ್ಥಾತ್ 6–ಆರು ನಯಾಪೈಸೆ. ಪುಸ್ತಕದ ಮುಖಪುಟದಲ್ಲಿ ಅಂದಿನ ಇಂಗ್ಲೆಂಡಿನ ದೊರೆಯ ಚಿತ್ರವಿದೆ. ಕ್ಯಾನರೀಸ್ ಮತ್ತು ವರ್ನ್ಯಾಕ್ಯುಲರ್ ಎಂಬ ಶಬ್ದಗಳ ಬಳಕೆ



ಇಲ್ಲಿರುವುದರಿಂದ ಮತ್ತು ಆ ಪದಗಳು ವಸಾಹತುಶಾಹೀ ಪದಗಳಾಗಿರುವುದರಿಂದ ಹಾಗೂ ಇಂಗ್ಲೆಂಡಿನ ದೊರೆಯ ಚಿತ್ರ ಪುಸ್ತಕದ ಮೇಲಿರುವುದರಿಂದ ಜೊತೆಗೆ 1900 ರ ಕಾಲದಲ್ಲಿ ಜರ್ಮನರು ಅಥವಾ ಬ್ರಿಟಿಷರು ಇಂಡಿಯಾದಲ್ಲಿ ಸಾರ್ವಜನಿಕ ಶಿಕ್ಷಣದ ಬಗ್ಗೆ ಆಸಕ್ತಿಯುಳ್ಳವರಾಗಿದ್ದದ್ದರಿಂದ ಸದ್ಯಕ್ಕೆ ಈ ಕೃತಿಯನ್ನು **ಜರ್ಮನ್ ಪಾದ್ರಿಗಳಾರೋ ದೇಶೀಯ ಪಂಡಿತರ** ನೆರವಿನಿಂದ ರಚಿಸಿದ್ದಾರೆ ಎಂಬ ತೀರ್ಮಾನಕ್ಕೆ ಬರಬಹುದು. ಐದು ಮುದ್ರಣಗಳಾಗಿರುವುದು ಹಾಗೂ ಐದನೆಯ ಮುದ್ರಣದಲ್ಲಿ ಒಂದು ಲಕ್ಷ ಪ್ರತಿಗಳು ಅಚ್ಚಾಗಿರುವುದನ್ನು ನೋಡಿದರೆ ಈ ಪುಟ್ಟ ಕೃತಿಯು ಸಾಕಷ್ಟು ಜನಪ್ರಿಯವಾಗಿದ್ದಿತೆಂದು ತಿಳಿಯಬಹುದು.

ಇದು ನಾಲ್ಕನೆಯ ವಯಸ್ಸಿನಿಂದ ಎಂಟನೆಯ ವಯಸ್ಸಿನವರೆಗಿನ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಪಠ್ಯಪುಸ್ತಕವಾಗಿರುವುದರಿಂದ 28 ಪಠ್ಯಪುಟಗಳಲ್ಲಿ 60 ಚಿತ್ರಗಳನ್ನು ಅತ್ಯಂತ ಔಚಿತ್ರಪೂರ್ಣವಾಧ ರೀತಿಯಲ್ಲಿ ನೀಡಿರುವುದರಿಂದ ಇದನ್ನು ಸಚಿತ್ರ ಪಠ್ಯಪುಸ್ತಕವೆನ್ನಬಹುದು. ಕನ್ನಡ ವರ್ಣಮಾಲೆಯಲ್ಲಿ ಬರುವ ಅಕ್ಷರಗಳನ್ನು ಮತ್ತು ಹತ್ತನೆಯ ವಯಸ್ಸಿನೊಳಗಿನ ಹುಡುಗರಿಗೆ ಪರಿಚಯವಿರಬಹುದಾದ ಸರಳ ಶಬ್ದಗಳನ್ನು 12 ಗುಂಪುಗಳಲ್ಲಿ ಪರಿಚಯ ಮಾಡಿಕೊಡಲಾಗಿದೆ. 13 ಪಾಠಗಳ ಶಿರ್ಷಿಕೆಯಡಿ ಸರಳ ವಾಕ್ಯಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಕೆಲವು ಪಾಠಗಳು ಸಂಭಾಷಣೆಯ ರೂಪದಲ್ಲಿದ್ದು ಬಾಲಕರಿಗೆ ತುಂಬಾ ಕುತೂಹಲವನ್ನುಂಟುಮಾಡುವ ರೀತಿಯಲ್ಲಿದೆ. ಹೆಚ್ಚಿನ ಅಂಶಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಬೇಕಾದಾಗ ಅಡಿಟಿಪ್ಪಣಿಗಳನ್ನು ನೀಡಿರುತ್ತಾರೆ. ಇದರ ಜೊತೆಗೆ ಹದಿಹರೆಯದ ಹುಡುಗರನ್ನು ಗಮನದಲ್ಲಿರಿಸಿಕೊಂಡಿರುವ 9 ಪದ್ಯ ರಚನೆಗಳನ್ನು ಇಲ್ಲಿ ಸೇರಿಸಲಾಗಿದೆ. ಎಲ್ಲ ಪದ್ಯಗಳಿಗೆ ಹಾಡಲು ಅನುಕೂಲವಾಗುವಂತೆ ರಾಗ ತಾಳಗಳ ಸೂಚನೆಯಿದೆ.



ಹದಿಹರೆಯದ ಹುಡುಗರು ತಮ್ಮ ಸುತ್ತ ಮುತ್ತಣ ಪರಿಸರದಲ್ಲಿ ಕಾಣುವ ಮತ್ತು ಕೇಳುವ ವಿಷಯಗಳನ್ನೇ ಪಾಠಗಳಲ್ಲಿ ಅಳವಡಿಸಿರುವುದು ತುಂಬಾ ಅರ್ಥಪೂರ್ಣವಾಗಿದೆ. ಪ್ರಾಣಿಪಶುಪಕ್ಷಿಗಳು, ಬಂಧು

ಬಾಂಧವರು, ಆಟಪಾಟಗಳು, ಅಂಗಡಿಮುಂಗಟ್ಟುಗಳನ್ನು ಕುರಿತು ಸರಳವಾದ ಶಬ್ದ ಹಾಗೂ ವಾಕ್ಯಗಳ ಮೂಲಕ ವಿವರಿಸಲಾಗಿದೆ. ಆದಷ್ಟೂ ಒತ್ತಕ್ಷರಗಳನ್ನು ಬಳಸಿಯೇ ಇಲ್ಲ, ತೀರ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಒತ್ತಕ್ಷರಗಳನ್ನು ಬಳಸಲಾಗಿದೆ ಮತ್ತು ಒತ್ತಕ್ಷರಗಳನ್ನು ಕುರಿತ ವಿವರಣೆಗಳನ್ನು ವಿದ್ಯಾರ್ಥಿಗಳಿಗೆ ಕಷ್ಟವಿಲ್ಲದಂತೆ ಹೇಳಿಕೊಡಬೇಕೆಂಬ ಸೂಚನೆಯನ್ನು ಉಪಾಧ್ಯಾಯರುಗಳಿಗೆ ಸೂಚಿಸಲಾಗಿದೆ. ಅಂತೂ ಹುಡುಗರಿಗೆ ಭಾರವಾಗದ ರೀತಿಯಲ್ಲಿ ಕನ್ನಡ ಭಾಷೆಯನ್ನು ಬೋಧಿಸಲು ಪ್ರಯತ್ನ ಪಟ್ಟಿರುವುದು ಸ್ತುತ್ಯಾರ್ಹ. ನಿದರ್ಶನಕ್ಕಾಗಿ "3ನೇ ಪಾಠ–ಅಂಕೆಗಳು" ಭಾಗವನ್ನು ಗಮನಿಸೋಣ

**"ನಮಗೆ ಒಂದು ಬಾಯಿ ಇರುವುದು. ಅದರಂತೆ ಒಂದೇ ಮೂಗು, ಒಂದೇ ತಲೆ. '1' ಇದು ಒಂದರ ಗುರುತು. ನಮಗೆ ಬಲಗೈ ಒಂದು, ಎಡಗೈ ಒಂದು, ಹೀಗೆ ಎರಡು ಕೈಗಳು. ದೇವರು ನಮಗೆ ಎರಡು ಕೈ, ಎರಡು ಕಾಲುಗಳನ್ನು ದಯಪಾಲಿಸಿರುವನು. '2' ಇದು ಎರಡರ ಗುರುತು. ಮೂರು ನಾಮದವರ ನಾಮಾ ನೋಡಿರಿ. ನಡುವಿನ ನಾಮ ಕೆಂಪದು; ಕುಂಕುಮದಿಂದ ಮಾಡುವರು. ಎಡಬಲದ ನಾಮಗಳು ಹಳದಿ ಅಥವಾ ಬಿಳಿಯವು; ಅರಿಸಿನದಿಂದ ಅಥವಾ ಮಟ್ಟಿಯಿಂದ ಮಾಡುವರು."**

ಇಡೀ ವಾಕ್ಯಗಳಲ್ಲಿ ಮಟ್ಟಿ ಎಂಬುದನ್ನು ಬಿಟ್ಟರೆ ಎಲ್ಲಿಯೂ ಒತ್ತಕ್ಷರವಿಲ್ಲ. ಇಡೀ ಪಠ್ಯದಲ್ಲಿ ಕನ್ನಡದ ಸಂಖ್ಯೆಗಳನ್ನೇ ಬಳಸಲಾಗಿದೆ. ಎಲ್ಲಿಯೂ ತಪ್ಪಿಯೂ ಅರೇಬಿಕ್ ಅಥವಾ ರೋಮನ್ ಸಂಖ್ಯೆಯನ್ನು ಬಳಸಿಲ್ಲ. ಇದು ಮುಂಬಯಿ ಪ್ರಾಂತದ ಕಡೆಯ ಪಠ್ಯವಾದ್ದರಿಂದ ಈ ಪುಸ್ತಕದಲ್ಲಿ ಆ ಪ್ರಾಂತದಲ್ಲಿ ಒಂದು ಶತಮಾನದ ಹಿಂದೆ ಬಳಕೆಯಲ್ಲಿದ್ದ ಶಬ್ದಗಳ ಪರಿಚಯವು ನಮಗಾಗುವುದು ಒಂದು ಪ್ರಯೋಜನ. ಯಾವ ಪಾಠಗಳಲ್ಲಿಯೂ ಜಾತಿಯ, ಮೂಢನಂಬಿಕೆಗಳ ಅಥವಾ ಅರೆಬರೆ ತಿಳಿವಳಿಕೆಯ ವಿಷಯಗಳಿಲ್ಲದೆ ವಸ್ತುನಿಷ್ಠವಾಗಿ ಜಾತ್ಯತೀತವಾಗಿ ಮತ್ತು ಧರ್ಮಾತೀತವಾಗಿ ವಿಷಯಗಳ ನಿರೂಪಣೆಯಿರುವುದು ಶ್ಲಾಘನೀಯ ಅಂಶವಾಗಿದೆ.

ಇನ್ನು ಪದ್ಯರಚನೆಗಳ ಕಡೆಗೆ ಗಮನ ಹರಿಸೋಣ. ಒಂಬತ್ತು ಪದ್ಯರಚನೆಗಳಲ್ಲಿ ಒಂದು ಮಾತ್ರ ಕಂದಪದ್ಯ. ಅದೂ ಸಂಪೂರ್ಣವಾಗಿ ಹೊಸಗನ್ನಡದ ರಚನೆ. ಉಳಿದಂತೆ ನಾಲ್ಕು ದ್ವಿಪದಿಗಳು ಮತ್ತು ನಾಲ್ಕು ಚೌಪದಿ ರಚನೆಗಳಿವೆ. ಕಂದ ಪದ್ಯವಾದ ಆ ಪದ್ಯರಚನೆ ಹೀಗಿದೆ :

ಕುರುಡರಕುಂಟರಮೂಕರ
ಕರವಿಲ್ಲದರನ್ನುಕಂಡುನಗಬೇಡಿರಿನೀವ್।
ತ್ವರಿತದಿಸಹಾಯಮಾಡಿರಿಂ
ಪರಮೇಶ್ವರನೊಲಿದುಸುಖವನೀವನುನಿಜದಿ

ಬಾಲಕರಿಗೆ ಸಹನೆ, ತಾಳ್ಮೆ ಹಾಗೂ ಪರರ ವಿಷಯದಲ್ಲಿ ಸಹಾನುಭೂತಿಯನ್ನು ಈ ಪದ್ಯರಚನೆಯು ಸರಳವಾಗಿ ತಿಳಿಸಿಕೊಡುವುದಲ್ಲದೆ ಅಂಗವಿಕಲರನ್ನು ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿಸಿಕೊಳ್ಳಬೇಕೆಂಬುದರ ಅಗತ್ಯವನ್ನು ಒತ್ತಿ ಹೇಳಲಾಗಿದೆ.

ಕನ್ನಡ ವರ್ಣಮಾಲೆಯುನ್ನು ಹೇಳಿಕೊಡುವ ಪದ್ಯವನ್ನು ಗಮನಿಸಬಹುದು :

### ಮೂಲಾಕ್ಷರಗಳ ಪದ್ಯ. (ದ್ವಿಪದಿ)

**ಎಲ್ಲರೂ ಕೂಡಿ :** ಗೆಳೆಯರೇ ಪೋಗುವಾ ಮಠಕೆ ಬೇಗದೊಳು ।
ಘಳಿಲನೇ ಕಲಿಯುವಾ ಪಾಠ ಗುರುವಿನೊಳ ॥ **1** ॥
**ಒಬ್ಬ ಹುಡುಗ :** ಸರಗಳನು ಪೇಳುವೆನು ನಾ **ಅ ಆ** ಗಳನು ।
ಒರೆವೆನ್ನೆ ಮುಂದಿನವ ನಾ **ಇ ಈ** ಗಳನು ॥ **2** ॥
**ಇನ್ನೊಬ್ಬ ಹುಡುಗ :** ಹಾವಿನಂದದೆ ಕಾಂಬ ಸಲೆ **ಉ ಊ** ಗಳನು ।
ನೀವು ಕೇಳಿರಿ ನುಡಿವೆ ಗಡ **ಋ**ವರ್ಣಗಳನು ॥ **3** ॥
—,,— ಕೇಳು ತಂಗಿಯೆ **ಎ ಏ ಐ** ಗಳನು ನೀನು ।
ಹೇಳತೊಡಗುವೆ **ಒ ಓ ಔ** ಗಳನು ನಾನು ॥ **4** ॥
— ,, — ನುಡಿವೆನ್ನೆ ನಾನೀಗ **ಅಂ ಅಃ** ಗಳಿವನು । ಕಡೆ
ಮೊದಲು ಹದಿನಾರು ಸರಗಳೆಂದೆಣಿಸಿವನ ॥ **5** ॥
**ಇಬ್ಬರು ಹುಡುಗೆಯರು :** ಐದೈದು ಹೇಳುವೆವು **ಕ ಖ ಗ ಘ ಙ**ಗಳನು।
ಮೋದದಿಂ ಕೇಳುವುದು **ಚ ಛ ಜ ಝ ಞ**ಗಳನು ॥6॥
— ,, — ಇದರ ಮುಂದಿನವೀಗ **ಟ ಠ ಡ ಢ ಣ**ಗಳನು।
ಚದುರರೇ ನುಡಿಯುವೆವು **ತ ಥ ದ ಧ ನ**ಗಳನು॥7॥
**ಮತ್ತೊಬ್ಬ ಹುಡುಗ :** ನಾನು ಹೇಳುವೆ ಕೇಳು **ಪ ಫ ಬ ಭ ಮ**ಗಳನು।
ಸಾನುರಾಗದೆ ಮುಂದೆ **ಯ ರ ಲ ವ**ಂ ಗಳನು ॥8॥
— ,,— ಹೊಸತಾಗಿ ಕಲಿತಿಹೆನು **ಶ ಷ ಸ ಹ ಳ**ಗಳನು।

ಹಸನಾಗಿ ನುಡಿಯುವೆನು ಬಿಡದಲಿವುಗಳನು ॥ 9 ॥

**ಎಲ್ಲರೂ ಕೂಡಿ** : ಕಲಿತು ಗುರುವರನಿಂದ ಹೊಸ ಪಾಠಗಳನು ।
ಸಲೆ ತೋಷ ಪಡಿಸುವಾ ಮನೆಯ ಮಂದಿಯನು ॥10॥

ಇಲ್ಲಿ ಒಂದು ತರಗತಿಯಲ್ಲಿರುವ ಎಲ್ಲಾ ಹುಡುಗ ಹುಡುಗಿಯರನ್ನೂ ಒಳಗೊಳ್ಳುವಂತೆ ಸಾಮೂಹಿಕವಾಗಿ ಮತ್ತು ಪ್ರತ್ಯೇಕವಾಗಿ ವರ್ಣಮಾಲೆಯನ್ನು ಹೇಳಿಕೊಡಿಸುವ ಪ್ರಯತ್ನದ ಸೂಚನೆ ಕುತೂಹಲಕಾರಿಯಾಗಿದೆ.

9ನೆಯ ಪಾಠದಲ್ಲಿ **ಡ್ರಿಲ್** ಎಂಬ ಒಂದು ಪದ್ಯರಚನೆ ಇದೆ. ಇದನ್ನು ಬಾಲಕ ಬಾಲಕಿಯರು ಸಾಲೆಗೆ ಬಂದಾಗ ಹೇಳುವರು :

**ಡ್ರಿಲ್ (ಸಾಲೆಗೆ ಬಂದಾಗ) ॥ಪದ॥ ರಾಗ–ಶಂಕರಾಭರಣ । ದಾದರಾ ತಾಳ ॥**

ಏಳಿರೆಲ್ಲರೂ ಸಾಲುಗೊಳ್ಳಿರಿ ।
ಕಾಲು ಜೋಡಿಸುತ್ತ ಕೈಯ ತೊಡೆಗೆ ಹಚ್ಚಿರಿ ॥ 1 ॥
ಒಂದು ಹೆಜ್ಜೆಯ ಮುಂದೆ ಬನ್ನಿರಿ ।
ಚಂದದಿಂದ ಚಪ್ಪಳಿಕ್ಕಿ ಹಿಂದೆ ಸರಿಯಿರಿ ॥ 2 ॥
ಲೀಲೆಯಿಂದಲಿ ಕಾಲು ಬಡಿಯುತ ।
ಸಾಲುಗೊಂಡು ಸಾವಕಾಶ ಬಲಕೆ ತಿರುಗಿರಿ ॥ 3 ॥
ಅತ್ತ ನೋಡಿರಿ ಮುಂದೆ ನಡೆಯಿರಿ ।
ಸುತ್ತು ಬಳೆಯ ತೆರದಿ ತಿರುಗಿ ನಿಂತುಕೊಳ್ಳಿರಿ ॥ 4॥
ಮುದ್ದು ಬಾಲರೆ ಶುದ್ಧ ಭಾವದೆ ।
ಬುದ್ಧಿ ಕೊಡುವನನ್ನು ನುತಿಸಿ ಸ್ಥಲಕೆ ಪೋಗಿರಿ ॥ 5॥

ಇಂತಹ ಇನ್ನೂ ಹಲವು ಕುತೂಹಲಕಾರಿ ಪದ್ಯರಚನೆಗಳಿವೆ. ಈ ರಚನೆಗಳೆಲ್ಲಾ ನವೋದಯ ಕಾಲಘಟ್ಟದ ಪೂರ್ವದ ಆಧುನಿಕತೆ ಕಾಣಿಸಿಕೊಳ್ಳುತ್ತಿದ್ದ ಕಾಲದಲ್ಲಿ ಬಂದಿವೆ ಎಂಬುದನ್ನು ಮರೆಯಬಾರದು. ದ್ವಿತೀಯಾಕ್ಷರ ಪ್ರಾಸ ತಪ್ಪದೆ ಬಂದಿದೆ ಎಂಬುದನ್ನು ಗಮನಿಸಬೇಕು. ಅಷ್ಟೇ ಅಲ್ಲ ಈ ಪಾಠ ಪದ್ಯರಚನೆಗಳನ್ನು ಗಮನಿಸುವವರು ಹತ್ತು ವಯೋಮಾನದೊಳಗಿನವರು ಎಂಬ ದೃಷ್ಟಿಯಿಂದ ಈ ಕಿರುಹೊತ್ತಗೆಯ ಮೌಲ್ಯಮಾಪನವನ್ನು ಮಾಡಬೇಕಾಗುತ್ತದೆ. ಕನ್ನಡದ ಬಾಲಬೋಧೆಗಳ ಇತಿಹಾಸದಲ್ಲಿ ಈ " **ಕನ್ನಡ ಬಾಲಬೋಧಿನಿ** " ಕೃತಿಗೆ ಒಂದು ವಿಶಿಷ್ಟ ಸ್ಥಾನ ಸಲ್ಲುತ್ತದೆ.



ಯೂರೋಪಿಗೆ ಹಿಂದಿರುಗಿದ ಮೇಲೆ ಮೈಸೂರು ಸರ್ಕಾರದ ಸಾರ್ವಜನಿಕ ಇಲಾಖೆಯ ಡೈರೆಕ್ಟರ್ J.Garrett ರವರು ಈ ಕೃತಿಯನ್ನು ಪೂರ್ಣ ಗೊಳಿಸಿದರು.ಆ ಕಾಲಘಟ್ಟದ ಕನ್ನಡ ಸಾಹಿತ್ಯವನ್ನು ಸಂಕಲನಕಾರರು Brahminical Literature, Literature of the Lingaites, Literature of the Jains ಹಾಗೂ Native Chrisitian Literature ಎಂದು ವರ್ಗೀಕರಿಸಿ ಅಲ್ಲಿನ ಕಾವ್ಯಭಾಗಗಳನ್ನು ಸಂಕಲಿಸಿದ್ದಾರೆ. ಕನ್ನಡದ ಮೊಟ್ಟಮೊದಲ ಸಂಕಲನ ಗ್ರಂಥವೆಂದರೆ ಸುಮಾರು ಕ್ರಿ.ಶ. 1250ರಲ್ಲಿ **ಮಲ್ಲಿಕಾರ್ಜುನನು** ರಚಿಸಿದ **'ಸೂಕ್ತಿ ಸುಧಾರ್ಣವ'**. ಇದರಲ್ಲಿ ಅಷ್ಟಾದಶ ವರ್ಣನೆಗಳಿಗೆ ಸಂಬಂಧಿಸಿದ ಸಾವಿರಾರು ಪದ್ಯಗಳನ್ನು ಮಾರ್ಗಕಾವ್ಯಗಳಿಂದ ಆಯ್ಕೆ ಮಾಡಿ ಸಂಕಲಿಸಿದ್ದಾನೆ. ನಂತರ 1550ರಲ್ಲಿ **ಅಭಿನವವಾದಿ ವಿದ್ಯಾನಂದನು 'ಕಾವ್ಯಸಾರ'** ಎಂಬ ಸಂಕಲಿತ ಕೃತಿಯನ್ನು ರಚಿಸಿರುತ್ತಾನೆ. ಅಷ್ಟಾದಶ ವರ್ಣನೆಗಳಲ್ಲಿ ಒಂದೊಂದಕ್ಕೂ ಕ್ರಮಾನುಸಾರವಾಗಿ ಇತರ ಕೃತಿಗಳಿಂದ ನಿದರ್ಶನ ಪದ್ಯಗಳನ್ನು ಇಲ್ಲಿ ಆಯ್ಕೆ ಮಾಡಿ ಪ್ರಕಾಶಪಡಿಸಿದ್ದಾನೆ. ಒಂದು ರೀತಿಯಲ್ಲಿ **ಶಿವಗಣ ಪ್ರಸಾದಿ ಮಹದೇವಯ್ಯ, ಕೆಂಚವೀರಣ್ಣೊಡೆಯ, ಹಲಗೆಯಾರ್ಯ, ಗೂಳೂರು ಸಿದ್ಧವೀರಣ್ಣೊಡೆಯ** ಹಾಗೂ **ಗುಮ್ಮಳಾಪುರದ ಸಿದ್ಧಲಿಂಗಯತಿ** ಇವರುಗಳು ವಿಭನ್ನ ಕಾಲಘಟ್ಟದಲ್ಲಿ ಸಿದ್ಧಪಡಿಸಿದ **ಶೂನ್ಯಸಂಪಾದನೆಗಳೂ** ಕೂಡ ಸಂವಾದ ರೂಪದಲ್ಲಿರುವ ವಿವಿಧ ಶಿವಶರಣರ ವಚನ ಸಂಕಲನಗಳೇ ಎನ್ನಬಹುದು.

ನಿರ್ದಿಷ್ಟ ಕಾಲಮಾನದ, ನಿರ್ದಿಷ್ಟ ಪರಂಪರೆಯ ಕಾವ್ಯಭಾಗಗಳ ಸಂಕಲನ(Anthology) ಮಾಡುವುದು ಬಹು ಕ್ಲಿಷ್ಟವಾದ ಕೆಲಸವೇ ಸರಿ. ಆಯ್ಕೆ ಮಾಡುವಲ್ಲಿ ಸಂಕಲನಕಾರನ ಬಹುಶ್ರುತತ್ವ ಒರೆಗೆ ಹಚ್ಚಲ್ಪಡುತ್ತದೆ. ತೌಲನಿಕ ವಿಮರ್ಶೆಗೆ ಸಂಕಲಿತ ಕೃತಿಗಳು ಬಹು ಉಪಯುಕ್ತ. ಸಂಕಲನಕಾರನ ರಸಾಭಿರುಚಿಗೂ ದ್ಯೋತಕ. ಈ ದೃಷ್ಟಿಯಿಂದ ಮಲ್ಲಿಕಾರ್ಜುನನೇ ಹೇಳಿಕೊಂಡಿರುವಂತೆ ಅವನ **'ಸೂಕ್ತಿ ಸುಧಾರ್ಣವ'** ವು "ಚದುರರ ಮೆಚ್ಚು,

ಭಾವುಕರ ಕೈಪಿಡಿ, ಅಕ್ಕರಿಗರ ಆಭರಣಂ" ಆಗಿದೆ. ಸದರಿ '**ಕರ್ನಾಟಕ ಪ್ರಾಕ್ಕಾವ್ಯ ಮಾಲಿಕೆ**' ಗ್ರಂಥವು '**ಸೂಕ್ತಿ ಸುಧಾರ್ಣವ**' ಹಾಗೂ '**ಕಾವ್ಯಸಾರ**' ದ ಮುಂದುವರೆದ ಆಂತಾಲಜಿಯಂತಿದೆ. ಅಷ್ಟೇ ಅಲ್ಲದೆ ಮುಂದೆ ಬಂದಂತಹ **ಬಿ.ಎಲ್.ರೈಸ್, ಆರ್.ನರಸಿಂಹಾಚಾರ್, ಎಸ್.ಜಿ.ನರಸಿಂಹಾಚಾರ್** ಮುಂತಾದವರು ಸಂಪಾದಿಸಿದ '**ಪದ್ಯಸಾರ**', **ವಿ.ಕೆ.ಗೋಕಾಕರು** ಸಂಕಲಿಸಿದ '**ನವ್ಯಧ್ವನಿ**' (1956), **ದ.ರಾ.ಬೇಂದ್ರೆಯವರು** ಸಂಕಲಿಸಿದ '**ಹೊಸಗನ್ನಡ ಕಾವ್ಯ ಶ್ರೀ**' (1957–ಐದು ಸಾವಿರ ಪ್ರತಿಗಳು), **ಚಂಪಾ** ಪ್ರಕಟಿಸಿದ '**ಸಂಕ್ರಮಣ ಕಾವ್ಯ**' (1965), 1970 ರಲ್ಲಿ **ಪಿ.ಲಂಕೇಶ್** ಪ್ರಕಟಿಸಿದ '**ಅಕ್ಷರ ಹೊಸ ಕಾವ್ಯ**' (1993 ರಲ್ಲಿ ಪರಿಷ್ಕೃತ ಮುದ್ರಣ) ಹಾಗೂ **ಮೈಸೂರು ವಿಶ್ವವಿದ್ಯಾನಿಲಯದ** '**ಸುವರ್ಣ ಸಂಪುಟ**'(1980)– ಈ ಮುಂತಾದ ಐತಿಹಾಸಿಕ ಆಂತಾಲಜಿಗಳ ಮಾಲೆಯೊಂದಿಗೆ ಕೊಂಡಿಯಂತಿದೆ.

ಕೃತಿಯ 'preface' ನಲ್ಲಿ ಸಂಕಲನಕಾರರು ಕನ್ನಡಭಾಷೆಯನ್ನು ಮಾತನಾಡುವ ಜನಗಳು ವಾಸಿಸುವ ಪ್ರದೇಶದ ವಿವರ ಹಾಗೂ ಆ ಕಾಲಘಟ್ಟದ ಕವಿಗಳ ಒಟ್ಟು ಕೃತಿಗಳ ಸ್ಥೂಲ ಪರಿಚಯವನ್ನು ಮಾಡಿಕೊಡುತ್ತಾರೆ. ಇದರಲ್ಲಿ ಸಂಕಲನಕಾರರ ವಿವರಗಳು, ಮುನ್ನುಡಿ, ಆಯ್ದ ಕಾವ್ಯ ಭಾಗಗಳು ಹಾಗೂ ಪುಷ್ಪಮಾಲಿಕಾ ನಿಘಂಟು ಮತ್ತು ಪುಷ್ಪಮಾಲಿಕೆಯ ಅನುಕ್ರಮಣಿಕೆ ಎಂಬ ಐದು ಭಾಗಗಳಿವೆ. Brahminical Literature ಭಾಗದಲ್ಲಿ ಜೈಮಿನಿ ಭಾರತ, ಕುಮಾರವ್ಯಾಸ ಭಾರತ, ತೊರವೆ ರಾಮಾಯಣ, ಚಾಟುವಿಟ್ಠಲನ ಭಾಗವತ, ಮಹಲಿಂಗರಂಗನ ಅನುಭವಾಮೃತ ಕಾವ್ಯದಿಂದಾರಿಸಿದ ಭಾಗಗಳು ಇವೆ. Literature of Lingaites ಭಾಗದಲ್ಲಿ ಭೀಮಕವಿಯ ಬಸವ ಪುರಾಣ, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಸರ್ವಜ್ಞನ ತ್ರಿಪದಿಗಳು, ಹಾಗೂ ಷಡಕ್ಷರಿಯ ರಾಜಶೇಖರ ವಿಳಾಸದಿಂದ ಸಂಗ್ರಹಿಸಿದ ಭಾಗಗಳಿವೆ. Literature of Jains ವಿಭಾಗದಲ್ಲಿ ಶಾಸ್ತ್ರಸಾರ ಹಾಗೂ ಧರ್ಮಪರೀಕ್ಷೆ ಕೃತಿಗಳಿಂದ ಆರಿಸಿದ ಪದ್ಯಗಳಿವೆ. ಕೊನೆಯಲ್ಲಿ Native Christian Literature ಎಂಬ ಶೀರ್ಷಿಕೆಯ ಅಡಿಯಲ್ಲಿ ಕ್ರಿಸ್ತ ಗೀತೆಗಳಿಂದ ದೇವಸ್ತೋತ್ರ, ಇಹಪರಬೇಧ ಹಾಗೂ ಸಾಯಂಕಾಲ ಗೀತಗಳನ್ನು ಆರಿಸಲಾಗಿದೆ. ಕೃತಿಯಲ್ಲಿ ಒಟ್ಟು 1701 ಪದ್ಯಗಳನ್ನು ಸಂಕಲಿಸಲಾಗಿದೆ. ಆಯ್ದ ಭಾಗದ ಪ್ರತಿಯೊಂದರ ಆರಂಭದಲ್ಲಿಯೂ

ಸಂಗ್ರಹವಾಗಿ ಕವಿಕಾವ್ಯಗಳ ಪರಿಚಯವಿದೆ. ಪ್ರತಿಪದ್ಯಗಳ ಬದಿಯಲ್ಲಿ ಆ ಪದ್ಯದ ಸಂಕ್ಷಿಪ್ತ ಸಾರಾಂಶವನ್ನು ಇಂಗ್ಲಿಷ್ ಭಾಷೆಯಲ್ಲಿ ನೀಡಲಾಗಿದೆ. ಅಡಿಟಿಪ್ಪಣಿಗಳಾಗಿ ಕ್ಲಿಷ್ಟ ಪದಗಳ ಅರ್ಥಗಳನ್ನೂ ಅಗತ್ಯವಿರುವೆಡೆ ವಿಶೇಷ ವಿವರಣೆಗಳನ್ನೂ ಕೊಡಲಾಗಿದೆ. ಕ್ರಿಸ್ಚಿಯನ್ ದೈವಸ್ತೋತ್ರ ವಿಭಾಗದಲ್ಲಿ ಆಯಾ ಪದ್ಯಗಳ ಛಂದಸ್ಸಿನ ವಿವರಣೆ ಮತ್ತು ವಿನ್ಯಾಸಗಳನ್ನು ನೀಡಿರುತ್ತಾರೆ. ಕೃತಿಯ ಕೊನೆಯಲ್ಲಿರುವ 'ಪುಷ್ಪಮಾಲಿಕಾ ಶಬ್ದಕೋಶ' ಸುಮಾರು ೪೦ ಪುಟಗಳಷ್ಟಿದ್ದು ಅತ್ಯಂತ ಉಪಯುಕ್ತವಾಗಿದೆ.

ಸಾಯಂಕಾಲದ ಗೀತೆಯೊಂದರ ಮಾದರಿ ಹಾಗೂ ಅದರ ಛಂದೋವಿನ್ಯಾಸವನ್ನು ಹೀಗೆ ನೀಡುತ್ತಾರೆ : ಇಲ್ಲಿ ದ್ವಿತೀಯಾಕ್ಷರ ಪ್ರಾಸವಿಲ್ಲದಿರುವುದು ಗಮನಾರ್ಹ.

**"ಅಗೋ ನೀ ಹೋದಿ ಅರ್ಕ U -| U -| U -|U**
**ಈ ರಾತ್ರಿ ಎಂಬ ಕರ್ಕ U-| U -| U -|U**
**ನಿನ್ ಜೋತಿ ಅಟ್ಟಿದಂ ; U -| U -| U -| U**
**ನೀ ಹೋಗು ! ರವಿಯಾಗಿ U -| U -| U -| U**
**ನನ್ನೀಶ ಸವಿಯಾಗಿ U -| U -| U -| U**
**ನನ್ ಹೃದಯದಲ್ಲಿ ಮೂಡಿದಂ U|U U| - U| - U -**

19 ನೆಯ ಶತಮಾನದ ಮಧ್ಯಭಾಗದಿಂದ ಸುಮಾರು ೩೦\೪೦ ವರ್ಷ ಪರ್ಯವಾಗಿದ್ದ ಈ ಸಂಕಲನ ಗ್ರಂಥವು ನಿಜಕ್ಕೂ ಆ ಕಾಲದ ಒಂದು ಸದಭಿರುಚಿಯ ಸಂಕಲನವಾಗಿದೆ.

## ಕಿಟ್ಟೆಲ್ ಅವರ "ಕರ್ನಾಟಕ ಕಾವ್ಯಮಾಲೆ" (1874)

ರೆವರೆಂಡ್ ಎಫ್. ಕಿಟ್ಟಲ್ ಅವರು ಸಂಪಾದಿಸಿರುವ ಈ ಪ್ರಸ್ತುತ "ಕರ್ನಾಟಕ ಕಾವ್ಯಮಾಲೆ" ಸಂಕಲನವು 1874ರಲ್ಲಿ ಎರಡನೆಯ ಆವೃತ್ತಿಯಾಗಿ ಪ್ರಕಟವಾಗಿದೆ. ಇದರ ಮೊದಲನೆಯ ಮುದ್ರಣವು 1868ರಲ್ಲಿಯೇ ಅಯಿತು. ಇಂಗ್ಲಿಷ್ ಭಾಷೆಯಲ್ಲಿ ಇದನ್ನು 'ಕೆನರೀಸ್ ಪೊಯೆಟಿಕಲ್ ಆಂತಾಲಜಿ' ಎಂದು ಕರೆದಿದ್ದಾರೆ. ಒಟ್ಟು 423 ಪುಟಗಳಿರುವ ಈ ಸಂಕಲನವು ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್‌ನಲ್ಲಿ ಮುದ್ರಣಗೊಂಡಿದೆ. ಡೆಮಿ ಅಷ್ಟಾಕಾರದ ಇದರ ಆಗಿನ ಬೆಲೆ ಒಂದು ರೂಪಾಯಿ. 7–4–1832ರಲ್ಲಿ ಜರ್ಮನಿಯ ವೆಸ್ಟರ್ ಹೋಲ್‌ನಲ್ಲಿ ಹುಟ್ಟಿದ ರೆವರೆಂಡ್ ಜಾರ್ಜ್ ಫರ್ಡಿನೆಂಡ್ ಕಿಟ್ಟೆಲ್ ಅವರು 20–10–1853ಕ್ಕೆ ಧಾರವಾಡ ಹುಬ್ಬಿ ಕಡೆ ಬಂದರು. ಮಂಗಳೂರು ಮಡಿಕೇರಿ ಆಸುಪಾಸಿನ ಜಾಗಗಳು ಇವರ ಕಾರ್ಯಕ್ಷೇತ್ರ. 1903ರವರೆಗೆ ಬದುಕಿದ್ದ ಇವರು ಅನಾರೋಗ್ಯದ ಕಾರಣದಿಂದ 3 ಬಾರಿ ತಾಯ್ನಾಡಾದ ಜರ್ಮನಿಗೆ ಹಿಂದಿರುಗಿದರೂ ಅಪೂರ್ಣವಾದ ಕನ್ನಡದ ಕೆಲಸವನ್ನು ಪೂರೈಸಲು ಮತ್ತೆ ಮತ್ತೆ ಕರ್ನಾಟಕಕ್ಕೆ ಹಿಂದಿರುಗಿದರು. ಕನ್ನಡ ಸಾಹಿತ್ಯ, ಛಂದಸ್ಸು, ವ್ಯಾಕರಣ, ಗ್ರಂಥ ಸಂಪಾದನಾ ಶಾಸ್ತ್ರಗಳಲ್ಲಿ ಅವರು ಮಾಡಿದ್ದ ಕೆಲಸ ಈ ಕೃತಿಯ ಸಂಪಾದನೆಯ ಸಂದರ್ಭದಲ್ಲಿ ಅವರಿಗೆ ನೆರವು ನೀಡಿದೆ. 1894ರಲ್ಲಿ ಪ್ರಕಟವಾದ ಅವರ ಕನ್ನಡ ಇಂಗ್ಲಿಷ್ ಡಿಕ್ಷ್ನರಿಗಾಗಿ 1896ರಲ್ಲಿ ಜರ್ಮನಿಯ ಟ್ಯೂಬಿಂಜೆನ್ ವಿಶ್ವವಿದ್ಯಾನಿಲಯ ರೆವರೆಂಡ್ ಎಫ್.ಕಿಟ್ಟೆಲ್ ಅವರಿಗೆ ಪಿಎಚ್.ಡಿ ಪದವಿಯನ್ನು ನೀಡಿತು. ಇವರೇ ಕನ್ನಡದ ಮೊದಲ ಪಿ.ಎಚ್‌ಡಿ ಪದವೀಧರರು. ಈ 'ಕರ್ನಾಟಕ ಕಾವ್ಯಮಾಲೆ'ಯನ್ನು ಸಂಪಾದಿಸುವುದಕ್ಕೆ ಮೊದಲು ಕಿಟ್ಟೆಲ್‌ರು 1864ರಲ್ಲಿ ಪಂಚ ತಂತ್ರವನ್ನೂ, 1866ರಲ್ಲಿ ಕನ್ನಡ ಪಾಠಗಳ ಮೊದಲ ಪುಸ್ತಕ, ಹಳಗನ್ನಡ ಸಂಕ್ಷೇಪ ವ್ಯಾಕರಣ ಸೂತ್ರಗಳು ಹಾಗೂ ಸಣ್ಣ ಕರ್ನಾಟಕ



ಕಾವ್ಯಮಾಲೆ ಕೃತಿಗಳನ್ನು ಪ್ರಕಟಿಸಿದ್ದರು. 1871ರಲ್ಲಿ ಶಬ್ದಮಣಿ ದರ್ಪಣಂ ವ್ಯಾಕರಣ ಗ್ರಂಥ ಹಾಗೂ ನಾಗವರ್ಮನ ಛಂದೋಂಬುಧಿ ಎಂಬ ಛಂದಸ್ಸಿನ ಗ್ರಂಥಗಳನ್ನು ಸಂಪಾದಿಸಿದ್ದರು. ಈ ಆಳವಾದ ಹಾಗೂ ಪಕ್ವವಾದ ಅನುಭವದ ಹಿನ್ನೆಲೆಯಲ್ಲಿ 'ಕರ್ನಾಟಕ ಕಾವ್ಯಮಾಲೆ' ಸಂಕಲಿತವಾಗಿದೆ.

ಈ ಕೃತಿ 1868ರಲ್ಲಿ ಜಿ. ವುರ್ತ್ ಹಾಗೂ ಜಾನ್ ಗ್ಯಾರೆಟ್ ಸಂಪಾದಿಸಿದ 'ಕರ್ಣಾಟ ಪ್ರಾಕ್ಕಾವ್ಯ ಮಾಲಿಕೆ' ಪ್ರಕಟವಾದ 1868ನೆಯ ವರ್ಷವೇ ಪ್ರಕಟವಾಗಿರುವುದನ್ನು ನೋಡಿದರೆ ಕನ್ನಡ ಕಾವ್ಯಗಳು ಆ ಕಾಲಕ್ಕೆ ಎಷ್ಟು ಜನಾದರಣೆಗೆ ಪಾತ್ರವಾಗಿತ್ತು ಎಂಬುದು ತಿಳಿಯು ತ್ತದೆ. ಈ ಸಂಕಲನವು ಕನ್ನಡ ಕಾವ್ಯ ಪರಂಪರೆಯ ಎರಡನೆಯ ಕಾಲಘಟ್ಟದಲ್ಲಿ ಪ್ರಚುರವಾಗಿದ್ದ ನಡುಗನ್ನಡ ಅಥವಾ ಮಧ್ಯಕಾಲೀನ ಕನ್ನಡ ಕಾವ್ಯಗಳಿಂದಾರಿಸಿದ ಕವಿತಾ ಸಂಕಲನವಾಗಿದೆ. ಈ ಸಂಕಲನದಲ್ಲಿ 103 ವಿವಿಧ ಶೀರ್ಷಿಕೆಗಳ ಪಾಠದಡಿ 12 ನಡುಗನ್ನಡ ಕವಿಗಳ ಕಾವ್ಯಗಳಿಂದಾರಿಸಿದ 619 ಕವಿತೆಗಳಿವೆ.


CONTENTS

ಮಹಲಿಂಗರಂಗನ ಅನುಭವಾಮೃತದಿಂದ 2 ಪದ್ಯಗಳು, ಭೀಮ ಕವಿಯ ಬಸವಪುರಾಣದಿಂದ 41 ಪದ್ಯಗಳು, ಸರ್ವಜ್ಞನ 35 ತ್ರಿಪದಿಗಳು, ಪುಲಿಗೆರೆ ಸೋಮೇಶ್ವರನ ಸೋಮೇಶ್ವರ ಶತಕದಿಂದ 23 ಪದ್ಯಗಳು, ದಾಸರ 39 ಕೀರ್ತನೆಗಳು, ತೊರವೆ ನರಹರಿಯ ತೊರವೆ ರಾಮಾಯಣದಿಂದ 28 ಪದ್ಯಗಳು, ಕುಮಾರವ್ಯಾಸನ ಕರ್ನಾಟಕ ಭಾರತ ಕಥಾ ಮಂಜರಿಯಿಂದ 149 ಪದ್ಯಗಳು, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಿಂದ 22 ಪದ್ಯಗಳು, ಲಕ್ಷ್ಮೀಶನ ಜೈಮಿನೀ ಭಾರತದಿಂದ 151 ಪದ್ಯಗಳು, ಷಡಕ್ಷರಿಯ ರಾಜಶೇಖರ ವಿಳಾಸದಿಂದ 192ಪದ್ಯಗಳು, ಈ ಮುಂತಾದ ಕಾವ್ಯಗಳಿಂದ ಮಾತ್ರವಲ್ಲದೆ ಕೇಶಿರಾಜನ ವ್ಯಾಕರಣ ಶಾಸ್ತ್ರ ಗ್ರಂಥ ಶಬ್ದಮಣಿದರ್ಪಣಂನಿಂದ 3 ಪದ್ಯಗಳು ಹಾಗೂ ನಾಗವರ್ಮನ ಛಂದೋಕೃತಿ ಛಂದೋಂಬುಧಿಯಿಂದ 15 ಪದ್ಯಗಳನ್ನು ಆಯ್ಕೆ ಮಾಡಿ ಸಂಕಲಿಸಲಾಗಿದೆ.

ಒಟ್ಟಿನಲ್ಲಿ ನಡುಗನ್ನಡ ಕಾವ್ಯಗಳನ್ನು ರಚಿಸಿರುವ 12 ಜನ ವಿವಿಧ ಜೈನ, ವೀರಶೈವ ಹಾಗೂ ವೈದಿಕ ಧರ್ಮದ ಕವಿಗಳ ಕಾವ್ಯಶಾಸ್ತ್ರಗಳಿಂದಾರಿಸಿದ ವಿವಿಧ ಛಂದೋರೂಪಗಳಾದ ಭಾಮಿನಿ ಷಟ್ಪದಿ, ವಾರ್ಧಕ ಷಟ್ಪದಿ, ತ್ರಿಪದಿ, ವಿವಿಧ ವೃತ್ತ,

ಕಂದ, ಕೀರ್ತನೆಗಳು ಮುಂತಾದ ಒಟ್ಟು 619 ಕವಿತೆಗಳು ಈ ಕೃತಿಯಲ್ಲಿ ಅಡಕವಾಗಿದ್ದು ಈ ಕೃತಿ ಆ ಕಾಲಕ್ಕೆ ಒಂದು ಮಹತ್ವದ ಒಳ್ಳೆಯ ಅಭಿರುಚಿಯ ಕಾವ್ಯ ಸಂಕಲನ ಗ್ರಂಥವಾಗಿ ಪ್ರಾಚುರ್ಯದಲ್ಲಿತ್ತು. ಅಷ್ಟೇ ಅಲ್ಲದೆ ಕಾವ್ಯ ವಸ್ತುವಿನಲ್ಲಿಯೂ ಕಿಟ್ಟೆಲ್ ವೈವಿಧ್ಯವನ್ನು ಮೆರೆದಿದ್ದಾರೆ. ಸೂರ್ಯೋದಯ, ರಾತ್ರಿ, ಸಾಗರ, ನದಿ ಹಾಗೂ ಕಾಡು, ಅರಮನೆ, ಸರೋವರ, ಯುದ್ಧ, ವಸಂತ ಮಾಸ, ದೇಶ, ಸಂಧ್ಯಾಕಾಲ, ಸೂರ್ಯಾಸ್ತ ಮತ್ತು ಚಂದ್ರೋದಯ, ಉದ್ಯಾನ, ಚಳಿಗಾಲ ಮುಂತಾದ ಅಷ್ಟಾದಶ ವರ್ಣನೆಗಳು ಇಲ್ಲಿವೆ. ಇವುಗಳ ಜೊತೆಗೆ, ಬದುಕಿನಲ್ಲಿ ಬರುವ ತೀವ್ರವಾದ ಬಿಕ್ಕಟ್ಟಿನ ಸಂದರ್ಭಗಳು, ಮಾನಸಿಕ ತಲ್ಲಣ ಉಮ್ಮಳಗಳನ್ನು ಚಿತ್ರಿಸುವ ಸಂದರ್ಭದ ಕಾವ್ಯ ಭಾಗಗಳನ್ನು ಕಿಟ್ಟೆಲ್ ಅವರು ಆಯ್ಕೆ ಮಾಡಿರುವುದು ಹೃದಯಂಗಮವಾಗಿದೆ. ಉತ್ಕೃಷ್ಟ ಕಾವ್ಯಗಳಿಂದ ಅವುಗಳ ರಸಸ್ಥಾನಗಳಿಂದಾರಿಸಿದ ಕೆಲವು ಮನಕಲಕುವ ಸನ್ನಿವೇಶ ಭಾಗಗಳು ಇಲ್ಲಿ ಸ್ಥಾನ ಪಡೆದುಕೊಂಡಿವೆ. ಒಂದೂ ಶಿವಶರಣರ ವಚನಗಳಾದರೂ ಇಲ್ಲಿ ಕಾಣಿಸಿಕೊಳ್ಳದಿರುವುದು ಈ ಗ್ರಂಥದ ಬಹು ಮುಖ್ಯ ಕೊರತೆಯಾಗಿ ಎದ್ದು ಕಾಣುತ್ತದೆ.

ಒಂದೆರಡು ಕಡೆ ಕೆಲವು ತಪ್ಪು ಮಾಹಿತಿಗಳಿವೆ. ಉದಾಹರಣೆಗೆ "ದುರ್ಜನರ ಸಂಗ ಬಿಡಬೇಕು" ಎಂಬ 35ನೆಯ ಪಾಠವನ್ನು ರಗಳೆ ಛಂದಸ್ಸು ಎಂದು ನಮೂದಿಸಲಾಗಿದೆ. ಆದರೆ ವಾಸ್ತವವಾಗಿ ಅದು ದಾಸರ ಕೀರ್ತನೆ. ಕೀರ್ತನೆಗಳಲ್ಲಿ ಬರುವ ಎರಡು ಸಾಲುಗಳ ಪಲ್ಲವಿಯೂ ನಾಲ್ಕು ಸಾಲುಗಳ 3 ಚರಣಗಳೂ ಅಲ್ಲಿ ಬರುತ್ತದೆ. ರಗಳೆಗಳ ಹಾಗೆ ಸಾಲಿಗೆ ನಾಲ್ಕು ಗಣಗಳ ಹಾಗೂ ಎರಡೆರಡು ಸಾಲಿನ ಘಟಕದ ಆದಿ ಹಾಗೂ ಅಂತ್ಯಪ್ರಾಸಗಳಿಲ್ಲ.

ಈ ಸಂಕಲನಕ್ಕೆ ಕಿಟ್ಟೆಲ್ ಅವರು 16 ಪುಟಗಳಷ್ಟು ದೀರ್ಘವಾದ ಪಾಂಡಿತ್ಯಪೂರ್ಣ ಪ್ರಸ್ತಾವನೆಯನ್ನು ಇಂಗ್ಲಿಷ್ ಭಾಷೆಯಲ್ಲಿ ಬರೆದಿದ್ದಾರೆ.ಅದರಲ್ಲಿ ನಡುಗನ್ನಡ ಕಾವ್ಯದ ವೈಶಿಷ್ಟ್ಯಗಳನ್ನು ಗುರುತಿಸಿದ್ದಾರೆ. ಪ್ರಸ್ತಾವನೆಯಲ್ಲಿ ಕೆಲವೆಡೆ ನೀಡಿರುವ ಹಲವಾರು ಅಡಿಟಿಪ್ಪಣಿಗಳು ಕೆಲ ಅನನ್ಯವೂ ಅಪೂರ್ವವೂ ಆದ ಸಂಶೋಧನೆಯ ಅಂಶಗಳನ್ನು ಒಳಗೊಂಡಿದೆ. ನಿದರ್ಶನಕ್ಕೆ 1) ಪುಲಿಗೆರೆಯ ಸೋಮೇಶ್ವರನ ಪುತ್ಥಳಿ ಪುಲಿಗೆರೆನಗರಿಯಲ್ಲಿ ಇತ್ತು. 2) ಕ್ರಿ.ಶ. 1860ರಲ್ಲಿ ಮೋಗ್ಲಿಂಗ್ ಜರ್ಮನ್ ಭಾಷೆಯಲ್ಲಿ "ಲೀಡರ್ ಕ್ಯನರೀಸಿಶ್ಚರ್ ಸಿಂಗರ್" ಎಂಬ ಹೆಸರಿನಲ್ಲಿ ದಾಸರ ಪದಗಳನ್ನು ಅಚ್ಚು ಹಾಕಿಸಿದ್ದನು ಎಂಬ ಈ ಎರಡು ಅಡಿಟಿಪ್ಪಣಿಗಳ ನಿದರ್ಶನಗಳನ್ನು ಗಮನಿಸಬಹುದು.

"ಕರ್ನಾಟಕ ಕಾವ್ಯಮಾಲೆ" ಗ್ರಂಥದ ಸ್ವರೂಪವು ಇಂತಿದೆ :

1) ಇಂಗ್ಲಿಷ್ ಹಾಗೂ ಕನ್ನಡ ಭಾಷೆಗಳಲ್ಲಿ ಸಂಕಲಿತ ಪಾಠದ ಶೀರ್ಷಿಕೆ

2) ಸ್ವೀಕೃತ ಕಾವ್ಯದ ವಸ್ತುಸೂಚಿ 3) ಛಂದಸ್ಸಿನ ಉಲ್ಲೇಖ 4) ಸ್ವೀಕೃತ ಪಠ್ಯ 5) ಪಾಠಾಂತರಗಳಿದ್ದ ಪಕ್ಷದಲ್ಲಿ ಪದ್ಯದ ಪಕ್ಕ ನಮೂದು 6) ಪದ ಚ್ಛೇದಂ 7) ಅನ್ವಯ 8) ಟೀಕು

ಒಂದೊಂದು ಪದ್ಯಕ್ಕೂ ಶೀರ್ಷಿಕೆ ಬಿಟ್ಟು ಉಳಿದ ಮೇಲಿನ ಏಳೂ ವಲಯಗಳನ್ನು ನೀಡುವುದರ ಮೂಲಕ ಬಿಡಿ ಪದ್ಯಗಳ ರಸಗ್ರಹಣಕ್ಕೆ ಈ ವಿಧಾನವು ಅನುವು ನೀಡಿದೆ ಹಾಗೂ ಕವಿತೆಯ ಸ್ವರೂಪ ಮತ್ತು ಆಂತರ್ಯಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಲು ಸಹಾಯ ಕವಾಗಿದೆ. ಕ್ಲಿಷ್ಟತೆಯಿಂದ ಕೂಡಿದ ಸಮಾಸಯುಕ್ತ ಪದಗಳನ್ನು ಬಿಡಿಸಿ ಕೊಟ್ಟಿರುವುದರಿಂದ ಸಹೃದಯರು ಕಾವ್ಯದ ರಸವನ್ನು ಆಸ್ವಾದಿಸಲು ಉಪಯುಕ್ತವಾಗಿದೆ.

ಕೆಲವೆಡೆ ಶೀರ್ಷಿಕೆಗಳನ್ನು ಕೂಡಾ ವಿವರಿಸಲಾಗಿದೆ. ಉದಾಹರಣೆಗೆ --- "ಈ ಕಾವ್ಯಮಾಲೆಯಲ್ಲಿರುವ ಚಂದಸ್ಸಿನ ವಿವರವು" –ದಿ ಮೀಟರ್ಸ್ ಅಕರಿಂಗ್ ಇನ್ ದಿಸ್ ಆಂತಾಲಜಿ– ಎಂಬ ನಾಲ್ಕನೆಯ ಪಾಠದಲ್ಲಿ 'ಸಂಸ್ಕೃಟ್ ವೃತ್ತ ಮೀಟರ್ಸ್' ಗಳನ್ನು ಈ ರೀತಿ ವಿವರಿಸಲಾಗಿದೆ : ಸಂಸ್ಕೃತ ಛಂದಸ್ಸು ಅಂದರೆ ನಾಲ್ಕು ಪದಕ್ಕೂ ಒಂದೇ ಪ್ರಕಾರ ತಪ್ಪದೆ ಬರುವ ಅಕ್ಷರಗಣ ಸ್ವರೂಪನೇಮಕವುಳ್ಳ ಛಂದಸ್ಸು. ಮೂರು ಮೂರು ಅಕ್ಷರಗಳು ಒಂದು ಗಣವೆನ್ನಿಸಿಕೊಳ್ಳುತ್ತದೆ. ---

ಕ್ರಿ.ಶ. 1853ರಿಂದ ಭಾರತಕ್ಕೆ ಬಂದಾರಭ್ಯ ಕ್ರಿ.ಶ 1903ರಲ್ಲಿ ಅವರು ತೀರಿಕೊಳ್ಳುವವರೆಗೂ ಕನ್ನಡ ಭಾಷೆ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ವಿವಿಧ ನೆಲೆಗಳಲ್ಲಿ ಕಿಟ್ಟೆಲ್ ಅವರು ಪ್ರಶಂಸನೀಯ ಸೇವೆಯನ್ನು ಸಲ್ಲಿಸಿರುತ್ತಾರೆ. ಈ ಕರ್ನಾಟಕ ಕಾವ್ಯಮಾಲೆಯಂತೂ ಅವರಿಗೆ ಮುಂದೆ ತಾನು ರಚಿಸಿದ ಕನ್ನಡ ಇಂಗ್ಲಿಷ್ ನಿಘಂಟಿಗೆ ವ್ಯಾಯಾಮಶಾಲೆಯ ಮಾದರಿಯಂತಿತ್ತು. 20ನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ವಾಚಕವೃಂದಕ್ಕೆ ಒಂದು ಪುಷ್ಟ, ಸಮರ್ಥ ಹಾಗೂ ಆ ಕಾಲದವರೆಗೆ ಲಭ್ಯವಾದ ನಡುಗನ್ನಡದ ಮಹತ್ವದ ಎಲ್ಲ ಕಾವ್ಯಗಳಿಂದ ಆಯ್ಕೆ ಮಾಡಿದ, ಎಷ್ಟೇ ವ್ಯಕ್ತಿನಿಷ್ಠವಾಗಿದ್ದರೂ ಒಂದು ಉತ್ತಮ ಅಭಿರುಚಿಯ ಆಂತಾಲಜಿಯನ್ನು ಕಿಟ್ಟೆಲ್ ನೀಡಿರುತ್ತಾರೆ. ಕನ್ನಡದ ಆಂತಾಲಜಿಗಳ ಸರಮಾಲೆಯಲ್ಲಿ 'ಕರ್ನಾಟಕ ಕಾವ್ಯಮಾಲೆ' ಒಂದು ಒಳ್ಳೆಯ ಆಣಿಮುತ್ತು ಎಂದು ಹೇಳಬಹುದು. ಆರೇ ವರ್ಷಗಳಲ್ಲಿ ಮರು ಮುದ್ರಣವಾದದ್ದು ಈ ಕೃತಿ ಎಷ್ಟು ಜನಾದರಣೀಯವಾಗಿತ್ತು ಎಂಬುದಕ್ಕೆ ದ್ಯೋತಕ.

## ಕಿರಿಯ ಕಾಣಿಕೆ, ಹಿರಿಯ ಕಾಣ್ಕೆ (1928)

ಇದು 1928ರಲ್ಲಿ ಪ್ರಕಟವಾದ ಕವಿತೆಗಳ ಸಂಗ್ರಹ 'ಕಿರಿಯ ಕಾಣಿಕೆ.' ಶ್ರೀಮನ್ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದ ವಿದ್ಯಾರ್ಥಿಗಳು ಕೆಲವರು ರಚಿಸಿರತಕ್ಕ ಪುಸ್ತಕ. ಇದರಲ್ಲಿ ತೀ.ನಂ.ಶ್ರೀಕಂಠಯ್ಯನವರ 8 ಕವಿತೆಗಳು, ಕೆ.ವಿ.ಪುಟ್ಟಪ್ಪನವರ 7 ಕವಿತೆಗಳು, ಎ.ಕೆ.ಪುಟ್ಟರಾಮು ಅವರ 3 ಕವಿತೆಗಳು, ಎಲ್.ಗುಂಡಪ್ಪ ಅವರ 8 ಕವಿತೆಗಳು, ಪಿ.ಟಿ.ನರಸಿಂಹಾಚಾರ್ ಅವರ 2 ಕವಿತೆಗಳು ಮತ್ತು ಡಿ.ಎಲ್.ನರಸಿಂಹಾಚಾರ್ ಅವರ 2 ಕವಿತೆಗಳು–ಹೀಗೆ ಒಟ್ಟು 30 ಕವಿತೆಗಳಿವೆ.

ಈ ಸಂಕಲನವನ್ನು ಮಹಾರಾಜರವರ ಕಾಲೇಜು, ಮೈಸೂರು, ಇಲ್ಲಿನ ಕರ್ನಾಟಕ ಸಂಘವು ಟಿ.ಎಸ್.ವೆಂಕಣ್ಣಯ್ಯನವರ ಉಪಾಧ್ಯಕ್ಷತೆಯಲ್ಲಿ ಪ್ರಕಟಿಸಿದೆ. ಇದನ್ನು ಮೇಲ್ಕಂಡ ವಿದ್ಯಾರ್ಥಿಗಳು–

**ಗುರುವೆ ನೀವು ಕಲಿಸಿದೆರಡು**
**ಚರಣಗಳನೆ ಮರಳಿ ಹಾಡಿ,**
**ಕಿರಿಯ ಕಾಣಿಕೆಯನು ತಂದೆ**
**ವಿದನು, ಸಲಿಸಲು–**
**ಹಿರಿಯರಾಡುವುದನೆ ಹಸುಳೆ**
**ತೊದಲಿ ನಲಿಯವೆ?**

ಎಂದು ಹೇಳಿ ಅರ್ಪಣಾ ಭಾವ ದಿಂದ ಸಂಘದ ಅಧ್ಯಕ್ಷರಾದ ಬಿ.ಎಂ. ಶ್ರೀಕಂಠಯ್ಯ ನವರಿಗೆ ಅರ್ಪಿಸಿರುತ್ತಾರೆ.

ಈ ಕೃತಿಯು ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತಗಳು' ಕೃತಿಯ ವಿಸ್ತೃತ ಮುದ್ರಣ ಪ್ರಕಟವಾದ 1926ರ ನಂತರದ ಎರಡು ವರ್ಷಗಳಲ್ಲಿಯೇ ಬಂದಿರುವುದು ಗಮನಾರ್ಹ. ಬಿ.ಎಂ.ಶ್ರೀಯವರ ದಟ್ಟವಾದ ಪ್ರಭಾವ ಯುವ ಹಾಗೂ ವಿದ್ಯಾರ್ಥಿ ಕವಿಗಳ ಮೇಲೆ ಯಾವ ಪ್ರಮಾಣದಲ್ಲಿತ್ತು ಎಂಬುದಕ್ಕೆ 'ಕಿರಿಯ ಕಾಣಿಕೆ' ಒಂದು ಉದಾಹರಣೆ. ಈ ಸಂಕಲನವನ್ನು

ಗುರುವೆ, ನೀವು ಕಲಿಸಿದೆರಡು
ಚರಣಗಳನೆ ಮರಳಿ ಹಾಡಿ,
ಕಿರಿಯ ಕಾಣಿಕೆಯನು ತಂದೆ
ಪದನು, ಸಲಿಸಲು.—
ಹಿರಿಯರಾಡುವುದನೆ ಹಸುಳೆ
ತೊದಲಿ ನಲಿಯನೆ !

ಕುರಿತು ಎಸ್.ಅನಂತನಾರಾಯಣ ಅವರು ತಮ್ಮ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ' ಕೃತಿಯಲ್ಲಿ "ಶ್ರೀಯವರ ಶಿಷ್ಯರು ನಡೆಸಿದ ಪ್ರಯೋಗಗಳನ್ನು'ಕಿರಿಯ ಕಾಣಿಕೆ' ಮತ್ತು 'ತಳಿರು'ಎಂಬ ಎರಡು ಕವನ ಸಂಕಲನಗಳಲ್ಲಿ ಕೂಡಿಸಿದರು. 'ಕಿರಿಯ ಕಾಣಿಕೆ' (1928) ಯಲ್ಲಿ ಹಲವು ಅನುವಾದಗಳೂ ಕೆಲವು ಸ್ವತಂತ್ರ ಕವನಗಳೂ ಇವೆ. 'ಶ್ರೀ'ಯವರು ಹೊಸ ಬಗೆಯ ಕಾವ್ಯದ ಸಂಗ್ರಹವನ್ನು ಪ್ರಕಟಿಸಿ ಇನ್ನೂ ಎರಡು ವರ್ಷಗಳಾಗಿದ್ದುವು. ಆದರೂ ಕನ್ನಡ ಕವಿಗಳು ಆಗಲೇ ಹೊಸ ರೀತಿಯ ಸಾಹಿತ್ಯದ ಸ್ಫೂರ್ತಿಯನ್ನು ಅರಗಿಸಿಕೊಂಡಿದ್ದರು. 'ಕಿರಿಯ ಕಾಣಿಕೆ' ಯ ಕವಿತೆಗಳಲ್ಲಿ ಉತ್ತಮ ಸಿದ್ಧಿಯು ಕಾಣುತ್ತದೆ. ಎಲ್.ಗುಂಡಪ್ಪನವರ 'ಚಟಾಕಿ 'ಯಂತಹ ಉತ್ತಮವಾದ ಅಣಕವಾಡು, ಪುಟ್ಟಪ್ಪನವರ ರೂಪಾಂತರ ಕವಿತೆ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಪು.ತಿ.ನ. ಅವರ ಮನಮುಟ್ಟುವ ಕವಿತೆ 'ನನ್ನ ನಾಯಿ' ಮನದ ಒಳತೋಟಿಯನ್ನು ಸ್ಫುಟವಾಗಿ ತೋರುವ ತೀ.ನಂ.ಶ್ರೀ. ಅವರ 'ಎರಡು ದಾರಿ' ಯಂತಹ ಮಾರ್ಮಿಕ ಚಿತ್ರ ಇವೆಲ್ಲವೂ ಮುಂದೆ ಈ ಕವಿಗಳು ಪಡೆದ ಸಿದ್ಧಿಗುಣವನ್ನು ಸೂಚಿಸುವ ಗುರುತುಗಳಂತಿವೆ" ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮುನ್ನುಡಿಯಲ್ಲಿ ಟಿ.ಎಸ್.ವೆಂಕಣ್ಣಯ್ಯನವರು "ಸಾಂಪ್ರದಾಯಿಕ ಕಾವ್ಯಗಳಲ್ಲಿ ಮಮತೆಯುಳ್ಳವರನೇಕರು ಈ ಹೊಸ ಕವನಗಳಲ್ಲಿನ ಸೌಂದರ್ಯವನ್ನೂ ಸ್ವಾರಸ್ಯವನ್ನೂ ಗ್ರಹಿಸಲಾರದವರಾಗಿ ಇವುಗಳು ಕಾವ್ಯಗಳೇ ಅಲ್ಲವೆನ್ನುವಷ್ಟು ದೂರ ಹೋಗುತ್ತಾರೆ. ಈ ವಿಧವಾದ ಅಭಿಪ್ರಾಯಕ್ಕೆ ಅನಭ್ಯಾಸವೇ ಮುಖ್ಯ ಕಾರಣ. ಅಭ್ಯಾಸ ಮಾಡಿದರೆ, ಪ್ರಯತ್ನ ಪಟ್ಟರೆ ಅವರೂ ಈ ಕವನಗಳ ಸ್ವಾರಸ್ಯವನ್ನು ಗ್ರಹಿಸಬಹುದು. ಹಾಗೆ ಮಾಡುವುದರಿಂದ ಪ್ರಯೋಜನವುಂಟು. ' ಹೊಸ ದಾರಿಯಲ್ಲಿ ಹೋಗಕೂಡದು. ಪ್ರಾಚೀನ ಸಂಪ್ರದಾಯವನ್ನೇ ಅನುಸರಿಸಬೇಕು ಎಂದು ಈ ಕಾಲದ ಕವಿಗಳನ್ನು ನಿರ್ಬಂಧಪಡಿಸುವುದು ನ್ಯಾಯವಲ್ಲವೆಂದು ತೋರುತ್ತದೆ." ಎಂದು ಹೇಳಿರುವ ಮಾತುಗಳು ಅರ್ಥಪೂರ್ಣವಾಗಿವೆ. ಈ ಸಂಕಲನ ಮತ್ತು ಮುನ್ನುಡಿ ಹೊಸಗನ್ನಡ ಕಾವ್ಯಚರಿತ್ರೆಯಲ್ಲಿ ಚಾರಿತ್ರಿಕ ಮತ್ತು ಗುಣಾತ್ಮಕ ಮಹತ್ವವನ್ನು ಹೊಂದಿವೆ.

ಇಲ್ಲಿನ ವಿದ್ಯಾರ್ಥಿ ಕವಿ ಕೆ.ವಿ.ಪುಟ್ಟಪ್ಪ ಮುಂದೆ 'ಕುವೆಂಪು' ಆಗಿ ಮಹಾಕವಿಯಾದದ್ದು ಈಗ ಇತಿಹಾಸ. ಹಾಗೆಯೇ ಇಲ್ಲಿನ ವಿದ್ಯಾರ್ಥಿ ಕವಿ ಪಿ.ಟಿ.ನರಸಿಂಹಾಚಾರ್ ಅವರು 'ಪು.ತಿ.ನ.' ಕಾವ್ಯನಾಮದಿಂದ ಹೊಸಗನ್ನಡ . ಕಾವ್ಯದ ರತ್ನತ್ರಯರಲ್ಲೊಬ್ಬರಾಗಿರುವುದೂ ಇತಿಹಾಸವೇ.

ಈ ಸಂಕಲನದ ಇನ್ನೊಂದು ವಿಶೇಷವೆಂದರೆ ಡಿ.ಎಲ್ ನರಸಿಂಹಾಚಾರ್ ಅವರ ಎರಡು ಕವಿತೆಗಳಿರುವುದು. ಮುಂದೆ ಅವರು ಕವಿತೆಗಳನ್ನು ರಚಿಸಲೇ ಇಲ್ಲ. ವಿದ್ವತ್ಪೂರ್ಣ ಸಂಶೋಧಕರಾದರು. ಅವರ 'ಬಿಡುಗಡೆ' ಎಂಬ ಸಾನೆಟ್ ಅತ್ಯಂತ ಕುತೂಹಲಕಾರಿ ಪ್ರಯೋಗ. ಇದರಲ್ಲಿ ಒಂದು ದ್ವಿಪದಿ ಹಾಗೂ ಮೂರು ಚೌಪದಿಗಳಿದ್ದು ಪೆಟ್ರಾರ್ಕ್ ಅಥವಾ ಷೇಕ್ಸ್‌ಪಿಯರನ್ ಮಾದರಿಗೆ ಸೇರದೆ ಹೊಸ ಸ್ವತಂತ್ರ ಪ್ರಯೋಗವಾಗಿದೆ. ದ್ವಿತೀಯಾಕ್ಷರ ಪ್ರಾಸವನ್ನುಳಿಸಿಕೊಂಡಿರುವ ಈ ಸಾನೆಟ್ ನಿಜಕ್ಕೂ ಒಂದು ಯಶಸ್ವೀ ಪ್ರಯೋಗ. ಮುಂದೆ ಸಾನೆಟ್ ಪ್ರಕಾರ ಕನ್ನಡದಲ್ಲಿ ಅಪೂರ್ವ ಸಾಧನೆ ಮಾಡಿದ್ದೂ ಇತಿಹಾಸವೇ.

ಕನ್ನಡದ ಅತ್ಯಂತ ಮಹತ್ವದ ಕವಿಗಳಾದ ಕುವೆಂಪು ಹಾಗೂ ಪು.ತಿ.ನ ಅವರೊಂದಿಗೆ ತೀ.ನಂ.ಶ್ರೀಕಂಠಯ್ಯ ಹಾಗೂ ಡಿ.ಎಲ್. ನರಸಿಂಹಾಚಾರ್- ಈ ಕನ್ನಡದ ಚತುರ್ಮುಖರ ಆರಂಭದ ಕವಿತೆಗಳಿರುವ 'ಕಿರಿಯ ಕಾಣಿಕೆ' ನಿಜಕ್ಕೂ 'ಹಿರಿಯ ಕಾಣ್ಕೆ'ಯೇ ಸರಿ.

# ಹಾರಿ ಹೋದ ಹಕ್ಕಿಯು ಚಿಲಿಪಿಲಿಗುಟ್ಟಿದ "ಹಕ್ಕಿ ಹಾರುತಿದೆ" (1930)

'ಹಕ್ಕಿ ಹಾರುತಿದೆ' (ಹಾಗು ಕೆಲವು ಕವಿತೆಗಳು) 1930ರಲ್ಲಿ ಮೊದಲನೆಯ ಮುದ್ರಣ ಕಂಡ 'ಗೆಳೆಯರ ಗುಂಪು' ಪ್ರಕಟಿಸಿದ ಕವಿತಾ ಸಂಕಲನ. ಕನ್ನಡದ ನವೋದಯ ಕಾವ್ಯದ ಸಂದರ್ಭದಲ್ಲಿ 'ಗೆಳೆಯರ ಗುಂಪು' ಮಾಡಿರುವ ಸಾಧನೆ ಅಪಾರ, ಅಪೂರ್ವ. ಗೆಳೆಯರ ಗುಂಪಿನ ನೇತಾರರು ನಿಜವಾಗಿಯೂ ಬೇಂದ್ರೆಯವರು. ಅವರ ಜೊತೆಗೆ ಮುಗಳಿ, ಗೋಕಾಕ್, ಬೆಟಗೇರಿ ಕೃಷ್ಣಶರ್ಮ, ಸಿಂಪಿ ಲಿಂಗಣ್ಣ, ಜಡಭರತ, ಶ್ರೀಧರ ಶಿವರಾಮ ಖಾನೋಳ್ಕರ, ಸಾಲಿ ರಾಮಚಂದ್ರ ರಾಯರು, ಧೂಲಾ ಸಾಹೇಬ, ನಾರಾಯಣ ಸಂಗಮ, ಬುರ್ಲಿ ಬಿಂದುಮಾಧವ ಮತ್ತು ಮಧುರ ಚೆನ್ನ ಮುಂತಾದ ಪ್ರಸಿದ್ಧ ಲೇಖಕರಿದ್ದರು. 'ಗೆಳೆಯರ ಗುಂಪ'ನ್ನು ಕುರಿತು " 'ವ್ಯವಸ್ಥಿತವಾದ ಅಭ್ಯಾಸ ನಡೆದುದು ಗುಂಪಿನ ನಡುವೆ' ಎಂದು ಬೆಟಗೇರಿ ಕೃಷ್ಣಶರ್ಮರು ಹೇಳಿದರೆ, ಗೋಕಾಕರು 'ಗುಂಪಿನ ಮೂಲಕ ಕರ್ನಾಟಕದ ಪರಿಚಯವು ನನಗಾಯಿತು' ಎನ್ನುತ್ತಾರೆ. ರಂ.ಶ್ರೀ.ಮುಗಳಿಯವರು ಸ್ಫೂರ್ತಿ ಉತ್ಸಾಹಗಳನ್ನು ತುಂಬಿ ಹೊಸದರ್ಶನವನ್ನು ಇನ್ನೊಬ್ಬರಲ್ಲಿ ಸಂಚಾರಗೊಳಿಸುವುದಲ್ಲದೆ ಅವರ ದೌರ್ಬಲ್ಯವನ್ನರಿತು ಯೋಗ್ಯ ವಿಮರ್ಶೆಯಿಂದ ಅದನ್ನು ಕಳೆಯುವ ಅದ್ಭುತಶಕ್ತಿ ಬೇಂದ್ರೆಯವರಲ್ಲಿದೆ' ಎಂದು ಗುಂಪಿನ ನೇತಾರ ಬೇಂದ್ರೆಯವರನ್ನು ಕುರಿತು ಅಭಿಪ್ರಾಯ ಪಟ್ಟಿರುತ್ತಾರೆ" (ಶ್ರೀ ಎಸ್. ಅನಂತನಾರಾಯಣ). "ಗೆಳೆಯರ ಗುಂಪು ಒಂದು ಸ್ವಾಭಾವಿಕ ಬೆಳೆವಣಿಗೆ ಯಲ್ಲಿತ್ತು. ಅದು ಹೊರಗಣ್ಣಿಗೆ ಗುಂಪಾಗಿಯೂ ಒಳಗಣ್ಣಿಗೆ ಮೂರ್ತಿ [illegible] ಯಾಗಿಯೂ ರೂಪುಗೊಳ್ಳುತ್ತಿತ್ತು." ಎಂದು ಸ್ವತಃ ಬೇಂದ್ರೆಯವರೇ ಗೆಳೆಯರ ಗುಂಪಿನ ಬಗ್ಗೆ ಬರೆಯುತ್ತಾರೆ. ಆಲೂರ ವೆಂಕಟ ರಾಯರ ಸಂಪಾದಕತ್ವದ "ಜಯ ಕರ್ನಾಟಕ" ಪತ್ರಿಕೆಯಲ್ಲಿ ಗೆಳೆಯರ ಗುಂಪಿನವರು ತಮ್ಮ ಕವಿತೆ, ವಿಮರ್ಶೆಗಳನ್ನು ಪ್ರಕಟಿಸಿದರು.



**ಮುಂದೆ ಗೆಳೆಯರ ಗುಂಪಿನವರೆ "ಮನೋಹರ ಗ್ರಂಥ ಮಾಲೆ" "ಜಯಂತಿ"** ಪತ್ರಿಕೆಗಳ ಸ್ಥಾಪನೆಗೆ ಕಾರಣರಾದರು.

**"ಜಯಕರ್ನಾಟಕ ಮಂಡಲ", ಸಾಧನಕೇರಿ, ಧಾರವಾಡ** ಇದು ಹೊಸಗನ್ನಡ ಕಾವ್ಯದ ಉಗಮ ಮತ್ತು ವಿಕಾಸದ ದೃಷ್ಟಿಯಿಂದ ಬಹು ಪವಿತ್ರವಾದ ಸ್ಥಳ. ಏಕೆಂದರೆ ಇದು ಇಲ್ಲಿನ ಕೇಂದ್ರ ಬಿಂದುವಾದ ೨೦ನೆಯ ಶತಮಾನದ **'ಶತಮಾನದ ಕವಿ' ಬೆಂದ್ರೆಯವರು** ಇದ್ದ ಜಾಗ. ಇಂತಹ **ಶ್ರೀ ಬೇಂದ್ರೆ ದತ್ತರಾಯರು ಗೆಳೆಯರ ಗುಂಪಿನ** ಪರವಾಗಿ ಈ ಕವಿತಾ ಸಂಕಲನವನ್ನು ಸಂಪಾದಿಸಿದ್ದಾರೆ. ಈ ಸಂಕಲನವನ್ನು ಮೇಲ್ಕಂಡ **ಜಯಕರ್ನಾಟಕ ಗ್ರಂಥಮಾಲೆಗಾಗಿ ಶ್ರೀ ಕುಲಕರ್ಣಿ ಶೇಷಗಿರಿ ರಾಯರು** ಪ್ರಕಾಶಪಡಿಸಿದ್ದಾರೆ. ಅಷ್ಟ ಕಿರೀಟಾಕಾರದ 80+18 ಪುಟಗಳ ಈ ಕೃತಿಯನ್ನು **ಖಂ.ರಾ. ಭಿಸೆ, ಕ.ಪ್ರಿಂ.ವರ್ಕ್ಸ, ಧಾರವಾಡ**-ಇವರು ಮುದ್ರಿಸಿರುತ್ತಾರೆ. **ಶ್ರೀ ಜಯಕರ್ನಾಟಕ ಗ್ರಂಥಮಾಲೆಯ** ಪ್ರಥಮ ಪುಷ್ಪವಾಗಿ ಈ ಕೃತಿಯು ಪ್ರಕಟವಾಗಿದೆ.

'ಈ ಗ್ರಂಥದ ಒಡೆತನವು
**ಮಂಡಲದ ಕಡೆಗೆ ;**
ಕವಿತೆಗಳ ಒಡೆತನವು
**ಬರೆದವರ ಕಡೆಗೆ.'**

ಎಂದು ಈ ಗ್ರಂಥದ ಹಾಗೂ ಕವಿತೆಗಳ ಒಡೆತನದ ಬಗ್ಗೆ ಸೂಚನೆಯನ್ನು ಕವಿತೆಯ ಮೂಲಕವೇ ನೀಡಲಾಗಿದೆ. ಈ ಸಂಕಲನವು ಹೊಸಗನ್ನಡ ಕಾವ್ಯದ ಇತಿಹಾಸದ ದೃಷ್ಟಿಯಿಂದ ಮತ್ತು ನವೋದಯ ಕಾವ್ಯದ ಸಾಧನೆ ಹಾಗೂ ಗುಣಮಟ್ಟಗಳ ದೃಷ್ಟಿಯಿಂದ ಅತ್ಯಂತ ಮಹತ್ವದ ಸಂಕಲನವಾಗಿದೆ ಎಂಬುದನ್ನು ಗಮನಿಸಬೇಕು.



ಈ ಸಂಕಲನದಲ್ಲಿ ಒಟ್ಟು 23 ಜನ ಕವಿಗಳ 36 ಕವಿತೆಗಳಿವೆ. **ಅಂಬಿಕಾತನಯ ದತ್ತರ** ಐದು ಕವಿತೆಗಳೂ, **ಆನಂದಕಂದರ (ಬೆಟಗೇರಿ ಕೃಷ್ಣಶರ್ಮ)** ಎರಡು ಕವಿತೆಗಳೂ, **ವಿನಾಯಕ ಗೋಕಾಕರ** ಎರಡು ಕವಿತೆಗಳೂ, **ಮಧುರ ಚೆನ್ನರ** ಎರಡು ಕವಿತೆಗಳೂ, **ಬುರ್ಲಿ ಬಿಂದು**

**ಮಾಧವರ** ಎರಡು ಕವಿತೆಗಳೂ, **ನಾರಾಯಣ ಸಂಗಮರ** ಎರಡು ಕವಿತೆಗಳೂ, **ಸಾಲಿ ರಾಮಚಂದ್ರ ರಾಯರ** ಎರಡು ಕವಿತೆಗಳೂ, **ಶ್ರೀಧರ ಖಾನೋಳ್ಕರರ** ಎರಡು ಕವಿತೆಗಳೂ ಮತ್ತು **ಪ್ರಹ್ಲಾದ ನರೇಗಲ್ಲರ** ಎರಡು ಕವಿತೆಗಳೂ ಇವುಗಳಲ್ಲಿ ಪ್ರಮುಖವಾದವು. ಇನ್ನುಳಿದ ಕವಿಗಳೆಂದರೆ **ಗಂಗಾಪ್ರಸಾದ, ಗೋಪಾಲಕೃಷ್ಣ, ಚಿದಂಬರ, ಜಯಾಶ್ರಯೀ, ನಾರಾಯಣ ಶಾಸ್ತ್ರೀ, ರಂಗನಾಥ, ವಿನೀತ ರಾಮಚಂದ್ರ, ರಾಮದಾಸ, ರೇವಣ, ಸಿಂಪಿ ಲಿಂಗಣ್ಣ, ವನಮಾಲಿ, ಶೇಷ** ಮತ್ತು **ಶಿವರಾಮ**. ಇಲ್ಲಿನ **ಶಿವರಾಮ** ಅವರು **ಶ್ರೀಧರ ಶಿವರಾಮ ಖಾನೋಳ್ಕರ** ಅವರೇ ಇರಬೇಕು. ಇವರೆಲ್ಲರೂ **ಗೆಳೆಯರ ಗುಂಪಿನ** ಸದಸ್ಯರು. **ಹಕ್ಕಿ ಹಾರುತಿದೆ, ಕನಸಿನೊಳಗೆ 'ಕಣಸು', ತುತ್ತಿನ ಚೀಲ** ಮತ್ತು **ಮೂವತ್ತು ಮೂರು ಕೋಟಿ–ಬೇಂದ್ರೆಯವರ** ಈ ಅತ್ಯಂತ ಮಹತ್ವದ ಕವಿತೆಗಳು ಈ ಸಂಕಲನದಲ್ಲಿ ಅಡಕವಾಗಿದೆ.

"From the words of the poet men take what meanings please them ; but their last meaning points to thee-ಕವಿವಚನವನ್ನು ಬೇಕಾದವರು ಬೇಕಾದ ಹಾಗೆ ತಿಳಿದು ಕೊಳ್ಳಬಹುದಾದರೂ ಅದರ ಗುರಿ ನಿನ್ನನ್ನೇ ಕುರಿತಿದೆ– **ರವೀಂದ್ರ ನಾಥ"** ಮೇಲ್ಕಂಡ **ರವೀಂದ್ರರ** ಈ ಸೂಕ್ತಿಯನ್ನು ಕವಿತೆಗಳು ಆರಂಭವಾಗುವ 'ಕಾವ್ಯಮಾಲೆ' ಭಾಗಕ್ಕೆ ಮೊದಲು ನೀಡಲಾಗಿದೆ. ಸಂಕಲನವು "ಸತ್ಯ–ಸೌಂದರ್ಯಗಳೇ ಸಾಹಿತ್ಯದ ಜೀವ–ಕಳೆ" ಎಂಬ ಸೂಕ್ತಿಯೊಂದಿಗೆ ಅಂತ್ಯಗೊಂಡಿದೆ. ಕೊನೆಯೊಳಗೆ **ಜಯಕರ್ನಾಟಕ ಮಂಡಲದ** 'ಕಾಯಕವೇ ಈ ಮಂಡಲದ ಹೆಗ್ಗುರಿಯು' ಎಂಬುದರ ಜಾಹಿರಾತನ್ನು ನೀಡಲಾಗಿದೆ. **"ಜಯಕರ್ನಾಟಕ ಮಂಡಲಕ್ಕೆ** ಬೇಕಾದುದು ಏರಾಟವಲ್ಲ, ಒಡನಾಟ, ಪ್ರತಿಸ್ಪರ್ಧೆಯಲ್ಲ, ಸಹಕಾರ." ಎಂಬುದೇ ಈ ಜಾಹಿರಾತಿನ ಜೀವಾಳ.

ಈ ಸಂಕಲನದ ವಿಶೇಷ ಎಂದರೆ ಇದರಲ್ಲಿ **ಬೇಂದ್ರೆಯವರ** ಛಾಪು ಎದ್ದು ಕಾಣುವುದು. **ಬೇಂದ್ರೆಯವರ 'ನಾದಲೀಲೆ'** ಮುನ್ನುಡಿಯಲ್ಲಿ **ಮಾಸ್ತಿ ವೆಂಕಟೇಶ ಅಯ್ಯಂಗಾರ್** ಅವರು 1929ರ ಬೆಳಗಾವಿ ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ **ಬೇಂದ್ರೆಯವರ 'ಹಕ್ಕಿ ಹಾರುತಿದೆ'** ಕವಿತಾವಾಚನ ಜನರ ಮೇಲೆ ಮಾಡಿದ ಪ್ರಭಾವವನ್ನು ಕುರಿತು "ಇವರನ್ನು ಬೆಳಗಾವಿ ಸಾಹಿತ್ಯ ಸಮ್ಮೇಳನದಲ್ಲಿ ಮತ್ತೆ ಕಂಡೆನು. ಈ ಸಮ್ಮೇಳನದಲ್ಲಿ **ಬೇಂದ್ರೆಯವರು 'ಹಕ್ಕಿ ಹಾರುತಿದೆ ನೋಡಿದಿರಾ'** ಎಂಬ ತಮ್ಮ ಕವನವನ್ನು ಓದಿದರು. ಅದನ್ನು ಕೇಳಿದ ಜನ ಎಂಥ ಆನಂದವನ್ನು ಅನುಭವಿಸಿದರೆಂದು ಈಗ ಹೇಳಲು ಸಾಧ್ಯವಿಲ್ಲ. ಆ ಕವಿತೆಯ ಎಲ್ಲ ಅರ್ಥವನ್ನು ಅರಿಯುವುದಕ್ಕೆ ಆ ಒಂದು ಓದು ಸಾಕಲ್ಲವೇ ಅಲ್ಲ. ಆದರೆ ಆ ಒಂದು ಓದಿನಿಂದ

ಕಂಡಷ್ಟು ಕಾವ್ಯಗುಣದಿಂದಲೇ ಸಾವಿರ ಜನರ ಸಭೆ ಚಕಿತವಾಯಿತು. . ." ಎಂದು ಮುಕ್ತಕಂಠದಿಂದ ಹೊಗಳಿದ್ದಾರೆ. ಅಷ್ಟು ಪ್ರಸಿದ್ಧವಾದ ಕವಿತೆ ಇಲ್ಲಿನ **ಬೇಂದ್ರೆಯವರ "ಹಕ್ಕಿ ಹಾರುತಿದೆ"** ಎಂಬ ಕವಿತೆ.

ನಾಡಿನ ಇತರ ಪ್ರಸಿದ್ಧ ಬರಹಗಾರರಾದ **ಮಧುರ ಚೆನ್ನ** (ಹಲಸಂಗಿ **ಚೆನ್ನಮಲ್ಲಪ್ಪ**), **ಆನಂದಕಂದ** (ಬೆಟಗೇರಿ ಕೃಷ್ಣಶರ್ಮ), **ವಿನಾಯಕ ಗೋಕಾಕ, ರಂ.ಶ್ರೀ.ಮುಗಳಿ, ನಾರಾಯಣ ಸಂಗಮ,** ಮಿಂಚಿನ ಬಳ್ಳಿ ಪ್ರಕಾಶನದ ಪ್ರಸಿದ್ಧಿಯ **ಬುರ್ಲಿ ಬಿಂದು ಮಾಧವ** ಮುಂತಾದ ಗಣ್ಯರ ಆರಂಭ ಕಾಲದ ಕವಿತೆಗಳು ಇಲ್ಲಿರುವುದು ಈ ಸಂಕಲನದ ವಿಶೇಷ. 1920ರಿಂದ 1929ರವರೆಗೆ ರಚಿತವಾದ ಕವಿತೆಗಳು ಇಲ್ಲಿವೆ. **'ಇಂಗ್ಲಿಷ್ ಗೀತಗಳು'** (1922) ಗಿಂತಲೂ ಮೊದಲು ಬರುತ್ತಿದ್ದ **'ಪ್ರಭಾತ'** (1918) ಪತ್ರಿಕೆ ಸಂಚಿಕೆಗಳಲ್ಲಿ ಅಷ್ಟು ಹೊತ್ತಿಗಾಗಲೇ **ಬೇಂದ್ರೆಯವರ** ಕೆಲವು ಕವಿತೆಗಳು ಪ್ರಕಟವಾಗಿತ್ತು. 1922ರಲ್ಲಿ ಅವರ **'ಕೃಷ್ಣಕುಮಾರಿ'** ಸಂಕಲನವೂ ಪ್ರಕಟವಾಗಿತ್ತು. ಆದರೂ 1930ರಲ್ಲಿ ಪ್ರಕಟವಾದ **ಬೇಂದ್ರೆಯವರ** ಈ ಸಂಪಾದಿತ ಸಂಕಲನ ಮುಂದಿನ ಹೊಸ ನವೋದಯ ಕವಿಗಳ ಮೇಲೆ ಬೀರಿದ ಪ್ರಭಾವ ಅನುಪಮವಾದದ್ದು.

**ಬೇಂದ್ರೆಯವರನ್ನೂ** ಒಳಗೊಂಡಂತೆ ಇಲ್ಲಿನ ಉಳಿದ ಕವಿಗಳ ಕವಿತೆಗಳಲ್ಲಿ **ಭೋಗ ಷಟ್ಪದಿ, ವಾರ್ಧಕ ಷಟ್ಪದಿ, ದ್ವಿಪದಿ, ಸಾನೆಟ್, ಕಥನ ಕವನ,** ಇನ್ನೂ ಮುಂತಾದ ನಾನಾ ರೀತಿಯ ಮಾತ್ರಾಗಣಗಳ ಮಿಶ್ರಣ ಪ್ರಯೋಗಗಳನ್ನು ಕಾಣಬಹುದು. ವಸ್ತುವಿನ ದೃಷ್ಟಿಯಿಂದಲೂ ಇಲ್ಲಿ ವೈವಿಧ್ಯವಿದೆ. ಜಗತ್ತಿನ ಯಾವುದೇ ಒಂದು ಭಾಷೆಯ ಒಂದು ಕಾಲಘಟ್ಟದ ಕಾವ್ಯಮಾದರಿಯೊಂದು ಚಾಲನೆಗೆ ಬರುತ್ತಿರುವ ಕಾಲದಲ್ಲಿನ ಕವಿತೆಗಳ ಸೃಷ್ಟಿಯ ಸಂದರ್ಭದ ಸೂಕ್ಷ್ಮಗಳು ಎಷ್ಟು ಅಗಾಧವಾಗಿದ್ದಿರಬಹುದು ಎಂಬುದಕ್ಕೆ ಈ **'ಹಕ್ಕಿ ಹಾರುತಿದೆ'** ಸಂಕಲನ ನಿದರ್ಶನವಾಗಿದೆ.

ಸುಮಾರು 2000 ವರ್ಷಗಳಷ್ಟು ಸಮೃದ್ಧ ಪರಂಪರೆಯಿರುವ ಕನ್ನಡ ಸಾಹಿತ್ಯ ಲೋಕದಲ್ಲಿ **ಬೇಂದ್ರೆಯವರು** ಸಂಪಾದಿಸಿರುವ ಈ **"ಹಕ್ಕಿ ಹಾರುತಿದೆ "** ಸಂಪಾದಿತ ಕೃತಿಗೆ ಅತ್ಯಂತ ಮಹತ್ವದ ಸ್ಥಾನವಿದೆ.

# ಪೇಜಾವರ ಸದಾಶಿವ ರಾವ್ ಅವರು ಸಂಪಾದಿಸಿದ 'ಅಲರು' (1931)

ಕನ್ನಡದಲ್ಲಿ ನವ್ಯತೆಯ ಪರಂಪರೆಯ ಕಹಳೆಯನ್ನು **ಗೋಪಾಲಕೃಷ್ಣ ಅಡಿಗ** ಮತ್ತು **ವಿನಾಯಕ ಕೃಷ್ಣ ಗೋಕಾಕರಿ**ಗಿಂತ ಮೊದಲೇ **'ನಾಟ್ಯೋತ್ಸವ'** ಎಂಬ ಕವಿತೆಯ ಮೂಲಕ ಮೊಳಗಿಸಿದವರು **ಪೇಜಾವರ ಸದಾಶಿವರಾವ್** ಅವರು. ಇವರ ತಂದೆ **ಶಾಮರಾವ್** ಮತ್ತು ತಾಯಿ ಸೀತಮ್ಮ. ತಮ್ಮಂದಿರು **ಪೇಜಾವರ ವಾಸುದೇವರಾವ್** ಮತ್ತು **ಪೇಜಾವರ ವೆಂಕಟರಾವ್**. 8-3-1913ರಂದು ಜನಿಸಿದ ಸದಾಶಿವರಾವ್ ಅವರು ಮಂಗಳೂರಿನ ಸಾಹಿತ್ಯ ಚಟುವಟಿಕೆಗಳ ಆಡುಂಬೊಲವಾಗಿದ್ದ **ಮಿತ್ರಮಂಡಲಿಯ** ಆಧಾರಸ್ತಂಭವಾಗಿದ್ದವರು. ಮುಂದೆ ಅವರು ಕಾಶಿ ಹಿಂದೂ ವಿಶ್ವವಿದ್ಯಾಲಯದಲ್ಲಿ ಇಂಜಿನಿಯರಿಂಗ್ ಪದವಿ ಪಡೆದು ಸ್ಥಾಪತ್ಯಶಾಸ್ತ್ರದ ವಿಶೇಷ ವ್ಯಾಸಂಗಕ್ಕಾಗಿ ಇಟಲಿಯಲ್ಲಿರುವ ಮಿಲಾನ್ ನಗರಕ್ಕೆ ಹೋದರು. ವ್ಯಾಸಂಗ ಮುಗಿಸಿ ಭಾರತಕ್ಕೆ ಹಿಂದಿರುಗಬೇಕೆನ್ನುವಷ್ಟರಲ್ಲಿ ದುರದೃಷ್ಟವಶಾತ್ ಭಯಂಕರ ರೋಗವೊಂದು ತಗುಲಿ ಇಟಲಿಯಲ್ಲಿಯೇ 18-10-1939ರಂದು ತಮ್ಮ 26ನೆಯ ವಯಸ್ಸಿನಲ್ಲಿ ತೀರಿಕೊಂಡರು. **ರಂ.ಶ್ರೀ.ಮುಗಳಿ**ಯವರು ಹೇಳುವಂತೆ **"**ಪರಿಪಕ್ವಗೊಳ್ಳುತ್ತಿರುವ ಮೇಧಾಶಕ್ತಿ–ಕವಿತಾಶಕ್ತಿಗಳುಳ್ಳ ತರುಣ ಕನ್ನಡಿಗನನ್ನು ಸಾವಿನ ಹದ್ದು ಕಚ್ಚಿಕೊಂಡುಹೋಯಿತು. ಸಮರ್ಥಶಿಲ್ಪಿ, ಪ್ರತಿಭಾವಂತ ಕವಿಯೊಬ್ಬನನ್ನು ಕರ್ನಾಟಕವು ಕಳೆದು ಕೊಂಡಿತು**" ('ವರುಣ'–1952, ಮುನ್ನುಡಿ, ರಂ.ಶ್ರೀ.ಮುಗಳಿ). ಸದಾಶಿವರಾವ್** ಅವರ ಹಾಗೆ ಕಿರಿಯ ವಯಸ್ಸಿನಲ್ಲಿಯೇ (**22** ವರ್ಷ) ತೀರಿಕೊಂಡ ಕನ್ನಡದ ಮತ್ತೊಬ್ಬ ಮಹತ್ವದ ಕವಿ **ಯರ್ಮುಂಜ ರಾಮಚಂದ್ರ ಅವರು.**




**ಸದಾಶಿವರಾವ್** ಅವರ **ಸರಪಣಿ, ಜೀವನ ಸಂಗೀತ** ಮತ್ತು **ಬೀದಿಗಿಳಿದ ನಾರಿ** ಎಂಬ ನಾಟಕಗಳು **ತ್ರಿವೇಣಿ** ಎಂಬ ಮಾಸಪತ್ರಿಕೆಯಲ್ಲಿ ಪ್ರಕಟಗೊಂಡಿವೆ. **ಅಂಧಶಿಲ್ಪ** ಮತ್ತು **ಶ್ರೀಗಂಧ** ಇವು ಅವರು ಬರೆದ ಸಣ್ಣ ಕತೆಗಳು. ಅವರು ಗತಿಸಿದ ನಂತರ 1952ರಲ್ಲಿ ಅವರ ಪೂರ್ಣ ಪ್ರಮಾಣದ **'ವರುಣ'** ಕವಿತಾ ಸಂಕಲನವನ್ನು **ರಂ.ಶ್ರೀ.ಮುಗಳಿ** ಯವರು ಪ್ರಕಟಿಸಿ ಕನ್ನಡಿಗರಿಗೆ ಉಪಕಾರವನ್ನು ಮಾಡಿದ್ದಾರೆ.

ಈ ಸಂಬಂಧ **ಮುಗಳಿಯವರಿಗೆ** ನೆರವು

ನೀಡಿದವರು **ಸದಾಶಿವರಾವ್** ಅವರ ತಮ್ಮಂದಿರಾದ **ವಾಸುದೇವರಾವ್** ಮತ್ತು **ವೆಂಕಟರಾವ್** ಅವರು.


ದಿವಂಗತ ಪೇಜಾವರ ಸದಾಶಿವರಾಯರು

**'ಅಲರು'** 1931ರಲ್ಲಿ **ಪೇಜಾವರ ಸದಾಶಿವ ರಾವ್** ಅವರು ಸಂಪಾದಿಸಿ ಪ್ರಕಟಿಸಿದ ಕವಿತಾಸಂಕಲನ. ಅಲರು-ಅಚ್ಚಗನ್ನಡ ಶಬ್ದ. **ಅಲರು** ಎಂಬುದಕ್ಕೆ ಅರಳು ಮತ್ತು ಹೂವು ಎಂಬ ನಾಮ ಕ್ರಿಯಾರ್ಥಗಳೆರಡೂ ಇವೆ. ಇದು ದೇಸಿಯ ಸೊಗಸು ಮತ್ತು ಈ ಶಿರ್ಷಿಕೆ ಅತ್ಯಂತ ಸೂಕ್ತವಾಗಿದೆ. ಆಗಿನ ಇದರ ಬೆಲೆ ಕೇವಲ ನಾಲ್ಕಾಣೆ. ಮಂಗಳೂರಿನ **ಮಿತ್ರಮಂಡಲಿಯ 'ಅಳಿಲಸೇವಾಗ್ರಂಥಮಾಲೆ'**ಯಡಿ ನಾಲ್ಕನೆಯ ಪುಷ್ಪವಾಗಿ ಈ ಕೃತಿ ಪ್ರಕಟಗೊಂಡಿದೆ. 'ಇಣಚಿ' ಎಂಬ ಅರ್ಥದ ಅಳಿಲು ಶಬ್ದ ಕೂಡ ದೇಸಿಯ ಸೊಗಸಿನ ಪದ. **ಅಲರು, ಅಳಿಲು** ಈ ಪದಪ್ರಯೋಗಗಳು ಪೇಜಾವರರಿಗಿದ್ದ ದೇಸಿಯ ಒಲವಿನ ದ್ಯೋತಕ. ಮಂಗಳೂರಿನ ರಥಬೀದಿಯ **ಮಂಗಳೂರು ಛಾಪಾಖಾನೆ**ಯಲ್ಲಿ ಈ ಕೃತಿ ಮುದ್ರಣಗೊಂಡಿದೆ. **'ಅಲರು'** ಸಂಕಲನದ ಪ್ರಸ್ತುತ ಪ್ರತಿ **"ಶ್ರೀಮಾನ್ ವಿ.ಸೀತಾರಾಮಯ್ಯನವರಿಗೆ -ಪ್ರೇಮಪೂರ್ವಕವಾದ ಒಡಲ ಕಾಣಿಕೆ-ಪೇಜಾವರ ಸದಾಶಿವ ರಾಯ"** ಎಂಬ **ಪೇಜಾವರ ಸದಾಶಿವ ರಾವ್** ಅವರ ಕೈಬರಹದ ಒಕ್ಕಣೆಯನ್ನೊಳಗೊಂಡಿದೆ. ಅಷ್ಟ ಕಿರೀಟಾಕಾರದ ಈ ಪುಟ್ಟ ಕೃತಿಯಲ್ಲಿ 42 ಪುಟಗಳಿದ್ದು ಒಟ್ಟು 16 ಕವಿಗಳ 26 ಕವಿತೆಗಳಿವೆ. ಪೇಜಾವರರ 3 ಕವಿತೆಗಳು ಇಲ್ಲಿವೆ. ಆರಂಭದೊಳಗೆ **'ಅಲರು'** ಶಬ್ದಾರ್ಥಕ್ಕೆ ಹೊಂದುವ **ಬೇಂದ್ರೆ**ಯವರ ಒಂದು ಕವಿತೆಯ ಈ ಎಸಳನ್ನು ಸೂಕ್ತವಾಗಿ ನೀಡಲಾಗಿದೆ :

ಕಂಪಿನಲರ ತಂದೆನಿಂದು
ನಿನ್ನ ಅಡಿಯೊಳಿಡಲು ಎಂದು
ಮೂಸಿನೋಡಬೇಕು ಎಂಬ ಭಾವ ಹುಟ್ಟಿತು.
ಭಾವ ಹುಟ್ಟಿ ಮೂಸಿಬಿಟ್ಟೆ
ಹಿಗ್ಗಿ ನಿನ್ನ ಅಡಿಯೊಳಿಟ್ಟೆ
ಗಮಗಮಗಮ ಒಳಗು ಹೊರಗು ಕಂಪು ಇಡುಗಿತು!

**-ಅಂಬಿಕಾತನಯದತ್ತ**

ನವೋದಯಾರಂಭದ ಈ ಕವಿತೆಗಳನ್ನು ಕುರಿತು ಮುನ್ನುಡಿಯಲ್ಲಿ

**ಸದಾಶಿವರಾವ್** ಅವರು ಹೀಗೆ ಬರೆಯುತ್ತಾರೆ : "ಜೀವನಕ್ಕೂ ಕಾವ್ಯಕ್ಕೂ ಅನ್ಯಾದೃಶ್ಯವಾದ ಸಂಬಂಧವಿದೆ. ಜೀವನದ ಭವ್ಯತೆ ದಿವ್ಯತೆಗಳನ್ನು ಜನತೆಗೆ ತೋರಿಸಿಕೊಡಲು ಕಾವ್ಯವೇ ಕೈಗನ್ನಡಿ. ಹಿಂದಿನ ಜೀವನಕ್ಕೂ ಇಂದಿನ ಜೀವನಕ್ಕೂ ಇರುವ ಭೇದವನ್ನು ನೋಡಿ ಇಂದಿನ ಕವಿಗಳು ಇಂದಿನ ಜೀವನಧರ್ಮಕ್ಕೊಪ್ಪುವ ನೂತನಪಥದಲ್ಲಿ ಮುಂದುವರೆಯಲು ಯತ್ನಿಸುತಿ ದ್ದಾರೆ. ಛಂದಸ್ಸನ್ನು ಹೊಸರೂಪಕ್ಕೆ ಮಾರ್ಪಡಿಸಿಕೊಂಡು ನವಜೀವನದ ಸುಖದುಃಖಗಳನ್ನು ಯಥಾರ್ಥವಾಗಿ ಬಣ್ಣಿಸಲು ಹವಣಿಸುತಲಿದ್ದಾರೆ. ಹೊಸ ವಿಚಾರಗಳನ್ನು ಹೊಸ ಸಾಹಿತ್ಯದ ಮೂಲಕ ಜನತೆಗೆ ತಿಳಿಸಿ ವಿಚಾರ ಪಲ್ಲಟವನ್ನುಂಟುಮಾಡಲು ಸನ್ನದ್ಧರಾಗಿದ್ದಾರೆ. ಎಷ್ಟರಮಟ್ಟಿಗೆ ಈ ಧ್ಯೇಯದ ಸಾಫಲ್ಯವಾಯಿತೆಂಬುದು ಸಾಹಿತ್ಯಾಭಿಮಾನಿಗಳಿಗೇ ತಿಳಿದ ವಿಷಯ." ಇಂಗ್ಲಿಷ್ ಗೀತಗಳು ಪ್ರಕಟವಾದ ಆಸುಪಾಸಿನಲ್ಲಿಯೇ ಬಂದ ಈ ಸಂಕಲನದ ಮುನ್ನುಡಿಯ ಈ ಮಾತುಗಳು ತುಂಬಾ ಅರ್ಥಪೂರ್ಣವಾಗಿವೆ. ಇಲ್ಲಿ **ಪೇಜಾವರ ಸದಾಶಿವರಾವ್** ಅವರ ಜೊತೆಗೆ ಈ ಕವಿಗಳ ಕವನಗಳಿವೆ:

**ಎಸ್.ವೆಂಕಟರಾಜ, ಕ.ರಾಘವಾಚಾರ್, ಪದ್ಮನಾಭ, ಬಾಲಮಿತ್ರ, ಶ್ರೀನಿವಾಸರಾವ್ ಕದಿರೆ, ಬಿ.ಆರ್.ಕಾಮತ್, ಸ್ವರ್ಗೀಯ ಕೆ.ಟಿ.ಆಚಾರ್ಯ, ವಾಮನ, ಬಿ.ಶ್ರೀಧರ ಕಕ್ಕಿಲಾಯ, ಶ್ರೀರಾಜ, ಕೆಮ್ಮಿಂಜೆ ಸುಬ್ರಾಯುಪಾಧ್ಯಾಯ, ಉದ್ಯಾವರ ಬಾಲಕೃಷ್ಣರಾವ್, ಹಿರಣ್ಮಯ** ಇವರೇ ಆ ಕವಿಗಳು. ಹಿಂದಿನ ಶತಮಾನದ 30ರ ದಶಕದ ದಕ್ಷಿಣಕನ್ನಡ ಜಿಲ್ಲೆಯ ಕನ್ನಡ ಸಾಹಿತ್ಯದ ಚಟುವಟಿಕೆ ಈ ಕೃತಿಯಿಂದ ತಿಳಿಯುತ್ತದೆ. ಇಲ್ಲಿರುವ **ಪದ್ಮನಾಭ** ಎಂಬ ಕಾವ್ಯನಾಮದ **ತೊಟ್ಟೆತ್ತೋಡಿ ನಾರಾಯಣ ಭಟ್ಟರು** ಮಂಗಳೂರಿನ ಕೆನರ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿದ್ದು **ಶಿವರಾಮ ಕಾರಂತರಿಗೆ ಸಿರಿಗನ್ನಡ ಅರ್ಥಕೋಶದ**ಲ್ಲಿ ನೆರವು ನೀಡಿದವರು. **ಕೆ.ಟಿ.ಆಚಾರ್ಯರ** ಟಿಟ್ಟಿಭ ಸಾನೆಟ್, **ಎಸ್.ವೆಂಕಟರಾಜರ** ನೇಹ ದ್ವಿಪದಿ ಮತ್ತು **ಉದ್ಯಾವರ ಬಾಲಕೃಷ್ಣ ರಾವ್** ಅವರ ನೆನಹು ಶರ ಷಟ್ಪದಿ. ಆಗ ನಡೆಯುತ್ತಿದ್ದ ಪ್ರಯೋಗಗಳಿಗೆ ಇದು ಸೂಚನೆ. **ಪದ್ಮನಾಭರ**

ಮೆಲ್ಲಿತೆಲರದೆಲ್ಲ ಹೊಲವ ನಿಲ್ಲದಲುಗಿಸಲ್॥
ಲಲಿತ ಲಾಸ್ಯ ಕಲಲು ನಟಿಪ ತೆರದೆ ದ್ಯೋತಿಸಲ್; ॥

ಎಂಬ ಲಯಗಳು 1930ರಲ್ಲೇ ಕಾಣಿಸಿಕೊಂಡಿದೆ. ಅದಮ್ಯ ಉತ್ಸಾಹದ ಅಪಾರ ಕವಿತಾ ಸಾಮರ್ಥ್ಯದ ಮಹಾಕವಿಯಾಗುವ ಸಾಧ್ಯತೆ ಪಡೆದಿದ್ದ **ಪೇಜಾವರ ಸದಾಶಿವರಾವ್** ಅವರ ಪ್ರತಿಭೆಗೆ ಈ ಸಂಪಾದಿತ ಕೃತಿ **ಅಲರು** ಸಾಕ್ಷಿಯಾಗಿದ್ದು 'ಅಲರು' ಸಂಕಲನ ಹೊಸಗನ್ನಡ ಕಾವ್ಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ.



## ವೆಂಕಟೇಶ ನರಸಿಂಗರಾವ ಮಗದಾಳರ 'ಹಿಂದೂಸ್ತಾನದ ಭೂಗೋಲ' (1915)

**'ಹಿಂದೂಸ್ತಾನದ ಭೂಗೋಲ'** ಎಂಬ ಈ ಕೃತಿಯನ್ನು **ಧಾರವಾಡದ** ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜದ ಶಿಕ್ಷಕರಾದ **ವೆಂಕಟೇಶ ನರಸಿಂಗರಾವ ಮಗದಾಳ,** (ಕೆಲ ಕಾಲ ಪುಣೆ **ಫರ್ಗ್ಯುಸನ್ ಕಾಲೇಜದ** ದಕ್ಷಿಣ ಫೆಲೋ) ಇವರು ರಚಿಸಿದರು. ಐದು ಸಾವಿರ ಪ್ರತಿಗಳು ಅಚ್ಚಾಗಿರುವ ಈ ಎರಡನೆಯ ಆವೃತ್ತಿಯನ್ನು 1915ರಲ್ಲಿ ಮಿ. **ಕೃಷ್ಣಾಜಿ ಹಣಮಂತ ಮುದವೇಢಕರ** ಇವರು **ಧಾರವಾಡದ ಕರ್ನಾಟಕ ಪ್ರಿಂಟಿಂಗ ವರ್ಕ್ಸ ಮುದ್ರಣಾಲಯದಲ್ಲಿ** ಮುದ್ರಿಸಿ ಪ್ರಸಿದ್ಧಿ ಮಾಡಿದರು. 8 ಆಣೆ ಬೆಲೆಯ ಅಷ್ಟಮ ಡೆಮಿ ಆಕಾರದ 14+140 ಪುಟಗಳ ಈ ಭೂಗೋಲದ ಕೃತಿಯನ್ನು ಮುಂಬಯಿ ಇಲಾಖೆಯೊಳಗಿನ ಸರಕಾರದ ವಿದ್ಯಾ ಇಲಾಖೆಯ ಪರವಾಗಿ **ಧಾರವಾಡದ ಕೆ.ವ್ಹಿ. ಭಂಡಿವಾಡ** ಎನ್ನುವವರು ಪ್ರಕಾಶಪಡಿಸಿದ್ದಾರೆ. ಇದರ ಮೊದಲ ಮುದ್ರಣದ ಬಗ್ಗೆ ಮಾಹಿತಿಗಳಿಲ್ಲವಾದರೂ 1911ನೆ ಇಸವಿಯ ಖಾನೇಸುಮಾರಿಯುನ್ನು (ಜನಗಣತಿ=census) ಈ ಕೃತಿಯೊಳಗೆ ಉಲ್ಲೇಖಿಸಿರುವುದರಿಂದ ಇದರ ಮೊದಲ ಮುದ್ರಣವು ಸುಮಾರು 1911ರ ನಂತರ ಹಾಗೂ 1915ಕ್ಕೆ ಮೊದಲು ಆಗಿದೆ ಎಂದು ಅಂದಾಜಿಸಬಹುದು. ಇವರು **'ಏಷಿಯಾದ ಭೂಗೋಲ'** ಎಂಬ ಕೃತಿಯನ್ನೂ, **ಪುರೋಹಿತ, ಬಿ.ಎಸ್**-ಎಂಬ ಲೇಖಕರೊಂದಿಗೆ **'ಅಂಕಗಣಿತ'** ಎನ್ನುವ ಕೃತಿಯನ್ನೂ ರಚಿಸಿರುತ್ತಾರೆ. ವಿದ್ಯಾ ಇಲಾಖೆಯು ಪ್ರಚುರಪಡಿಸಿರುವದರಿಂದ ಮತ್ತು ಪುಸ್ತಕದ ಕೊನೆಯಲ್ಲಿ 'ಮಾದರಿಯ ಪ್ರಶ್ನೆಗಳು' ಎಂಬ ಘಟಕವು ಇರುವುದರಿಂದ ಪ್ರಾಯಶಃ ಈ ಕೃತಿಯು ಆ ಕಾಲಘಟ್ಟದಲ್ಲಿ ಪಠ್ಯವಾಗಿರುವ ಸಾಧ್ಯತೆಗಳು ಹೆಚ್ಚು ಎಂದ ಊಹಿಸಬಹುದು. ಈ ಕೃತಿಯ ಆರಂಭದಲ್ಲಿ DEDICATED to Prof. **J. N. Fraser,** M.A. (Oxen) , Principal, Secondary Teachers' Training College, Bombay.(With Kind Permission) by HIS ADMIRING & OBEDIENT PUPIL- THE AUTHOR. ಎನ್ನುವ ಒಕ್ಕಣೆ ಇದೆ.



ಪುಸ್ತಕದ ಪ್ರಸ್ತಾವನೆಯಲ್ಲಿ ಮಿತ್ರರೂ ಹಿತವಾದಿಗಳೂ ಆಗಿದ್ದ **ಚಿಷಾಲ್ಮ, ಯಂಗ, ಪಿಟರಸನ್ನ, ಮಾರಿಸನ್ನ,** ಮಿ.ವ. ಮ. ತಟ್ಟಿ ಮತ್ತು ಮಿ. ಮುದವೇಡಕರ

ಇವರೆಲ್ಲರಿಗೆ ಕೃತಜ್ಞತೆಗಳನ್ನರ್ಪಿಸಿರುತ್ತಾರೆ. ಅಲ್ಲದೆ ಈ ಭೂಗೋಳವನ್ನು ಅಧ್ಯಯನ ಮಾಡುವಾಗ ನಕಾಶೆಗಳನ್ನು ಬಳಸದೆ ಓದಬಾರದೆಂದೂ, ಅಧ್ಯಯನ ಎಂದರೆ ಕಂಠಪಾಠವಲ್ಲವೆಂದೂ ಎಚ್ಚರಿಸಿದ್ದಾರೆ. **"ಹುಡುಗರಿಗೆ ತಲೆ ಚಿಟ್ಟೆನಿಸುವ ಹಾಗೆ ಅಪ್ರಯೋಜಕವಾಗಿ ಬರೆಯಬಾರದು "** ಎಂಬ ಎಚ್ಚರ ಲೇಖಕರಿಗಿದೆ. ಭೂಗೋಲ ಅಧ್ಯಯನದ ಶಿಸ್ತನ್ನು ಕುರಿತು ಪ್ರಸ್ತಾವನೆಯಲ್ಲಿ ಲೇಖಕರು " ಭೂಗೋಲವು ಮನುಷ್ಯನಿಗೂ ಅವನ ವಾಸಸ್ಥಾನಕ್ಕೂ ಇರುವ ಪರಸ್ಪರ ಸಂಬಂಧವನ್ನು ಅಭ್ಯಾಸಿಸು ವದು. ಆದ್ದರಿಂದ ಈ ಪುಸ್ತಕದಲ್ಲಿ ನಾವು ಹಿಂದೂಸ್ತಾನದ ಪರ್ವತ, ತಪ್ಪಲು, ಹೊಳೆ ಮೊದಲಾದವುಗಳ ಹೆಸರು ಗಳನ್ನು ಮಾತ್ರ ಅಭ್ಯಾಸಿಸು ವದಲ್ಲದೆ, ಈ ದೇಶದ ಜನರ ಸ್ಥಿತಿಗಳಿಗೂ ಇವುಗಳಿಗೂ ಯಾವ ಸಂಬಂಧವಿರುವದು? ಎಂಬು ದನ್ನು ಕಂಡು ಹಿಡಿಯಲಿಕ್ಕೆ ಪ್ರಯತ್ನಿಸ ಬೇಕು. ........ ಭೂಗೋಲದಲ್ಲಿ ಕಾರ್ಯಕಾರಣ ಸಂಬಂಧವು ಮಹತ್ವವಾ ದದ್ದು." ಎಂದು ಹೇಳುವಲ್ಲಿ ಭೂಗೋಲದ ಸ್ವರೂಪದ ಮಹತ್ವವು ತಿಳಿಯುತ್ತದೆ. ಶಿಕ್ಷಣದ ಸುಧಾರಣೆಯಿಂದಾಗಿ **ಭೂಗೋಲಕ್ಕೆ ಉಂಟಾಗಿರುವ ಹೊಸಸ್ವರೂಪದ ಮಹತ್ವ ಹಾಗೂ ಈ ಅಧ್ಯಯನದ ಶಿಸ್ತಿಗೆ ಲಭಿಸಿದ ಶಾಸ್ತ್ರಗೌರವ** ಲೇಖಕರಿಗೆ ಸಂತಸ ತಂದಿದೆ.



ಈ ಕೃತಿಯೊಳಗೆ 9 ನಕಾಶೆಗಳೂ 22 ಪ್ರಕರಣಗಳೂ ಇವೆ. ಆ 22 ಅಧ್ಯಾಯ ಗಳು ಇಂತಿವೆ : 1. ಮೇರೆಗಳು, ಆಕಾರ, ಕ್ಷೇತ್ರ, ದಂಡೆಯ ಪ್ರದೇಶ, ದ್ವೀಪಗಳು 2. ಪ್ರಾಕೃತಿಕ ಸ್ವರೂಪ, ಪರ್ವತಗಳು 3. ಪ್ರಾಕೃತಿಕ ಸ್ವರೂಪ, ತಪ್ಪಲುಗಳೂ ಬೈಲುಗಳೂ 4. ಹವೆ ಮಳೆಗಳು 5. ಹೊಳೆಗಳೂ ಸರೋವರಗಳೂ 6. ಭೂಮಿಯ ಗುಣ, ಕಾಲಿವೆಗಳು, ಬರ 7. ಹುಟ್ಟುವಳಿ 8. ಉದ್ಯೋಗ, ಕೈಗಾರಿಕೆ, ಕಲಾಕೌಶಲಗಳು 9. ಮಾರ್ಗಗಳು 10. ವ್ಯಾಪಾರ 11. ಇತಿಹಾಸ, ಜನರು, ಜನವಸತಿ, ಧರ್ಮ, ಭಾಷೆ, ಶಿಕ್ಷಣ 12. ಸರಕಾರ, ರಾಜಕೀಯ ವಿಭಾಗಗಳು 13. ಪಂಜಾಬ 14. ಸಂಯುಕ್ತ ಪ್ರಾಂತಗಳು 16. ಬಿಹಾರ, ಛೋಟಾನಾಗಪೂರ, ಓಡಿಸಾ 17. ಅಸಾಮ ಪ್ರಾಂತ 18. ಮುಂಬಯಿ ಇಲಾಖೆ 19. ಮದ್ರಾಸ ಇಲಾಖೆ 20. ಮಧ್ಯಪ್ರಾಂತಗಳು.

21. ದೇಶೀಯ ಸಂಸ್ಥಾನಗಳು 22. ಸರಹದ್ದಿನ ಪ್ರಾಂತಗಳು. ಕೊನೆಯಲ್ಲಿ 20 ಮಾದರಿ ಪ್ರಶ್ನೆಗಳು ಹಾಗೂ ಹಿಂದೂಸ್ತಾನದ ಅಂದಿನ ರಾಜಕೀಯ ವಿಭಾಗಗಳು, ಕ್ಷೇತ್ರ, ಜನಸಂಖ್ಯೆ, ಮುಖ್ಯ ಅಧಿಕಾರ ಹುದ್ದೆಗಳ ಪಟ್ಟಿಯ ಕೋಷ್ಟಕವೊಂದನ್ನು ನೀಡಲಾಗಿದೆ. ಜೊತೆಗೆ ನಮ್ಮ ದೇಶದಿಂದ ರಫ್ತಾಗುತ್ತಿದ್ದ ಮೊತ್ತ ಪೌಂಡ್‌ಗಳಲ್ಲಿ ಹಾಗೂ ರಫ್ತು ಮಾಡುತ್ತಿದ್ದ ದೇಶ ಇವುಗಳ ಒಂದು ಕೋಷ್ಟಕವಿದೆ. ಈ ಎಲ್ಲ ಭಾಗಗಳಲ್ಲಿ ಒಟ್ಟು 273 ಘಟಕಾಂಶಗಳಲ್ಲಿ ಹಿಂದೂಸ್ತಾನದ ಭೂಗೋಲದ ಬಗ್ಗೆ ಒಂದು ಸ್ಪಷ್ಟ ಚಿತ್ರವನ್ನು ನೀಡಲು **ಮಗದಾಳರು** ಪ್ರಾಮಾಣಿಕವಾಗಿ ಪ್ರಯತ್ನಪಟ್ಟಿರುತ್ತಾರೆ. ಜೊತೆಗೆ ಕೃತಿಯೊಳಗೆ ಆ ಕಾಲದಲ್ಲಿ ಪ್ರಚುರವಾಗಿದ್ದ **1903ರಲ್ಲಿ ಕೆ. ರಾಮಸ್ವಮೈಯ್ಯಂಗಾರ್ಯ** ಅವರಿಂದ **ರಚಿತವಾದ ಲಘು ವ್ಯಾಕರಣ**, ಭೂಗೋಲ ವಿದ್ಯಾ-ಭಾಗ 3, **ಮುಂಬಯಿ ಇಲಾಖೆಯ ಭೂಗೋಲ, ಪದ್ಮನಾಭ ಶಂಕರ ಚಂದಾವರಕರ ವಿರಚಿತ ಹೊಸಪದ್ಧತಿಯ ಭೂಮಿತಿಯು (ಭಾಗ-1) (1907), ಏಶಿಯಾದ ಭೂಗೋಲ, ಚಂದಾವರ ವಿರಚಿತ ಜಮಾ ಖರ್ಚು, ಚಂದಾವರ ವಿರಚಿತ ಅಂಕಗಣಿತ-ಭಾಗ 1, ಹಿಂದೂಸ್ತಾನದ ನಿವಾಸಿ, ಕಳೆದ 50 ವರ್ಷಗಳಲ್ಲಿ ಹಿಂದೂಸ್ತಾನದ ಆಡಳಿತದಲ್ಲಾದ ಬದಲಾವಣೆ ಹಾಗೂ ಮಾರ್ಸ್‌ಡನ್ ವಿರಚಿತ ಇತಿಹಾಸ** ಎನ್ನುವ ಮಹತ್ವದ ಕನ್ನಡದ ಕೃತಿಗಳ ಉಲ್ಲೇಖವಿದೆ. ಆದರೆ ಈಗ ಈ ಕೃತಿಗಳಾವುವೂ ಲಭ್ಯವಿಲ್ಲ. ಕೆಲವೆಡೆ ಅಡಿಟಿಪ್ಪಣಿಗಳಲ್ಲಿ ವಿಶೇಷ ವಿಷಯಗಳನ್ನು ನಮೂದಿಸಲಾಗಿರುತ್ತದೆ ಹಾಗೂ **ಟೀಪೂ** ಎಂಬ ಶಿರ್ಷಿಕೆಯಲ್ಲಿ ಹೆಚ್ಚಿನ ಮಾಹಿತಿಗಳನ್ನು ನೀಡಲಾಗಿದೆ. ಉದಾಹರಣೆಗೆ ಹೊಳೆಗಳೂ, ಸರೋವರಗಳೂ ಎಂಬ ಐದನೆಯ ಪ್ರಕರಣದಲ್ಲಿ ಅಡಿಟಿಪ್ಪಣಿಯಲ್ಲಿ **ಎತ್ತರದಿಂದ ಇಳಿದು ಬರುವಾಗ ನದಿಗಳ ಗತಿಯು ಯಾವದೊಂದು ಕಾರಣದಿಂದ ಸಾವಕಾಶವಾದರೆ, ಅಲ್ಲಿ ಒಂದು ಸರೋವರವು ಆಗುವದು.. ನದಿಯು ತಂದ ಉಸುಕೂ ಮಣ್ಣೂ ಅಲ್ಲಿ ಕಲೆ ಬೀಳುವವು. ಕಾಲಾಂತರದಲ್ಲಿ ಅದು ತುಂಬಿಕೊಂಡು ವಿಶಾಲವಾದ ಕೊಳ್ಳವಾಗುವದು (ಬೈಲುಭೂಮಿ). ಹಿಮಾಲಯದಲ್ಲಿ ಈ ರೀತಿಯಿಂದಾದ ಕೊಳ್ಳಗಳು ಹಲವಿರುವವು. ಪ್ರಸಿದ್ಧವಾದ ಕಾಶ್ಮೀರದ ಕೊಳ್ಳವು ಇದರಲ್ಲಿ ಒಂದಾಗಿದೆ** ಎನ್ನುವ ಮಹತ್ವದ ಮಾಹಿತಿಯನ್ನು ಗಮನಿಸಬಹುದು.

ಈ ಪುಸ್ತಕದಲ್ಲಿ 5000ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ವಾಸಸ್ಥಳಗಳನ್ನು ಪಟ್ಟಣಗಳೆಂದು ಪರಿಭಾವಿಸಲಾಗಿದೆ. 1911ರ ಜನಗಣತಿಯ ರೀತ್ಯಾ ಅಂದಿನ **ಬೆಂಗಳೂರಿನ** ಜನಸಂಖ್ಯೆ 1,89,000, ಒಂದು ಲಕ್ಷದ ಎಂಬತ್ತೊಂಬತ್ತು ಸಾವಿರ. ಅಂದು ಕನ್ನಡ ಮಾತನ್ನಾಡುವವರ ಜನಸಂಖ್ಯೆ ಒಂದು ಕೋಟಿ. 21ನೆಯ ಪ್ರಕರಣ ದೇಶೀಯ ಸಂಸ್ಥಾನಗಳು ಎಂಬ ಶೀರ್ಷಿಕೆಯ ಅಡಿಯಲ್ಲಿ 258 ಹಾಗೂ 259ನೆಯ ಘಟಕಾಂಶಗಳಾಗಿ ಮೈಸೂರು ಸಂಸ್ಥಾನ, **ಬೆಂಗಳೂರು,** ಶ್ರೀರಂಗಪಟ್ಟಣ ಹಾಗೂ ಕೋಲಾರಗಳನ್ನು ಕುರಿತ ಭೌಗೋಲಿಕ ಅಂಶಗಳನ್ನು ನಿರೂಪಿಸಲಾಗಿದೆ. ಇವರು ನೀಡಿರುವ ಹೋಲಿಕೆಗಳು ಬಹಳ ಕುತೂಹಲಕರವಾಗಿರುತ್ತವೆ. ಆರಂಭದಲ್ಲಿ ಹಿಂದೂಸ್ತಾನವನ್ನು ಕುರಿತು ವಿವರಿಸಿರುವಾಗ **"ಹಿಂದೂಸ್ತಾನದ** ನಕಾಶವನ್ನು

ನೋಡಿದರೆ ಗಾಳೀಪಟದ ನೆನಪಾಗುವದು. ಇದು ತ್ರಿಕೋಣಾಕೃತಿಯಲ್ಲಿರುವದು. ಹಿಮಾಲಯವು ತಳರೇಖೆಯು. ಶಿರೋಬಿಂದುವಿನಲ್ಲಿ ಕನ್ಯಾಕುಮಾರೀ ಭೂಶಿರವು ಹಾದಿರುವದು." ಎಂದು ಅತ್ಯಂತ ಸಮಂಜಸವಾಗಿ ಹೇಳಿರುತ್ತಾರೆ. ಸರಹದ್ದಿನ ಪ್ರಾಂತಗಳು ಶಿರ್ಷಿಕೆಯಡಿ ಹಿಂದೂಸ್ತಾನದ ಅಂದಿನ ಎಲ್ಲ ಎಲ್ಲೆ ಪ್ರದೇಶಗಳಾದ **ಬಲೂಚಿಸ್ತಾನ, ಕ್ವೆಟಾ, ತುರ್ಕಸ್ತಾನ, ಅಫಘನಿಸ್ತಾನ, ನೇಪಾಳ, ಭೂತಾನ** ಹಾಗೂ **ಸಿಕ್ಕಿಮ** ಪ್ರಾಂತಗಳನ್ನು ಕುರಿತ ಮಹತ್ವದ ಮಾಹಿತಿಗಳಿವೆ.

**ಹಿಂದೂಸ್ತಾನದ** ರಾಜಕೀಯ ವಿಭಾಗಗಳು, ಕ್ಷೇತ್ರ, ಜನಸಂಖ್ಯೆ, **ಮುಖ್ಯ ಅಧಿಕಾರಿಗಳು** ಎಂಬ ಕೋಷ್ಟಕದಲ್ಲಿ **ಹಿಂದೂಸ್ತಾನದಲ್ಲಿ** ಬರುವ 10 ಬ್ರಿಟಿಷ್ ಪ್ರಾಂತಗಳನ್ನೂ 14 ಸಂಸ್ಥಾನಗಳನ್ನೂ ಅನೇಕ ಮಾಹಿತಿಗಳೊಂದಿಗೆ ವಿವರಿಸಿರುತ್ತಾರೆ. ಸಂಸ್ಥಾನಗಳಾದ ಮೈಸೂರು, ಕಾಶ್ಮೀರಗಳಿಗೆ **ಮಹಾರಾಜರು** ಮುಖ್ಯ ಅಧಿಕಾರಿಗಳಾಗಿದ್ದರೆ ಹೈದರಾಬಾದ್ ಸಂಸ್ಥಾನಕ್ಕೆ **ನಿಜಾಮ** ಮುಖ್ಯಾಧಿಕಾರಿ ಮತ್ತು ಬರೋಡಕ್ಕೆ ಮುಖ್ಯಾಧಿಕಾರಿ **ಗಾಯಕವಾಡ**. ಹಾಗೆಯೇ ರಜಪುತಾಸ್ತಾನ ಹಾಗೂ ಮಧ್ಯ ಹಿಂದೂಸ್ತಾನ ಸಂಸ್ಥಾನಕ್ಕೆ **ಏಜಂಟ ಜನರಲ್** ಮುಖ್ಯಾಧಿಕಾರಿಯಾದರೆ ಛೋಟಾನಾಗಪುರ ಹಾಗೂ ಪಂಜಾಬ ಬ್ರಿಟಿಷ್ ಪ್ರಾಂತಗಳಿಗೆ **ಲೆಫ್ಟಿನೆಂಟ್ ಗವರ್ನರ** ಮುಖ್ಯಾಧಿಕಾರಿ ಹಾಗೂ ಅಸ್ಸಾಮ ಬ್ರಿಟಿಶ್ ಪ್ರಾಂತಕ್ಕೆ **ಚೀಫ್‌ಕಮಿಶನರ** ಮುಖ್ಯಾಧಿಕಾರಿ. **ಬೆಂಗಳೂರನ್ನು** ಕುರಿತು ಈ ಪುಸ್ತಕದಲ್ಲಿರುವ ಮಾಹಿತಿ ಇಂತಿದೆ : **" 3100 ಫೂಟು ಎತ್ತರದಲ್ಲಿರುವುದು. ಮೈಸೂರು ಸರಕಾರದ ಸ್ಥಳ. ನೆರೆಹೊರೆಯಲ್ಲಿ ಬ್ರಿಟಿಶ ಸೈನ್ಯದ ಛಾವಣಿಯು ದಕ್ಷಿಣ ಹಿಂದೂಸ್ತಾನದಲ್ಲಿ ಹೆಸರಾದದ್ದು. ಮಹಾರಾಜರ ಅರಮನೆಯೂ ಊರಿನ ಹೊರಗೆ ಹೊಸದಾಗಿ ಆದ ಕಟ್ಟಡಗಳೂ ನೋಡತಕ್ಕವಾಗಿವೆ. ನೆರೆಯಲ್ಲಿ ಇಮಾರತಿಯ ಕಲ್ಲುಗಳು ದೊರೆಯುತ್ತವೆ. ಈ ಹೊಸ ಭಾಗದಲ್ಲಿ ವಿದ್ಯುತ್ತಿನ ದೀಪಗಳನ್ನು ಹಚ್ಚುವದರಿಂದ ರಾತ್ರಿಯ ನೋಟವು ರಮಣೀಯವಾಗಿರುವದು. ಎತ್ತರದಲ್ಲಿರುವದರಿಂದ ಇದರ ಹವೆಯು ಸೊಗಸಾಗಿರುವದು. ಇಲ್ಲಿಂದ ಮೂರು ನಾಲ್ಕು ರೇಲ್‌ಮಾರ್ಗಗಳು ನಾಲ್ಕೂ ಕಡೆಗೆ ಹೋಗಿರುವವು. ಆದ್ದರಿಂದ ವ್ಯಾಪಾರದ ಸ್ಥಳ. ನೂಲಿನ ಹಾಗೂ ಉಣ್ಣೆಯ ಕಾರಖಾನೆಗಳಿರುತ್ತವೆ. ಇಲ್ಲಿ ತಯಾರಾಗುವ ಜಮಖಾನೆಗೂ ರತ್ನಗಂಬಳಿಗಳಿಗೂ ಈ ಪ್ರಾಂತದಲ್ಲಿ ಹೆಸರಾಗಿವೆ. ಮೈಸೂರ ಪ್ರಾಂತದಲ್ಲಿ ವಿದ್ಯಾಭಿವೃದ್ಧಿಯ ಮುಖ್ಯಸ್ಥಳ. ವರ್ಷದ ಮಳೆ ಸುಮಾರು 35 ಇಂಚು."** ಇಂತಹ ಹಲವಾರು ಅಪೂರ್ವ ಮಾಹಿತಿಗಳು ಈ ಕೃತಿಯಲ್ಲಿ ದೊರೆಯುತ್ತದೆ. ಸುಮಾರು ಒಂದು ಶತಮಾನದ ಹಿಂದೆ ಪ್ರಕಟವಾಗಿರುವ ಈ ಭೂಗೋಲದ ಕೃತಿಯು ತನ್ನ ಕಾಲದ ಮಟ್ಟಿಗೆ ಆ ಕ್ಷೇತ್ರದಲ್ಲಿ ಒಂದು ವಿದ್ವತ್ಕೃತಿಯೂ ಸ್ವಯಂಪೂರ್ಣ ಕೃತಿಯೂ ಆಗಿದ್ದು ಕನ್ನಡ ಪುಸ್ತಕ ಪ್ರಪಂಚಕ್ಕೆ ಒಂದು ಅಮೂಲ್ಯ ಕೊಡುಗೆಯಾಗಿದೆ.





ಪ್ರೊಫೆಸರ್ ಕೆ. ಎಸ್. ಮಧುಸೂದನ ಅವರು ಕನ್ನಡ ಪ್ರಾಚೀನ ವಾಙ್ಮಯ ಜೀವಂತ ಪರಂಪರೆಗೂ ಇಂದಿನ ಅನುದಿನದ ಸ್ಥಿತ್ಯಂತರೀ ಕನ್ನಡ ಸಾಹಿತ್ಯಲೋಕಕ ಸೇತುವೆಯ ಹಾಗೆ ಇರುವ ಕೆಲವೇ ವಿದ್ವಾಂಸರ ಸಾಲಿಗೆ ಸೇರಿದ್ದಾರೆ. ಅವ ಪ್ರಜಾವಾಣಿ ಪತ್ರಿಕೆಯ ಸಾಪ್ತಾಹಿಕ ಪುರವಣಿಗೆಗಾಗಿ 'ಹಳತು ಹೊನ್ನು' ಹೆಸರಿನಿ ಬರೆಯುತ್ತಾ ಬರುತ್ತಿರುವ ಅಂಕಣ ಬರಹಗಳ ಮೊದಲನೇ ಗುಚ್ಛ, ಇದು ಸ್ವಾತಂ ಪೂರ್ವದಲ್ಲಿ ಒಂದು ಶತಮಾನದ ಹಿಂದಿನಿಂದಲೂ ಆಧುನಿಕ ಕನ್ನಡದ ಪ್ರಕಟವಾಗುತ್ತಿರುವ ಸಾಹಿತ್ಯದ ವೈವಿಧ್ಯಮಯ ಮುಖವನ್ನು ಪರಿಚಯಿಸುವ ಲೇಖ ಮಾಲೆ.

ಸುಮಾರು 1830ರಿಂದ 1930ರ ನಡುವೆ ಪ್ರಕಟವಾಗಿರುವ, ಈ ಹಳೆಯದೆನ್ನಿಸಿ ಮೂಲೆಗುಂಪಾಗಿ, ಜನರ ಮನಸ್ಸಿನಲ್ಲಿ ವಿಸ್ಮೃತಿಗೆ ಒಳಗಾಗಿರು ಅಪರೂಪದ ಗ್ರಂಥಗಳನ್ನು ಮಧುಸೂದನ ಅವರು ತುಂಬ ಆಸಕ್ತಿ, ಶ್ರದ್ಧೆಯಿಂ ಯುವಕರನ್ನೂ ಮೀರಿಸಬಲ್ಲ ಉತ್ಸಾಹ, ಕುತೂಹಲಗಳಿಂದ ಸಂಗ್ರಹಿಸಿ, ಅಧ್ಯಯ ಮಾಡಿ, ಅವುಗಳನ್ನು ನೇರವೂ, ಸರಳವೂ, ವಸ್ತುನಿಷ್ಠವೂ ಆದ ರೀತಿಯಲ್ಲಿ ಓದುಗರಿ ಪರಿಚಯಿಸುತ್ತಾ ಬಂದಿರುತ್ತಾರೆ. ಈ ರೀತಿ ಪರಿಚಯ ಪಡೆದ ಗ್ರಂಥಗಳ ವಸ್ತು, ವಿಷಂ ವಿಚಾರಗಳು ಯಾರಿಗೂ ಬೆರಗು ಹುಟ್ಟಿಸುವಷ್ಟು ವೈವಿಧ್ಯಪೂರ್ಣವಾಗಿವೆ. ಕನ್ನಡ ನು ಅದರದೇ ಉಪನುಡಿಗಳು, ನುಡಿಗಟ್ಟುಗಳು, ವಿವಿಧ ರೀತಿಯ ಶಬ್ಧಕೋಶಗಳ ಛಂದೋರೂಪಗಳು, ವ್ಯಾಕರಣ ಮುಂತಾದ ಭಾಷಾತ್ಮಕ ವಿಷಯಗಳಲ್ಲದೆ ಖಗೋಳೀಯ, ಗಣಿತ ಶಾಸ್ತ್ರ, ಮನೋವಿಜ್ಞಾನ, ವನೌಷಧಿ ಸಸ್ಯಗಳಂಥ ಬಗೆ ಬ ರೀತಿಯ ಜ್ಞಾನ ಸಂಪತ್ತನ್ನು ಈ ಹಳೆಯ ಪುಸ್ತಕಗಳು ಒದಗಿಸುವುದನ್ನು ಮಧಸೂದ ಪರಿಚಯಿಸಿದ್ದಾರೆ.

ಸಾಹಿತ್ಯದ ಅಧ್ಯಯನ, ಸಂಶೋಧನೆ, ವಿಮರ್ಶೆಗಳ ಯಾವ ಚರ್ಚೆಗಳು ಜಾತಿ, ವರ್ಗ, ಲಿಂಗರಾಜಕೀಯ ಮಾಲಿನ್ಯವಿಲ್ಲದೆ ನಡೆಯಲಾರವು ಎಂಬಂತಿರುವ ಈ ದಿನಗಳಲ್ಲಿ ಕೇವಲ ನೂರು ವರ್ಷಗಳ ಹಿಂದೆ ಪರಿಶುದ್ಧವೂ, ಉದಾರವೂ, ಆ ರೀತಿಯಲ್ಲಿ ಚಿಂತಿಸಬಲ್ಲ ಬುದ್ಧಜೀವಿ ಕನ್ನಡಿಗರೂ ಇದ್ದರು ಎಂಬುದೆ ಆಶ್ಚರ್ಯ ಹುಟ್ಟಿಸಬಲ್ಲದು. ಈ ಸಾಂಸ್ಕೃತಿಕ ವಿಸ್ಮಯಕ್ಕೆ ನಮ್ಮನ ತೆರೆಯಿಸುತ್ತಿರುವ ಮಧಸೂದನರಿಗೆ ನಿಜವಾಗಿಯೂ ಕನ್ನಡಿಗರ ಆಭಾರಿಯಾಗಬೇಕು.

ಡಾ. ಬಿ. ಎನ್. ಸುಮಿತ್ರಾಬಾಯಿ

ಚಿತ್ರ–ವಿನ್ಯಾಸ: ಅಜಾರ





ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯
ದೂರವಾಣಿ : ೨೬೬೧೫೮೭೭, ೨೬೬೭೬೭೭೩